


ನೆಮ್ಮದಿಯ ನಾಳೆ ನಮ್ಮದು

# ಹೊಸತು

ಡಿಸೆಂಬರ್ ೨೦೦೮

ಬೆಲೆ : ರೂ. ೧೨

ಂನೇ
ವರ್ಷ

ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ
राष्ट्रीय ग्रामीण स्वास्थ्य मिशन
(2005-2012)

# ಜನನಿ ಸುರಕ್ಷಾ ಯೋಜನೆ

ಕರ್ನಾಟಕ ಸರ್ಕಾರ



ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ ಕಾರ್ಯಕ್ರಮದ ಅಡಿಯಲ್ಲಿ ಸೆಪ್ಟಂಬರ್ 2005ನೇ ಸಾಲಿನಿಂದ ಕರ್ನಾಟಕದಲ್ಲಿ ಅನುಷ್ಠಾನಗೊಂಡಿರುವ ಜನನಿ ಸುರಕ್ಷ ಯೋಜನೆಯನ್ನು 2008ನೇ ಸಾಲಿನಲ್ಲಿ ಪ್ರಾರಂಭಿಸಿದ ತಾಯಿ ಭಾಗ್ಯ ಯೋಜನೆಯ ಒಂದು ಅಂಗವಾಗಿ ಅನುಷ್ಠಾನಗೊಳಿಸಲಾಗುತ್ತಿದೆ. ಈ ಕಾರ್ಯಕ್ರಮದ ಉದ್ದೇಶವು ತಾಯಿ ಮತ್ತು ಶಿಶು ಮರಣ ಪ್ರಾಣವನ್ನು ಕಡಿಮೆಗೊಳಿಸುವುದು. ಎಲ್ಲಾ ಗರ್ಭಿಣಿಯರಿಗೆ ವೈದ್ಯಕೀಯ ಸೇವೆ ನೀಡುವುದು, ವೈದ್ಯ ತಪಾಸಣೆಗೆ ಗರ್ಭಿಣಿಗೆ ಉತ್ತೇಜನ, ಆಸ್ಪತ್ರೆಯಲ್ಲಿ ಹೆರಿಗೆಗೆ ಪ್ರೋತ್ಸಾಹ, ಕಷ್ಟಕರ ಹೆರಿಗೆ ಸಂದರ್ಭದಲ್ಲಿ ತುರ್ತು ಸಿಜೇರಿಯನ್ ಶಸ್ತ್ರ ಚಿಕಿತ್ಸೆಗೆ ಅವಕಾಶ ಮತ್ತು ಖಾಸಗಿ ಸಂಸ್ಥೆಗಳ ಪಾಲುದಾರಿಕೆಗೆ ಪ್ರೋತ್ಸಾಹ ನೀಡುವುದಾಗಿದೆ. ಸರ್ಕಾರಿ ಸಂಸ್ಥೆಗಳಲ್ಲಿ ಅಲ್ಲದೇ ಅಂಗೀಕೃತವಾದ ನೋಂದಾಯಿತ ಖಾಸಗಿ ಸಂಸ್ಥೆಗಳಲ್ಲಿ ಹೆರಿಗೆ ಆದಾಗ ಕೂಡ ಈ ಸೌಲಭ್ಯ ಲಭ್ಯವಿರುತ್ತದೆ.

1. ಮನೆಯಲ್ಲಿ ಹೆರಿಗೆ ಆದರೆ - ರೂ. 500.00
2. ಸಂಸ್ಥೆಗಳಲ್ಲಿ ಹೆರಿಗೆ ಆದರೆ
   - ನಗರ ಪ್ರದೇಶದಲ್ಲಿ - ರೂ. 600.00
   - ಗ್ರಾಮೀಣ ಪ್ರದೇಶದಲ್ಲಿ - ರೂ. 700.00
3. ಸಿಸೇರಿಯನ್ ಶಸ್ತ್ರ ಚಿಕಿತ್ಸೆ ಆದಲ್ಲಿ - ರೂ. 1500.00 ನೀಡಲಾಗುತ್ತದೆ.

**ಈ ಕೆಳಗಿನ ಅರ್ಹತೆಯುಳ್ಳ ಫಲಾನುಭವಿಗಳಿಗೆ ಈ ಸೌಲಭ್ಯ ಲಭ್ಯವಿರುತ್ತದೆ.**

1. ಮನೆ/ ಉಪಕೇಂದ್ರ/ಸರ್ಕಾರಿ ಆಸ್ಪತ್ರೆ/ನೋಂದಾಯಿತ ಖಾಸಗಿ ಆಸ್ಪತ್ರೆಗಳಲ್ಲಿ ಸಾಮಾನ್ಯ ವಾರ್ಡಿಗೆ ದಾಖಲಾಗಿರುವ ಮಹಿಳೆಯ ಬಡತನ ರೇಖೆಗಿಂತ ಕೆಳಗಿರುವ ಮಹಿಳೆಯಾಗಿರಬೇಕು.
2. ಪ್ರಸ್ತುತ ಹೆರಿಗೆ ಮೊದಲನೇ ಅಥವಾ ಎರಡನೇ ಹೆರಿಗೆ ಆಗಿರಬೇಕು.
3. ಮಹಿಳೆ 19 ವರ್ಷಕ್ಕಿಂತ ಮೇಲ್ಪಟ್ಟಿರಬೇಕು ಹಾಗೂ 3 ಬಾರಿ ವೈದ್ಯರಿಂದ ತಪಾಸಣೆ ಮಾಡಿಸಿಕೊಂಡು ಕಬ್ಬಿಣಾಂಶದ ಮಾತ್ರೆ ಮತ್ತು ಟಿ.ಟಿ. ಚುಚ್ಚುಮದ್ದನ್ನು ಪಡೆದಿರಬೇಕು.
4. ಬಡತನ ರೇಖೆಗಿಂತ ಮೇಲ್ಪಟ್ಟ ಆದರೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಮಹಿಳೆಯರು ಸರ್ಕಾರಿ/ಖಾಸಗಿ ನೋಂದಾಯಿತ ಆಸ್ಪತ್ರೆಗಳ ಸಾಮಾನ್ಯ ವಾರ್ಡಿಗೆ ದಾಖಲಾಗಿದ್ದೂ ಈ ಸೌಲಭ್ಯಕ್ಕೆ ಅರ್ಹರಿರುತ್ತಾರೆ.

(ಹೆಚ್ಚಿನ ವಿವರಗಳಿಗೆ ಹತ್ತಿರದ ಆರೋಗ್ಯ ಕೇಂದ್ರವನ್ನು ಸಂಪರ್ಕಿಸಿ)

**ಸಂತಸದ ಜೀವನಕ್ಕೆ ಎರಡು ಮಕ್ಕಳ ನಡುವೆ ಸೂಕ್ತ ಅಂತರವಿರಲಿ**

ಪ್ರಕಟಣೆ : **ಯೋಜನಾ ನಿರ್ದೇಶಕರು (ಆರ್. ಸಿ. ಹೆಚ್.)**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಶ್ರೀಹರಿ, ಆಚಾರ್ಯ, ಬಿ. ವಿಲ್ಸನ್, ಕಮಲಂ ಅರಸು
ರಾಂಚಂದ್ರ ಕೊಪ್ಪಲು
ಮುಖಚಿತ್ರ : 'ಭಾರತರತ್ನ' ಪಂಡಿತ್ ಭೀಮಸೇನ ಜೋಶಿ
ವರ್ಣಚಿತ್ರ : ಸೌಜನ್ಯ : ವಿಜಯ ಕರ್ನಾಟಕ
ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ಪಂಡಿತ ಭೀಮಸೇನ ಜೋಶಿಯವರೀಗ 'ಭಾರತ ರತ್ನ'. ಅವರಿಗೆ 'ಹೊಸತು' ಗೌರವಪೂರ್ವಕ ಅಭಿನಂದನೆ ಸಲ್ಲಿಸುತ್ತದೆ. ಪ್ರಸ್ತುತ ಸಂಚಿಕೆಯಲ್ಲಿ ಶ್ರೀ. ವಿನಾಯಕ ಕುಲಕರ್ಣಿಯವರು ಅವರನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ. ಖ್ಯಾತಿ ಮತ್ತು ಪ್ರಶಸ್ತಿಗಳ ವ್ಯಾಮೋಹವಿಲ್ಲದ ಜೋಶಿಯವರಿಗೆ ಥಟಕ್ಕನೆ 'ರತ್ನ' ಪ್ರಶಸ್ತಿ ಘೋಷಿಸಿದ್ದು ಕೇಂದ್ರ ಸರ್ಕಾರದ ಮತ್ತು ಕಾಂಗ್ರೆಸ್ಸಿನ ಅನವಶ್ಯಕ ರಾಜಕೀಯವೆಂದು ತೋರುತ್ತದೆ. ಮಾನ್ಯ ಯಡಿಯೂರಪ್ಪನವರು ಅವರ ಪ್ರಶಸ್ತ ಸಲಹೆಗಳನ್ನು ಬಹಿರಂಗಗೊಳಿಸಿ ಸಿದ್ದಗಂಗೆಯ ಸ್ವಾಮಿಗಳಿಗೆ, ಶ್ರೀ ಆರ್. ಕೆ. ಶ್ರೀಕಂಠನ್ ಅವರಿಗೆ ಮತ್ತಿತ್ತರರಿಗೆ ಮುಜುಗರ ತಂದಿಟ್ಟರು. ಅವರಿಗೆಲ್ಲ ಪದ್ಮ ಪ್ರಶಸ್ತಿಗಳು ಸಿಗಲಿ, ಸಿಗದಿರಲಿ, ತಾವು ಬುದ್ಧಿವಂತರೆಂದು ಮುಖ್ಯಮಂತ್ರಿಗಳು ಭಾವಿಸಿಕೊಂಡುಬಿಟ್ಟರು. ಈ ಕೀಳು ರಾಜಕೀಯ ದಾಳಕ್ಕೆ ಪ್ರತಿಯಾಗಿ ಕೇಂದ್ರ ಸರ್ಕಾರವು ಅನಿರೀಕ್ಷಿತವಾಗಿ ಸಂಗೀತ ದಿಗ್ಗಜ ಭೀಮಸೇನರಿಗೆ 'ರತ್ನ' ಪ್ರಶಸ್ತಿ ಘೋಷಿಸಿತು. ಅವರು ಪ್ರಶಸ್ತಿಗೆ ಅರ್ಹರೆಂಬುದನ್ನು ಯಾರೂ ಪ್ರಶ್ನಿಸಿಲ್ಲ, ಆದರೆ ಅವರನ್ನು ಯಡಿಯೂರಪ್ಪ - ಕಾಂಗ್ರೆಸ್ ಇಬ್ಬರೂ ಸೇರಿ ತಮ್ಮ ರಾಜಕೀಯ ಅನೀತಿಗೆ ಬಳಸಿಕೊಂಡಿದ್ದು ಯೋಗ್ಯವಲ್ಲ. ಒಬ್ಬ ಕಲಾವಿದನಿಗೆ ನೀಡುವ ಮರ್ಯಾದೆಯೇ ಇದು ? ಏನೇ ಇರಲಿ, ಮತ್ತೊಮ್ಮೆ ಹರ್ಷದಿಂದ ಭೀಮಸೇನ ಜೋಶಿಯವರಿಗೆ 'ಹೊಸತು' ತಲೆಬಾಗುತ್ತದೆ.

*  *  *

ಅಮೆರಿಕಾಕ್ಕೆ ತೆರಳುವ ಮುನ್ನ ಮತ್ತು ಅಲ್ಲಿಂದ ಮರಳಿದ ನಂತರ ಪ್ರಧಾನಿ ಮನಮೋಹನ ಸಿಂಗ್ ಅವರು ತಮ್ಮ ಅರ್ಥಶಾಸ್ತ್ರ ವೈಶಾರದ್ಯವನ್ನು ಪ್ರಕಟಿಸಿದ್ದಾರೆ. ಜಿ-೨೦ರ ಸಭೆಯಲ್ಲಿ ಜಾರ್ಜ್ ಬುಷ್ ಇದಕ್ಕೆ ವ್ಯತಿರಿಕ್ತವಾಗಿ ತನ್ನ ಅರ್ಥಶಾಸ್ತ್ರದ ಮೂರ್ಖತನವನ್ನು ವಿಶ್ವಕ್ಕೆ ಸಾರಿದ್ದಾನೆ. ಹಣಕಾಸು ಬಿಕ್ಕಟ್ಟು ಮತ್ತು ಅದರಿಂದುಂಟಾಗಿರುವ ಹಿಂಜರಿತವನ್ನು ನಗಣ್ಯ ವಿಷಯವೆಂದು ತಿಳಿಸಿ ಈ ಬೆಳವಣಿಗೆಯು ''ಬಂಡವಾಳಶಾಹಿ ವ್ಯವಸ್ಥೆಯ ಮುಕ್ತ ಮಾರುಕಟ್ಟೆ ಸಿದ್ಧಾಂತಕ್ಕೆ ಎಳ್ಳಷ್ಟು ಬಾಧೆಯನ್ನೂ ಉಂಟುಮಾಡುವುದಿಲ್ಲ; ಬಂಡವಾಳ ಶಾಹಿಯು ಆರ್ಥಿಕತೆಯ ಏಕೈಕ ಸಾರ್ವಭೌಮ ವ್ಯವಸ್ಥೆ'' ಎಂದು ಬೆನ್ನುತಟ್ಟಿಕೊಂಡಿದ್ದಾರೆ ಈ ಮಹಾಶಯ. ಇದೆಷ್ಟು ಅರ್ಥರಹಿತ, ಜನವಿರೋಧಿ, ಬೇಜವಾಬ್ದಾರಿ ತಿಳಿವಳಿಕೆ ಎಂಬುದನ್ನು ಪ್ರಸ್ತುತ ಸಂಚಿಕೆಯಲ್ಲಿ ಡಾ|| ಕೆ. ಬದರಿನಾಥ್ ಮತ್ತು ಡಾ|| ಡಿ. ನರಸಿಂಹ ರೆಡ್ಡಿ ಸೋದಾಹರಣವಾಗಿ ವಿಶ್ಲೇಷಿಸಿದ್ದಾರೆ. ಈ ಸಂಚಿಕೆಗೆ ಆಹ್ವಾನಿತ ಸಂಪಾದಕೀಯ ನೀಡಿರುವ ಡಾ|| ಬದರಿನಾಥ್ ಅಮೆರಿಕಾದ ಮಿಶಿಗನ್ ರಾಜ್ಯದ ಕೆಟರಿಂಗ್ ವಿಶ್ವವಿದ್ಯಾನಿಲಯದಲ್ಲಿ ಸಮಾಜಶಾಸ್ತ್ರ ಪ್ರಾಧ್ಯಾಪಕರು, ಹಲವು ದೇಶಗಳ ವಿಶ್ವವಿದ್ಯಾನಿಲಯಗಳಲ್ಲಿ ಸಂದರ್ಶಕ ಪ್ರಾಧ್ಯಾಪಕರು. ಈ ತಿಂಗಳು ಅವರು ಚೀಣಾದ ಮೂರು ವಿಶ್ವವಿದ್ಯಾನಿಲಯಗಳಲ್ಲಿ ವಿಶೇಷ ಉಪನ್ಯಾಸಗಳನ್ನು ನೀಡಲು ತೆರಳಿದ್ದಾರೆ. ಅಮೆರಿಕಾದಲ್ಲಿನ ಬೆಳವಣಿಗೆಗಳನ್ನು ನೇರವಾಗಿ ನೋಡಿ ವಿಶ್ಲೇಷಣೆ ನೀಡಿದ್ದಾರೆಂಬುದು ಅವರ ಸಂಪಾದಕೀಯಕ್ಕೆ ಮಹತ್ವವನ್ನು ತಂದು ಕೊಟ್ಟಿದೆ. ಹೈದರಾಬಾದ್ ಕೇಂದ್ರೀಯ ವಿಶ್ವವಿದ್ಯಾನಿಲಯದ ನಿವೃತ್ತ ಅರ್ಥಶಾಸ್ತ್ರ ಪ್ರಾಧ್ಯಾಪಕರು, ದೇಶದ ಗ್ರಾಮೀಣ ಅಭಿವೃದ್ಧಿ ಯೋಜನೆಗಳ ಬಗೆಗೆ ಪರಿಣತರು ಹಾಗೂ ಸಲಹೆಗಾರರಾಗಿರುವ ಡಾ|| ನರಸಿಂಹ ರೆಡ್ಡಿಯವರು ಸಾಮಾನ್ಯರಿಗೂ ಸುಲಭವಾಗಿ ಅರ್ಥವಾಗುವಂತೆ ಅಮೆರಿಕಾದ ಬಿಕ್ಕಟ್ಟನ್ನು ವಿವರಿಸಿದ್ದಾರೆ. ಭಾರತದ ಮೇಲೆ ಅಮೆರಿಕಾದ ಬಿಕ್ಕಟ್ಟು ಉಂಟುಮಾಡುವ ಪರಿಣಾಮಗಳನ್ನು ಇಬ್ಬರೂ ಪ್ರಸ್ತಾಪಿಸಿದ್ದಾರೆ, ಎಚ್ಚರ ನೀಡಿದ್ದಾರೆ.

ಅಮೆರಿಕಾದ ಜಿ-೨೦ ಸಭೆಗೆ ತೆರಳುವ ಮುನ್ನ ಪ್ರಧಾನಿಯು ನಮ್ಮ ದೇಶದ ಉದ್ಯಮಿಗಳ ಪ್ರಾತಿನಿಧಿಕ ಸಂಸ್ಥೆಗಳ ಮುಖ್ಯಸ್ಥರನ್ನೆಲ್ಲಾ ಭೇಟಿಯಾಗಿದ್ದರು. ಈ ಉದ್ಯಮಿಗಳದ್ದು ಒಂದೇ ಒತ್ತಾಯ : ''ಹಣದುಬ್ಬರವು ಹೇಗಿದ್ದರೂ ಮುಂದಿನ ವರ್ಷದ ವೇಳೆಗೆ ಸುಧಾರಿಸುತ್ತದೆ, ಆದ್ದರಿಂದ ಅದನ್ನು ದೊಡ್ಡದು ಮಾಡಿ ಅಭಿವೃದ್ಧಿ ಯೋಜನೆಗಳನ್ನು ಕಡಿತಗೊಳಿಸಬಾರದು ಮತ್ತು ಟೆಲಿಕಾಂ, ವಿಮಾನ ಸಾರಿಗೆ ಹಾಗೂ ಚಿಲ್ಲರೆ ಮಾರಾಟದ ಕ್ಷೇತ್ರಗಳಲ್ಲಿ ವಿದೇಶಿ ಬಂಡವಾಳದ ಪ್ರವೇಶವನ್ನು ನಿರ್ಬಂಧಿಸಕೂಡದು''. ಇದಲ್ಲವೆ ದೇಶಭಕ್ತಿ ಮತ್ತು ಜನಸಾಮಾನ್ಯರ ಬಗೆಗಿನ ಕಾಳಜಿ! ಉರಿಯುತ್ತಿರುವ ಗುಡಿಸಲಿನಿಂದ ಗಳ ಹಿರಿಯುವ ದ್ರೋಹಿಗಳು ಇವರು. ಅವರನ್ನು ತೃಪ್ತಿಗೊಳಿಸಲು ಪ್ರಧಾನಿಯು ವಿಮಾ ವಿಭಾಗವು ಸೇರಿದಂತೆ ಹಲವು ಕ್ಷೇತ್ರಗಳಲ್ಲಿ ವಿದೇಶಿ ಬಂಡವಾಳದ ಶೇಕಡಾವಾರು ಪ್ರಮಾಣವನ್ನು ೨೬ರಿಂದ ೪೯ಕ್ಕೆ ಏರಿಸಿದ್ದಾರೆ. ದೇಶವನ್ನು ಗುಂಡಿಗೆ ತಳ್ಳುವ ಅಕ್ರಮ ಇದು. ಅಮೆರಿಕಾ ತನ್ನ ಬಿಕ್ಕಟ್ಟನ್ನು ಎದುರಿಸಲು ಭಾರತದ ಜನಸಾಮಾನ್ಯರು ತಮ್ಮ ಉಳಿತಾಯದ ಹಣವನ್ನು ತೊಡಗಿಸುವಂತೆ ಮಾಡುತ್ತಿರುವ ಮನಮೋಹನ ಸಿಂಗ್-ಚಿದಂಬರಂ-ಅಹ್ಲುವಾಲಿಯ ದುಷ್ಟ ತ್ರಿಕೂಟವು ಖಂಡನಾರ್ಹವಾಗಿದೆ. ವ್ಯಾಪಾರ-ಉದ್ಯಮಗಳನ್ನು ಪ್ರತಿನಿಧಿಸುವ ಅಗ್ರಸಂಸ್ಥೆಯನ್ನು ನಮ್ಮ

(೮ನೇ ಪುಟಕ್ಕೆ)




ಸಂಪುಟ-೧೦ ಸಂಚಿಕೆ-೫ ಡಿಸೆಂಬರ್ ೨೦೦೮

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೨೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@vsnl.com**
**website : www.navakarnataka.com**

# ಅಮೆರಿಕಾದ ಆರ್ಥಿಕ ಮುಗ್ಗಟ್ಟಿನ ನಿಜಾರ್ಥ

**ಸಂಪಾದಕೀಯ**

ಅಮೆರಿಕಾವನ್ನು ''ಸ್ಯಾಮ್ ಚಿಕ್ಕಪ್ಪ'' ಎನ್ನುವುದುಂಟು. ಈ ಚಿಕ್ಕಪ್ಪನ ಆರೋಗ್ಯ ಹದಗೆಟ್ಟಿದೆ. ಮುಂದೇನೆಂದು ನೋಡಿದರೆ ಕತ್ತಲು ದಟ್ಟವಾಗಿದೆ. ದೇಶವು ತತ್ತರಿಸುತ್ತಿದೆ. ಅಮೆರಿಕಾದ ಮುಂದಿನ ಅಧ್ಯಕ್ಷ ಅಧಿಕಾರಕ್ಕೆ ಬರುವುದು ೨೦೦೯ರ ಜನವರಿಯಲ್ಲಿ. ಯಾರು ಗೆದ್ದರೆಂಬುದಕ್ಕಿಂತ ಆರ್ಥಿಕ ಪರಿಸ್ಥಿತಿಯ ಭವಿಷ್ಯವೇ ಹೆಚ್ಚು ಪ್ರಮುಖವಾಗಿದೆ. ದುಡಿಮೆಯಿಂದ ದೂಡಲ್ಪಡುವ ಭೂತವು ಜನರನ್ನು ಕಾಡುತ್ತಿದೆ. ಅಂತೆಯೇ, ಮನೆಗಳನ್ನು ಕಳೆದುಕೊಳ್ಳುವುದು, ಬೆಲೆಗಳ ಏರಿಕೆ, ಆರ್ಥಿಕ ಸ್ಥಗಿತತೆ, ದಿವಾಳಿತನ, ಸದಾ ಹೆಚ್ಚುತ್ತಲೇ ಇರುವ ಸಾಲಗಳು, ಪರಭಾರೆಯಾಗಿರುವ ಆಸ್ತಿಯನ್ನು ಹಿಂದಕ್ಕೆ ಪಡೆಯಲಾಗದಂತಹ ಸನ್ನಿವೇಶ, ಇವೆಲ್ಲಾ ಕರಾಳರೂಪವನ್ನು ಪಡೆದಿವೆ. ಬ್ಯಾಂಕುಗಳು ವಿಶ್ವಾಸಾರ್ಹತೆಯನ್ನು ಕಳೆದುಕೊಂಡು ನುಚ್ಚುನೂರಾಗಿವೆ. ಸುಮಾರು ನಲವತ್ತು ಲಕ್ಷ ಅಮೆರಿಕನ್ನರು ಮನೆಗಳನ್ನು ಕಳೆದುಕೊಂಡಿದ್ದಾರೆ; ಎಲ್ಲಾ ಪರಭಾರೆಯ ಅವಾಂತರದ ಪರಿಣಾಮ. ಕೆಲಸಗಳಿಂದ ಹೊರಗಿರಿಸಲ್ಪಟ್ಟಿರುವವರು ಸಾವಿರಾರು ಜನ. ಅದರಲ್ಲಿ ಅತಿ ಹೆಚ್ಚಿನ ಮಟ್ಟದ ವೇತನವಿರುವ ಆರ್ಥಿಕ ವಿಭಾಗದವರೂ ಸೇರಿದ್ದಾರೆ. ತಾವು ಖರೀದಿಸಿದ್ದ ವಸ್ತುಗಳ ಬಾಬ್ತು ಹಣ ತೆರಲು ಸುಮಾರು ಶೇಕಡ ತೊಂಭತ್ತರಷ್ಟು ಮಂದಿ ಹೆಣಗಾಡುತ್ತಿದ್ದಾರೆ. ಈವರೆಗೆ ಗಣ್ಯವೆಂದು ಗುರುತಿಸಲಾಗಿದ್ದ ಅನೇಕ ಬ್ಯಾಂಕುಗಳು ಹಾಗೂ ಹಣಕಾಸು ಸಂಸ್ಥೆಗಳು ಮುಳುಗಿಹೋಗಿವೆ. ಉದಾಹರಣೆಗೆ, ಬೇರ್ ಸ್ಟರ್ನ್ಸ್, ಫ್ಯಾನಿ ಮೇ, ಫ್ರೆಡಿ ಮ್ಯಾಕ್, ಲೇಮನ್ ಬ್ರದರ್ಸ್, ಅಮೆರಿಕಾದ ಅಂತರರಾಷ್ಟ್ರೀಯ ಬಣ (ಎ.ಐ.ಜಿ.), ಇತ್ಯಾದಿ. ಮೆರಿಲ್ ಲಿಂಚ್, ಜೆಪಿ ಮೋರ್ಗನ್ ಚೇಸ್, ಬ್ಯಾಂಕ್ ಆಫ್ ಅಮೆರಿಕಾ, ಗೋಲ್ಡ್‌ಮನ್ ಸಾಕ್ಸ್, ಮುಂತಾದ ದೈತ್ಯಸಂಸ್ಥೆಗಳು ಉಸಿರೆಳೆಯುತ್ತಾ ಮುಂದುವರೆಯಲು ತಿಣಕಾಡುತ್ತಿವೆ. ಸ್ಟಾಕ್ ಮಾರ್ಕೆಟ್ ಅಗಾಧವಾಗಿ ಮುಗ್ಗರಿಸಿದೆ. ವಿಶ್ರಾಂತಿ ವೇತನ ಮತ್ತು ನಿವೃತ್ತಿಯ ವೇಳೆ ನೀಡಬೇಕಾದ ಹಣದ ಗಂಟೆಲ್ಲಾ ಬರಿದಾಗುವ ಮಟ್ಟವನ್ನು ಮುಟ್ಟಿದೆ. ಜೀವನದುದ್ದಕ್ಕೂ ಮಾಡಿದ್ದ ಉಳಿತಾಯದ ಹಣವು ಕರಗಿಹೋಗುತ್ತಿರುವುದನ್ನು ಕಂಡು ಲಕ್ಷಗಟ್ಟಲೆ ಅಮೆರಿಕನ್ನರು ಕಂಗಾಲಾಗಿದ್ದಾರೆ. ಇಂತಹ ದಯನೀಯ ಸ್ಥಿತಿ ತಮಗೆಂದಾದರೂ ಒದಗಬಹುದೆಂದು ಈ ಜನರೆಲ್ಲಾ ಕನಸುಮನಸಿನಲ್ಲೂ ಎಣಿಸಿರಲಿಲ್ಲ.

ಇಷ್ಟು ಗುರುತರವಾದ ಬಿಕ್ಕಟ್ಟು ಗಾಢವಾಗಿ ಹಬ್ಬಿರುವಾಗಲೂ ಮುಕ್ತ ಮಾರುಕಟ್ಟೆಯ ವಂದಿಮಾಗಧರು ಇದೊಂದು ತಾತ್ಕಾಲಿಕ ಘಟನೆಯೆಂದು ಸಾಂತ್ವನದ ಮಾತನ್ನಾಡುತ್ತಿದ್ದಾರೆ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಈ ರೀತಿಯ ಆರ್ಥಿಕ ಮುಗ್ಗರಿಸುವಿಕೆಯು ಆಗಾಗ್ಗೆ ಸಹಜವಾಗಿ ಘಟಿಸುತ್ತಿರುತ್ತದೆಂಬ ಅವರ ವಿವರಣೆಯು ಯಾರಿಗೂ ಸಮಾಧಾನ ತಂದಿಲ್ಲ. ಅವರ ಪ್ರಕಾರ, ಸರ್ಕಾರವು ಸ್ವಲ್ಪಮಟ್ಟಿನ ಸಹಾಯ ಹಸ್ತ ನೀಡಿದರೆ ಈಗಿನ ಪ್ರಚಂಡ ಬಿರುಗಾಳಿಯಿಂದ ಪಾರಾಗಲು ಸಾಧ್ಯ; ಆದ್ದರಿಂದ ಯಾರೂ ಕಂಗಾಲಾಗಬಾರದೆಂದು ಅವರು ಭರವಸೆ ನೀಡುತ್ತಿದ್ದಾರೆ. ಇಂತಹ ಉಪಚಾರದ ಮಾತುಗಳಿಂದ ಜನಸಾಮಾನ್ಯರು ಮೋಸಹೋಗುತ್ತಿಲ್ಲ. ಅದು ತಾತ್ಕಾಲಿಕವೆಂಬ ಭಾವನೆಯ ಬದಲಾಗಿ, ಇನ್ನೂ ಹೆಚ್ಚಿನ ಆರ್ಥಿಕ ಕುಗ್ಗುವಿಕೆಯು ಅನಿವಾರ್ಯವೆಂಬ ತೀರ್ಮಾನಕ್ಕೆ ಅವರು ಬರುತ್ತಿದ್ದಾರೆ.

ಪರಿಸ್ಥಿತಿಯ ವಿಕೋಪವನ್ನೆದುರಿಸಲು ಬುಷ್ ಸರ್ಕಾರವು ೭೫೦ ಬಿಲಿಯನ್ ಡಾಲರುಗಳಷ್ಟು, ಅಂದರೆ ಸುಮಾರು ೩೭ ಲಕ್ಷ ೫೦,೦೦೦ ಕೋಟಿ ರೂಪಾಯಿಗಳಷ್ಟು, ಅಗಾಧ ಮೊತ್ತವನ್ನು ಸುರಿದು ಮುಳುಗಿರುವ ಮತ್ತು ಮುಳುಗಲಿರುವ ಆರ್ಥಿಕ ಸಂಸ್ಥೆಗಳನ್ನು ಮೇಲೆತ್ತಲು ಯತ್ನಿಸಿದೆ. ಆರ್ಥಿಕತೆಗೆ ಅಗತ್ಯವಾಗಿರುವ ಬೆಂಬಲವನ್ನು ನೀಡಲು ಇದು ಸಮರ್ಥವಾಗುತ್ತದೆಯೆಂದು ನಂಬಲಾಗಿದೆ. ಆದರೆ ಅದು ಸಾಧ್ಯವೆ ? ಬಿಕ್ಕಟ್ಟು ಎಷ್ಟು ಗಾಢವಾದದ್ದೆಂದು ನಮಗೇನಾದರೂ ಕ್ಲುಪ್ತವಾಗಿ ತಿಳಿದಿದೆಯೆ ? ಅದು ಎಷ್ಟು ವಿಶಾಲವಾಗಿ ಹಬ್ಬಿದೆ ? ಇನ್ನೆಷ್ಟು ಬ್ಯಾಂಕುಗಳು ನೆಲ ಕಚ್ಚಿದರೆ ಅದರಿಂದ ಆರ್ಥಿಕತೆಯು ಎಷ್ಟು ಗಿರಕಿ ಹೊಡೆಯಬಹುದು ? ಆಗ ಸರ್ಕಾರ ಇನ್ನೆಷ್ಟು ಹಣವನ್ನು ಭರಿಸುತ್ತದೆಯೆ ? ಮಾರುಕಟ್ಟೆಯ ಹುಚ್ಚಾಟಕ್ಕೆ ಇದು ಖಾಯಂ ಪರಿಹಾರವೆ ? ಇಂತಹ ಹತ್ತಾರು ಪ್ರಶ್ನೆಗಳಿವೆ, ಆದರೆ ಉತ್ತರಗಳು ಅಲಭ್ಯ. ಸರಿಯಾದ ಪರಿಹಾರ ದೊರಕಬೇಕಾದರೆ ಮೊದಲು ಒಂದು ಮೂಲಭೂತ ಪ್ರಶ್ನೆಯನ್ನು ಹಾಕಿಕೊಳ್ಳಬೇಕು: ಈ ಆರ್ಥಿಕತೆಯು ಹೀಗೆ ಹಿಂದಕ್ಕೆ ಸರಿಯಲು ಕಾರಣವೇನು ? ಅಮೆರಿಕಾದ ಭವ್ಯ ಬಂಡವಾಳಶಾಹಿಯೆಂಬ ಸೊಗಸಿನ ಕನಸು ಹುಳಿತುಹೋದದ್ದೇಕೆ ?

ಬೇರೆ ಬೇರೆ ರೀತಿಯ ಮೋಹಕ ಮತ್ತು ಗೋಜಲುಮಯ ವಿವರಣೆಗಳನ್ನು ಪಂಡಿತರನೇಕರು ನೀಡುತ್ತಾ ಬಂದಿದ್ದಾರೆ. ಎಲ್ಲರೂ ಒಪ್ಪಿಕೊಂಡ ಒಂದು ಅಂಶವೇನೆಂದರೆ ಇಂದಿನ ಬಿಕ್ಕಟ್ಟು ಬಹಳ ಸಂಕೀರ್ಣವಾಗಿದೆ, ಎಂದು. ಹತ್ತಾರು ಅಂಗಗಳು ಎಗ್ಗಿಲ್ಲದಂತೆ ವ್ಯವಹಾರಗಳಲ್ಲಿ ತೊಡಗುವುದು ಮತ್ತು ಇಂತಹ ಜಟಿಲವಾದ ಕೊಡು-ಕೊಳುವಿಕೆಯನ್ನು ನಿಗೂಢವಾದ ಪದಗಳ ಬಳಕೆಯಿಂದ ವಿವರಿಸಹೊರಡುವುದು ಇಡೀ ಪ್ರಕರಣವನ್ನು ಗೊಂದಲಗೊಳಿಸುತ್ತದೆ. ಆದರೆ ಇದಕ್ಕೆಲ್ಲಾ ಅತಿಸರಳವಾದ ಮೂಲಭೂತ ವಿವರಣೆಯೊಂದುಂಟು: ಅಮೆರಿಕಾ ಮತ್ತು ವಿಶ್ವದ ಇತರ ದೇಶಗಳನ್ನು ಗಂಭೀರವಾದ ಆರ್ಥಿಕ ಬಿಕ್ಕಟ್ಟಿಗೆ ಸಿಲುಕಿಸಿರುವುದು ಪುರಾತನ ಕಾಲದಿಂದ ಕಂಡುಬಂದಿರುವ ದುರಾಸೆ, ಲಾಭಕೋರತನ, ಸೂಕ್ತ ನಿಯಂತ್ರಣದ ಅಭಾವ ಮತ್ತು ದಗಾಕೋರರ ಹಾಗೂ ಅವರನ್ನು ನಿಯಂತ್ರಿಸಬೇಕಾದವರ ನಡುವಣ ಒಳಸಂಚುಗಳು. ಇವಕ್ಕೆ ಪೂರಕವಾಗಿ ಎಲ್ಲೆ ಮೀರಿದ ಅಸಾಮರ್ಥ್ಯ ಮತ್ತು ಮೊಂಡುತನದ ಸೈದ್ಧಾಂತಿಕ ನಿಲುವು ಸೇರಿಕೊಂಡಿವೆ. ಆ ನಿಲುವಿನ ಪ್ರಕಾರ ಮಾರುಕಟ್ಟೆಯ ಶಕ್ತಿಗಳು ತಮ್ಮನ್ನು ತಾವು ನಿಯಂತ್ರಿಸಿಕೊಳ್ಳಲು ಸಮರ್ಥವಾಗಿವೆ. ಈ ಎಲ್ಲ ಅಂಶಗಳ ಒಗ್ಗೂಡುವಿಕೆಯಿಂದ ಜಾಗತಿಕ ಆರ್ಥಿಕ ಹಿಂಜರಿತವು ಕಟ್ಟಿಟ್ಟ ಬುತ್ತಿಯೆಂದು ಬೇರೆ ಹೇಳಬೇಕಾಗಿಲ್ಲ.

೨೦೦೭ರ ಉತ್ತರಾರ್ಧದಲ್ಲೇ ಈ ಬಿಕ್ಕಟ್ಟಿನ ಮುನ್ಸೂಚನೆ ಸ್ಪಷ್ಟವಾಗಿ ಗೋಚರಿಸಿತ್ತು. ಅದಕ್ಕೆ ಮೂಲವೆಂದರೆ 'ನಿರಂತರವಾದ ಸಾಲ ನೀಡುವುದರಿಂದ ಉಂಟಾಗುವ ವಿಷಮತೆ'. ಇದೇನೂ ಗಹನವಾದ ವಿಚಾರವಲ್ಲ. ಇಲ್ಲಿರುವ ಸಮಸ್ಯೆಯೇನೆಂದರೆ ಮನೆಗಳ ಮಾಲಿಕರು ಅವುಗಳ ಪರಭಾರೆಯ ಬಾಬ್ತು ತೆರಬೇಕಾದ ಕಂತುಗಳನ್ನು ಕಟ್ಟದಿರುವುದು, ಅಷ್ಟೆ. ಇದರ ಹಿಂದಿನ ಹಂತದಲ್ಲಿ ಭೂಮಿ-ಕಾಣಿ ಮುಂತಾದ ಆಸ್ತಿಗಳ ಸ್ಫೋಟ ಕಂಡುಬಂದಿರುತ್ತದೆ. ಅದನ್ನು ಕಂಡು ಹುಚ್ಚೆದ್ದು ಕುಣಿಯುವವರಿಗೆ ಅದು ಅಲ್ಪಕಾಲಿಕವಾದುದೆಂಬ ವಿವೇಚನೆ ಇರುವುದಿಲ್ಲ. ಅಂತಹ ಸನ್ನಿವೇಶದಲ್ಲಿ ಬ್ಯಾಂಕುಗಳು, ಪರಭಾರೆ ವ್ಯವಹಾರದಲ್ಲಿ ನಿರತವಾದ ಕಂಪನಿಗಳು, ಖಾಸಗಿ ಸಾಲ ನೀಡುವ ಹಾಗೂ ಇನ್ನಿತರ ಹಣಕಾಸು ಸಂಸ್ಥೆಗಳು ಹಿಗ್ಗಾಮುಗ್ಗ ಸಾಲಗಳನ್ನು ವಿತರಿಸುತ್ತವೆ. ಮನೆಗಳನ್ನು ಖರೀದಿಸುವವರು ಬಡ್ಡಿಯ ಅತಿಹೆಚ್ಚಿನ ದರವನ್ನು ಲೆಕ್ಕಿಸದೆ ಸಾಲ ಪಡೆದುಕೊಳ್ಳುತ್ತಾರೆ. ಅವರಿಗೆಲ್ಲ ಖಾತ್ರಿಯಾದ

ಮತ್ತು ನಿಗದಿಯಾದ ವರಮಾನಗಳಿರುವುದಿಲ್ಲ. ಆದರೆ ಬಡ್ಡಿಯ ಆಸೆಯಿಂದಾಗಿ ಬೇಕಾಬಿಟ್ಟಿ ಸಾಲಗಳ ವಿತರಣೆಯಾಗಿರುತ್ತದೆ. ತನಗೂ ಸ್ವಂತ ಮನೆ ಮಾಡಿಕೊಳ್ಳುವ ಅವಕಾಶವಿದೆಯೆಂದು ಭಾವಿಸಿಬಿಡುವ ಅಮೆರಿಕಾದ ಕನಸುಗಾರರೆಲ್ಲ ಸಾಲ ಪಡೆದುಕೊಳ್ಳುತ್ತಾರೆ. ಪರಭಾರೆಯಾದ ಆಸ್ತಿಯ ಬಾಬ್ತು ನಿಗದಿತ ಕಂತುಗಳನ್ನು ಕಟ್ಟಲು ತಮಗೆ ನಿಗದಿತ ವರಮಾನವಿಲ್ಲವೆಂದು ತಿಳಿದಿದ್ದೂ ಸಾಲ ಪಡೆದುಕೊಂಡುಬಿಡುವ ಈ ಜನ ಸಾಲ ತೀರಿಸಲು ಕಂತುಗಳನ್ನು ಕಟ್ಟುವುದರಲ್ಲಿ ಸೋಲುತ್ತಾರೆ. ತಾವೆಂತಹ ಮೂರ್ಖ ಸಾಹಸಕ್ಕೆ ಕೈಹಾಕುತ್ತಿದ್ದೇವೆಂದು ಹಣಕಾಸು ಸಂಸ್ಥೆಗಳಿಗೆ ಪರಿಜ್ಞಾನವಿರುತ್ತದೆ; ಆದರೂ ಸ್ಥಿರವಾದ ವರಮಾನವಿಲ್ಲದವರಿಗೆ ಹಣವನ್ನು ಸಾಲವಾಗಿ ನೀಡಿಬಿಡುತ್ತವೆ. ಹಣದ ಚಲಾವಣೆಯಿಂದ ವರಮಾನ ಹುಟ್ಟಿಕೊಳ್ಳುತ್ತದೆಯೆಂಬ ಗ್ರಹಿಕೆ ಒಂದು ಕಡೆ, ಬಡ್ಡಿಯ ಆಸೆ ಇನ್ನೊಂದು ಕಡೆ. ಹೀಗಾಗಿ, ಸಾಲ ತೀರಿಸಲಾಗದವರಿಗೆ ವಿಪರೀತವಾಗಿ ಸಾಲ ನೀಡುವುದು ಬುದ್ಧಿವಂತಿಕೆಯಲ್ಲವೆಂಬ ನೀತಿಯನ್ನು ಗಾಳಿಗೆ ತೂರಿಬಿಡಲಾಗುತ್ತದೆ; ಅಪಾರ ಲಾಭಗಳಿಕೆಯ ಆಮಿಷಕ್ಕೆ ಬಲಿಯಾಗಿ, ಬ್ಯಾಂಕುಗಳ ವ್ಯವಹಾರದಲ್ಲಿ ಇರಬೇಕಾದ ಆರೋಗ್ಯಕರ ನಿಯಮಗಳನ್ನು ಬದಿಗೆ ಸರಿಸಲಾಗುತ್ತದೆ. ತೃಪ್ತಿಯೇ ಇಲ್ಲದ ಆಸೆಯ ಪರಿಣಾಮ ಇದು.

ಹಣಕಾಸು ಸಂಸ್ಥೆಗಳು ಹೀಗೆ ಹಣ ತೊಡಗಿಸಿದಾಗ ಮತ್ತು ಸಾಲದ ಮರುಪಾವತಿಯು ಅಸಾಧ್ಯವಾದಾಗ ಈ ಸಂಸ್ಥೆಗಳು ತಮ್ಮ ಹೂಡಿಕೆಯನ್ನು ರಕ್ಷಿಸಿಕೊಳ್ಳಲು ಬೇರೊಂದು ಸಾಧನವನ್ನು ರೂಪಿಸಿಕೊಂಡವು. ಇದನ್ನು 'ಮರುಪಾವತಿಸಬೇಕಾದ ಸಾಲದ ವಿನಿಮಯ ಅಥವಾ ಅದಲುಬದಲು ಮಾಡಿಕೊಳ್ಳುವುದು' ಎನ್ನುತ್ತಾರೆ. ನಿಯಂತ್ರಣವಿದ್ದು, ಆರ್ಥಿಕತೆಯನ್ನು ಸರಿದೂಗಿಸುವ ಸಂದರ್ಭಗಳಲ್ಲಿ ಇದಕ್ಕೆ 'ವಿಮೆ' ಎಂಬ ಸಾಂಪ್ರದಾಯಿಕ ಹೆಸರಿರುತ್ತದೆ. 'ಮರುಪಾವತಿಸಬೇಕಾದ ಸಾಲದ ವಿನಿಮಯ' ಎಂಬುದು 'ವಿಮೆ' ಎನ್ನುವುದರ ಪ್ರತಿರೂಪ. ವಿಮೆಯಂತೆ ಇದು ಸಹ ಇಬ್ಬರ ಅಥವಾ ಎರಡು ಸಂಸ್ಥೆಗಳ ನಡುವೆ ಇರುವಂತಹ ಒಪ್ಪಂದದ ಸ್ವರೂಪವನ್ನು ಹೊಂದಿದೆ. ಕೆಟ್ಟ ಹೂಡಿಕೆಯಿಂದ ಉಂಟಾಗಬಹುದಾದ ನಷ್ಟವನ್ನು ತುಂಬಿಕೊಡುವುದು ಈ ಒಪ್ಪಂದದ ಪ್ರಮುಖ ಅಂಶ. ವಿಮೆ ಮತ್ತು ಸಾಲದ ವಿನಿಮಯದ ನಡುವೆ ಮೂರು ವ್ಯತ್ಯಾಸಗಳಿವೆ : (ಅ) ವಿಮಾ ಕಂಪನಿಗಳು ಕಾನೂನಿನ ಪ್ರಕಾರ ತಮ್ಮೆಲ್ಲ ವ್ಯವಹಾರಗಳಿಗೂ ಭದ್ರತೆ ಕಲ್ಪಿಸಲು ನಿಗದಿತವಾದ ಒಂದು ಮೊತ್ತವನ್ನು ಕಾದಿರಿಸಲಾದ ಬಂಡವಾಳವೆಂದು ತೆಗೆದಿರಿಸಬೇಕು. ಆದ್ದರಿಂದ ನಷ್ಟ ತುಂಬಿಕೊಡಲು ಅದರಲ್ಲಿ ಒಂದು ವ್ಯವಸ್ಥೆಯುಂಟು; (ಆ) ವಿಮಾ ಉದ್ದಿಮೆಯಲ್ಲಿ ಪಾರದರ್ಶಕತೆ ಇರುತ್ತದೆ. ಆದರೆ ''ಮರುಪಾವತಿಸಬೇಕಾದ ಸಾಲದ ವಿನಿಮಯ'' ಎಂಬುದು ಖಾಸಗಿ ವ್ಯವಹಾರ. ಅದರ ಮೇಲೆ ನಿಯಂತ್ರಣವಿಲ್ಲ ಮತ್ತು ಅಲ್ಲಿನ ವ್ಯವಹಾರಗಳೆಲ್ಲಾ ಬಹಿರಂಗವಾಗಿ ನಡೆಯುವುದಿಲ್ಲ. ಇದು ಪರಭಾರೆ ಮಾಡಲಾದ ಆಸ್ತಿಯ ಮೇಲಿನ ಸುರಕ್ಷತೆಗೂ ಅನ್ವಯಿಸುತ್ತದೆ. ಇಲ್ಲಿ ಭದ್ರತೆಗಾಗಿ ಕಾದಿರಿಸಲಾದ ಬಂಡವಾಳ ಇರುವುದಿಲ್ಲ, ಅಥವಾ ಇರಬೇಕಾಗಿಲ್ಲವೆಂದು ಖಾಸಗಿ ಕಂಪನಿಗಳು ಭಾವಿಸಿಕೊಂಡುಬಿಟ್ಟವು ; (ಇ) ಸಾಲದ ವಿನಿಮಯವು ತಾಂತ್ರಿಕವಾಗಿ 'ವಿಮೆ' ಎನಿಸಿಕೊಳ್ಳದಿರುವುದರಿಂದ ಸರ್ಕಾರದ ಯಾವ ಅಂಗಸಂಸ್ಥೆಯ ನಿಯಂತ್ರಣಕ್ಕೂ ಅದು ಒಳಪಡುವುದಿಲ್ಲ. ಅಂದರೆ, 'ವಿಮೆ' ಎಂಬ ಪದವನ್ನು ತೊಡೆದುಹಾಕಿ ಹಣಕಾಸು ಸಂಸ್ಥೆಯೊಂದು ಅನೇಕ ಕಟ್ಟುನಿಟ್ಟಾದ ನಿರ್ಬಂಧಗಳಿಂದ ತಪ್ಪಿಸಿಕೊಳ್ಳಬಹುದು. ಇದರ ದುಷ್ಪರಿಣಾಮವೆಂದರೆ, ಸರ್ಕಾರಿ ನಿಯಂತ್ರಣವಿಲ್ಲದ್ದರಿಂದ ಸಾಲದ ವಿನಿಮಯ ಮಾಡಿಕೊಳ್ಳಲು ಸ್ಥಾಪಿತವಾದ ಸಂಸ್ಥೆಯ ಬಳಿ ಯಾವುದಾದರೂ ನಷ್ಟ ತುಂಬಿಕೊಡಲು ಆರ್ಥಿಕ ಸಾಮರ್ಥ್ಯವಿರುತ್ತದೆಯೇ, ಕಾದಿರಿಸಲಾದ ಬಂಡವಾಳವು ಲಭ್ಯವಿರುತ್ತದೆಯೇ, ಇಲ್ಲವೇ, ಎಂಬುದು ತಿಳಿಯುವುದಿಲ್ಲ. ಅಮೆರಿಕಾದ ಹಣಕಾಸು ಬಿಕ್ಕಟ್ಟಿನ ಮೂಲ ಇಲ್ಲಿದೆ : ಒಂದು ಹೊಸ ದಾಖಲೆಯ ಸಂಖ್ಯೆಯಷ್ಟು ಮಂದಿ ಮನೆಗಳನ್ನು ಕೊಂಡವರು ತಮ್ಮ ಆಸ್ತಿಯನ್ನು ಪರಭಾರೆ ಮಾಡಿದ್ದರಾದರೂ ಸಾಲದ ಬಾಕಿಯನ್ನು ಕಟ್ಟದೆ ಉಳಿಸಿಕೊಂಡುಬಿಟ್ಟರು. ಕಟ್ಟಲು ಅವರಿಗೆ ಆರ್ಥಿಕ ಚೈತನ್ಯವಿರಲಿಲ್ಲ, ಆದರಿಂದಾಗಿ ಪರಭಾರೆ ಮಾಡಲಾದ ಆಸ್ತಿಯನ್ನು ಭದ್ರತೆಗಾಗಿ ಇರಿಸಿಕೊಂಡು ಸಾಲಗಳನ್ನು ವಿನಿಮಯ ಮಾಡಿಕೊಂಡಿದ್ದ ಹಣಕಾಸು ಸಂಸ್ಥೆಗಳಿಗೆ ಹಣ ಪಾವತಿಸಲು ಸಾಧ್ಯವಾಗಲಿಲ್ಲ. ಹಠಾತ್ತನೆ ಕೆಲವು ಅತಿದೊಡ್ಡ ಬ್ಯಾಂಕುಗಳು, ನಿವೃತ್ತರ ಹಣವನ್ನು ಠೇವಣಿಯಾಗಿ ಪಡೆದಿದ್ದ ಹಾಗೂ ಬೇರೆ ಹಲವು ಭಾರಿ ಹಣಕಾಸು ಸಂಸ್ಥೆಗಳು ಅಗಾಧ ಪ್ರಮಾಣದ ನಷ್ಟವನ್ನೆದುರಿಸಬೇಕಾದ ಸನ್ನಿವೇಶ ಉಂಟಾಯಿತು.

ಪ್ರಸಕ್ತ ಬಿಕ್ಕಟ್ಟನ್ನು ಸರಿಯಾಗಿ ಅರ್ಥಮಾಡಿಕೊಂಡರೆ ಅದೊಂದು ರೀತಿಯ ಜೂಜುಗಾರನ ಅಳಲು ಎನ್ನಬಹುದು. ಜೂಜಿನಲ್ಲಿ ದೊಡ್ಡ ಮೊತ್ತವನ್ನು ಕಳೆದುಕೊಳ್ಳುವವನಿಗೆ ಯಾರು ರಕ್ಷಣೆ ನೀಡಬೇಕು ! ಹೋಗಲಿ, ಅಮೆರಿಕಾದ ಈ ಬಿಕ್ಕಟ್ಟಿನಲ್ಲಿ ಒಟ್ಟು ಎಷ್ಟು ಹಣ ನಷ್ಟವಾಗಿದೆ ಎಂಬುದರ ಕಲ್ಪನೆಯಾದರೂ ಬರಬಲ್ಲುದೆ? ಅದು ಯಾರಿಗೂ ತಿಳಿಯುವಂತಿಲ್ಲ. ಮಾಧ್ಯಮಗಳು ಅಂದಾಜಿಸಿರುವಂತೆ, ಹೀಗೆ ಪರಭಾರೆಯ ಭದ್ರತೆಯ ಬಾಬ್ತು ನಷ್ಟವಾಗಿರುವ ಹಣ ಏನಿಲ್ಲವೆಂದರೂ ಒಂದುಕೋಟಿ ಮೂವತ್ತೈದು ಲಕ್ಷ ಕೋಟಿ ಕೋಟಿಗಳಿಂದ ಹಿಡಿದು ಮೂರು ಕೋಟಿ ಕೋಟಿಗಳಷ್ಟಿರಬಹುದು. (೪೫ರಿಂದ ೬೦ ಟ್ರಿಲಿಯನ್ ಡಾಲರುಗಳು. ಒಂದು ಟ್ರಿಲಿಯನ್ = ೧ರ ನಂತರ ೧೨ ಸೊನ್ನೆಗಳು). ಇಷ್ಟೊಂದು ಹಣ ಕಳೆದುಕೊಳ್ಳಲು ಕಂಪನಿಗಳಿಗೆ ಹಣ ಎಲ್ಲಿಂದ ಬಂತು ? ಕಷ್ಟಪಟ್ಟು ದುಡಿದು, ಏನಾದರೂ ಹಣ ಹೂಡಬೇಕೆಂದು ಬಯಸಿಬಂದ ಲಕ್ಷಗಟ್ಟಲೆ ಅತಿಸಾಮಾನ್ಯ ಜನರ ಅಲ್ಪಪ್ರಮಾಣದ ಉಳಿತಾಯಗಳಿಂದ ! ಅವರ ಅಲ್ಪಸ್ವಲ್ಪ ಉಳಿತಾಯವೆಲ್ಲಾ ಕೊಚ್ಚಿಕೊಂಡುಹೋಗಿದೆ. ಈ ಬಿಕ್ಕಟ್ಟಿನಿಂದಾಗಿ, ಹಣ ಹೂಡಿರದಿದ್ದ ಬೇರೆಷ್ಟೋ ಲಕ್ಷಗಟ್ಟಲೆ ಜನರಿಗೆ ಬಲವಾದ ಹೊಡೆತ ಬಿದ್ದಿದೆ.

ಆರ್ಥಿಕತೆಯ ವಿಶ್ಲೇಷಕರು ಹೇಳುವಂತೆ ಇಂದಿನ ಬಿಕ್ಕಟ್ಟು ಕೇವಲ ಆರಂಭದ ಹಂತದ್ದು; ಮುಂದೆ ಅದಿನ್ನೂ ವ್ಯಾಪಕವಾಗಿ ಹಬ್ಬುತ್ತದೆ. ಮನೆಗಳನ್ನು ಪರಭಾರೆ ಮಾಡಿದ್ದವರಂತೆ ವಾಹನಗಳು, ಕ್ರೆಡಿಟ್ ಕಾರ್ಡ್‌ಗಳು, ಇತ್ಯಾದಿಯಾಗಿ ಏನೇನನ್ನೋ ಬಳಸಿ ಸಾಲ ಪಡೆದಿದ್ದವರೂ ಇದ್ದಾರೆ. ಮರುಪಾವತಿಸಲು ಅವರೂ ಎಲ್ಲ ಸಮರ್ಥರಲ್ಲ. ಇದೆಲ್ಲದರ ಒಟ್ಟು ಪರಿಣಾಮವಾಗಿ ಆರ್ಥಿಕತೆಯ ಧೂಳೀಪಟದ ಪೆಡಂಭೂತವು ಅಮೆರಿಕಾವನ್ನು ಕಾಡುತ್ತಿದೆ. ಇಷ್ಟಾದರೂ ಬುಷ್ ಆಡಳಿತದ ಮಧ್ಯಪ್ರವೇಶದ ವೈಖರಿಯು ತೀರಾ ಕಳಪೆ ಮಟ್ಟದ್ದೇ ಆಗಿದೆ. ಮೂಲಕ್ಕೆ ಹೋಗಿ ರೋಗವನ್ನು ತೊಡೆದುಹಾಕುವ ಬದಲು ಮೇಲೆ ಮೇಲೆ ಕಾಣುವ ರೋಗದ ಚಿಹ್ನೆಗಳನ್ನು ಅಳಿಸಿಹಾಕಲು ಬುಷ್ ಸರ್ಕಾರ ಯತ್ನಿಸುತ್ತಿದೆ.

ಸರ್ಕಾರದ ಅರಿವಿಲ್ಲದೆ ಇಷ್ಟು ದೊಡ್ಡ ಪ್ರಮಾಣದ ಬಿಕ್ಕಟ್ಟು ಉಂಟಾಗಿರಲು ಸರ್ವಥಾ ಸಾಧ್ಯವಿಲ್ಲ. ಹಾಗೇನಾದರೂ ಆಗಿದ್ದರೆ, ಸರ್ಕಾರದ ಯೋಗ್ಯತೆಯು ಎಷ್ಟು ಹೀನವಾದದ್ದೆಂದು ಸ್ಪಷ್ಟವಾಗುತ್ತದೆ. ಅಥವಾ, ಇದು ಅಮೆರಿಕಾ ಸರ್ಕಾರದ ಉದ್ದೇಶ ಎಂತಹದ್ದೆಂಬುದರ ಸೂಚನೆ ನೀಡುತ್ತದೆ. ಸರಿಯಾಗಿ ನಿಗಾ ಇಡುವುದರಲ್ಲಿ ಅಗಾಧವಾದ ಬೇಜವಾಬ್ದಾರಿತನವನ್ನು ಸರ್ಕಾರವು ಪ್ರಕಟಿಸಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಜವಾಬ್ದಾರಿ ಹೊರಬೇಕಾದ ಅಗತ್ಯದ ನಿಯಮವೇನಾದರೂ ಇದ್ದರೆ, ಈ

(೧೧ನೇ ಪುಟಕ್ಕೆ)






**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




**ನವೆಂಬರ್ ಸಂಚಿಕೆ**

ಶ್ರೀ ಶಾಂತಾರಾಮ ಸೋಮಯಾಜಿಯವರ ''ಪವಾಡಗಳ ಕೈವಾಡ ಬಯಲಿಗೆಳೆದ ಸಜ್ಜನ ಬಿ. ಪ್ರೇಮಾನಂದ್'' ಲೇಖನ ಇಂದಿನ ಯುವಪೀಳಿಗೆಯವರಿಗೆ ಮಾರ್ಗದರ್ಶನ ಮಾಡುತ್ತಿದೆ. ಅದರಲ್ಲಿ ವಿವರಿಸಿರುವ ಪವಾಡ ಗುಟ್ಟು ಬಯಲು ನಿದರ್ಶನವೊಂದರ ವೀಡಿಯೋ ಕ್ಲಿಪ್ ಇದೀಗ http://navakarnataka.blogspot.com ಜಾಲತಾಣದಲ್ಲಿ ಮೂಡಿದ್ದು ಆಸಕ್ತರು ಅದನ್ನು ಗಮನಿಸಬಹುದು.

''ಇಂಥವರೂ ಇದ್ದರು, ಮುಂದೆಯೂ ಇರುತ್ತಾರೆ'' (ಲೇ: ಸ. ರಾ. ಸುಳಕೂಡೆ) ಮಾನವೀಯ ಮೌಲ್ಯಗಳನ್ನು ನಂಬಿ ಬದುಕಿದವರ ಚಿತ್ರಣ ಕೊಟ್ಟರೆ ''ಸುಭಾಷ್ ಪಾಳೇಕರರ ಶೂನ್ಯ ಬಂಡವಾಳದ ನೈಸರ್ಗಿಕ ಕೃಷಿ'' ಕೃತಿ ಪರಿಚಯ ಇಂದಿನ ತುರ್ತು ಅಗತ್ಯವನ್ನು ಎತ್ತಿ ಹೇಳಿದೆ.

ಚಿತ್ರದುರ್ಗ — ಬೇದ್ರೆ ಮಂಜುನಾಥ

ರಾಜ್ಯೋತ್ಸವ ಮಾಸಕ್ಕೆ ಪೂರಕವಾಗಿ ಪ್ರೇರಕವಾಗಿ ಮೂಡಿಬಂದಿದೆ.

ಉಸಿರಾಗಲಿ ಕನ್ನಡ ಹಸಿರಾಗಲಿ... ಸಮೀಕ್ಷೆ, ಗ್ರಹಿಕೆ, ಪೋಷಕರ ಆಸಕ್ತಿ ಮತ್ತು ವ್ಯಾವಹಾರಿಕ-ಅಸ್ತಿತ್ವ ಈ ಪ್ರಶ್ನೆಗಳಿಗೆಲ್ಲಾ ಉತ್ತರ ದೊರೆಯಬೇಕಾದಲ್ಲಿ ಇಂಗ್ಲಿಷ್ ಕಲಿಕೆಯಿಂದ ಕನ್ನಡಕ್ಕೆ ಕುತ್ತಿಲ್ಲ ಎನ್ನುವ ವಾದವನ್ನು ಸಹಿಸಿಕೊಳ್ಳಬೇಕಾಗುತ್ತದೆ.

ಇನ್ನೊಂದೆಡೆ ಕನ್ನಡ ಕಲಿಕೆಯ ಕೂಗಿನಲ್ಲಿ ಕಲಿಸುವ ಉಪಾಧ್ಯಾಯರ ಸಂಖ್ಯೆ ಕಡೆ ಗಮನ ಹರಿಸದೇ ಕೇವಲ ಚರ್ಚೆಗೆ ಆಸ್ಪದ ನೀಡುತ್ತಿರುವ ವಿಷಯ ಒಂದು ದುರಂತ. ನಮ್ಮ ಸಂಸ್ಕೃತಿ, ಪರಂಪರೆ, ನಮ್ಮತನ ಇವಕ್ಕೆ ಕುತ್ತುಬಾರದಂತೆ ಜೊತೆಜೊತೆಯಲ್ಲಿ ಇಂಗ್ಲಿಷ್ ಕಲಿತರೆ ಧಕ್ಕೆಯಾಗಲಾರದೇನೋ ಅನ್ನುವುದು ನನ್ನ ಅನಿಸಿಕೆ.

ಬೆಂಗಳೂರು — ನೆ. ಲ. ರಾಮಮೂರ್ತಿ

**ಅಕ್ಟೋಬರ್ ಸಂಚಿಕೆ**

ಅಕ್ಟೋಬರ್ ೨೦೦೮ರ 'ಹೊಸತು' ಅನೇಕ ವಿಚಾರಗಳಿಂದ, ಕವನಗಳಿಂದ ಸುಂದರವಾಗಿ ಮೂಡಿ ಬಂದಿದೆ. ಮುಖ್ಯವಾಗಿ ಅನುವಾದಿತ ಕಥೆ ''ಅದೊಂದು ಸಂಸ್ಕೃತಿ'' ಮುದ ನೀಡಿತು. ಅಂತೆಯೇ ಬಿ. ಸುರೇಶ್ ಅವರು ''ಗುಲಾಬಿ ಟಾಕೀಸ್'' ಚಲನಚಿತ್ರ ಕುರಿತಂತೆ ''ಹುಡುಕುವ ಹಾದಿಯಲ್ಲಿ'' ಲೇಖನದಲ್ಲಿ ಚಿತ್ರದ ಬಗ್ಗೆ ಅನೇಕ ವಿಷಯಗಳನ್ನು ತಿಳಿಸಿಕೊಟ್ಟಿದ್ದಾರೆ. ಚಲನಚಿತ್ರ-ಕಾದಂಬರಿ ಎರಡೂ ವಿಭಿನ್ನ ಮಾದರಿಗಳು. ಕಾದಂಬರಿಯೊಂದನ್ನು ಚಲನ ಚಿತ್ರಕ್ಕೆ ಅಳವಡಿಸಿಕೊಳ್ಳುವಾಗ ಜನರಂಜಕಗೊಳಿಸಲು ಅನೇಕ ಮಾರ್ಪಾಟುಗಳನ್ನು ಮಾಡಿಕೊಳ್ಳುವುದು ಎಂದಿನಿಂದಲೋ ನಡೆದುಬಂದಿದೆ. ಲೇಖನ ತುಂಬ ಚೆನ್ನಾಗಿದೆ. ಗಾಂಧೀಜಿಯವರ ಮುಖಚಿತ್ರ ಪತ್ರಿಕೆಯ ಶೋಭೆಯನ್ನು ಹೆಚ್ಚಿಸಿದೆ.

ನವದೆಹಲಿ — ಕೃಷ್ಣಮೂರ್ತಿ ಕಲುಮಂಗಿ

ಅಕ್ಟೋಬರ್, ೨೦೦೮ರ ಸಂಚಿಕೆಯ ಸಂಪಾದಕೀಯ 'ಗಾಂಧೀವಾದ' ಹಾದಿ ತಪ್ಪಿರುವುದನ್ನು ಬಹಳ ವಸ್ತುನಿಷ್ಠವಾಗಿ ಅವಲೋಕಿಸಿದೆ. ಗ್ರಾಮರಾಜ್ಯ ಪರಿಕಲ್ಪನೆಯ ಸಮಕಾಲೀನರು ಇಂದಿಗೂ ನಮ್ಮ ನಡುವೆಯೇ ಇದ್ದರೂ, ಅಂತಹ ಹಿರಿತಲೆಗಳನ್ನು ಆಧುನಿಕ ಪೀಳಿಗೆ ಷೋಕೇಸಿನ ಬೊಂಬೆಗಳಂತೆ, ಐತಿಹಾಸಿಕ ವಸ್ತುವಿನಂತೆ ಪರಿಗಣಿಸಿಬಿಟ್ಟಿದೆ. ಬಾಪೂಜಿಯ ರಕ್ತಾರ್ಪಣದಿಂದ ನಾವು ಗಳಿಸಿದ ಸ್ವಾತಂತ್ರ್ಯವಿಂದು 'ಸಿಕ್ಕವರಿಗೆ ಸೀರುಂಡೆ' ಯನ್ನಾಗಿಸಿಕೊಂಡಿರುವುದೂ ಬಹುದೊಡ್ಡ ದುರಂತವಾಗಿದೆ. ಹಾಗಾಗಿ ಎಲ್ಲಾ ಚಳುವಳಿಗಳೂ ಗುಡ್ಡಹತ್ತಿವೆ! ಆಧುನಿಕತೆಯ ಅಬ್ಬರದಲ್ಲಿ ನಮ್ಮ ನೆಲ, ಜಲ, ನುಡಿಗಳೆಲ್ಲ ಸಾರರಹಿತ ಗೊಬ್ಬರಗಳಾಗುತ್ತಿವೆ.




ಪ್ರಜಾ-ಪ್ರಭುತ್ವದ ಸಾಕಾರವಾದ ಸರ್ಕಾರ - ಆಡಳಿತ ಮಟ್ಟದಲ್ಲಿ ಈ ಕುರಿತು ಪ್ರಬಲವಾದ ಇಚ್ಛಾಶಕ್ತಿಯನ್ನು ಮೈಗೂಡಿಸಿಕೊಂಡು ಸಮರೋಪಾದಿಯಲ್ಲಿ ಕಾರ್ಯಗತಗೊಳ್ಳದಿದ್ದಲ್ಲಿ ಗಾಂಧಿ ಆಶಯದ ಗ್ರಾಮ ಸ್ವರಾಜ್ಯ, ರಾಷ್ಟ್ರಪ್ರೇಮ - ದೇಶಭಕ್ತಿ, ಜತೆಗೆ ಮಾದರಿ ಸಂಸ್ಕೃತಿಯೊಂದರ ಅವಸಾನವಾಗುವುದು ನಿಶ್ಚಿತ. ಈ ಹಿನ್ನೆಲೆಯಲ್ಲಿ ಪಕ್ಷಾತೀತವಾಗಿ ಗಾಂಧೀವಾದವನ್ನು ಎತ್ತಿ ಹಿಡಿಯುವುದರೊಂದಿಗೆ ಬದುಕು ಕಟ್ಟಿಕೊಳ್ಳಲು ಕ್ರಮಿಸಬೇಕಿದೆ, ಕಂಕಣಬದ್ಧರಾಗಬೇಕಿದೆ.

ಚಿತ್ರದುರ್ಗ — ಚನ್ನಬಸವ ಪುತ್ತೂರ್ಕರ

**ಮರಿ ಕೋಳಿ**

ಅಚ್ಚಕಪ್ಪಿನ ಮುದಿ ತಾಯಿ
ಕುಕ್ಕುರು ಕೂರಿನಲ್ಲಿ:
ರಾಗಿ ಕಣ್ಣಿನ ಪಿಳಿಪಿಳಿ ಕಂಗಳ
ಬಿಳಿಬಿಳಿ ಕಂದಗಳ ಅವುಚಿ ಕವುಚಿ

ಇಕ್ಕೆಲಕೆ ತೆರೆದ ಕಟ್ಟೆಚ್ಚರದ ಕೆಂಗಣ್ಣು:
ಬಳಿಗೆ ಸುಳಿದೀರಿ ಜೋಕೆ
ಕಳ್ಳ ಹದ್ದು ಕಾಗೆ!

ಹುಳು ಹುಪ್ಪಡಿ ಜತೆ ಹಂಚಿ ತಿಂದುಂಡು
ಮಿಕ್ಕ ಕಾಳುಕಡಿ ಸುತ್ತ ಚೆಲ್ಲಾಡಿ
ಇಕ್ಕಿದ ಹಿಕ್ಕೆಗಳ ಲೆಕ್ಕಿಸದೆ
ಮತ್ತೂ ಮುಕ್ಕುವ ಆಸೆ ಸ್ನಿಗ್ಧಮುಗ್ಧ
ಹೂಮುಖಗಳಲ್ಲಿ

ತಾಯ ಕಾದ ಕೆಂಗಣ್ಣಿನ ನಡುವೆ
ನೆಟ್ಟನಿಗುರಿದ ಚೋಟು ಮುಂಜುಟ್ಟು
ಕಾದಕತ್ತಿಯ ಹಾಗೆ
ಬುಡದಿಂದಿಳಿದು, ಬಾಗಿ, ತುದಿ ಸೀಳಿದ
ಚೂಪು ಬಿಳಿ ಕೊಕ್ಕು: ಮಕ್ಕಳು ಮರಿಗೆ
ಊಟ ಹೆಕ್ಕುವ ತರಬೇತಿ ದಂಡ
ಹಾಗೆಯೇ ಮಿಕ್ಕ ಬಳಗವ ಕೂಗಿ
ಕರೆಯುವ ಕೊಂಬು

ಬಾನ ಮರೆಯಲ್ಲಿರುವ ಹರಿಯೇ
ಹಾರಿ ಬಿಡಬೇಡ ನಿನ್ನ ಯಮ ವಾಹನವ
ಮಕ್ಕಳು ಮರಿಯ ದಿವ್ಯ ಸನ್ನಿಧಿಗೆ!
ಬೇರೆ ಅನ್ನವೂ ಉಂಟು ಅದಕ್ಕೆ
ಸತ್ತದನ, ನಕುಲ ಅಲುಬಿದ ಹಾವು!
ಹೇಗೂ ವಿಧಿಸಿದ್ದೀಯೆ
ನರನ ದವಡೆ ನಾಲಗೆಯಲ್ಲಿ
ಬೆಳೆದ ಮೇಲಿನೆಳೆಯರ ಸಾವು

* * *

(ನವೆಂಬರ್ ೨೦೦೮ರ 'ಹೊಸತು'ವಿನ ಮುಖಪುಟದ ಚಿತ್ರ ನೋಡಿ)

ಬೆಂಗಳೂರು — ಬಿ. ರಾಜಣ್ಣ

'ಹೊಸತು' ನವೆಂಬರ್ ಸಂಚಿಕೆಯಲ್ಲಿ ಪ್ರಕಟವಾಗಿರುವ ಶ್ರೀ ಡಿ. ಎಸ್. ನಾಗಭೂಷಣ ಅವರ ಲೇಖನದಲ್ಲಿ ಗಾಂಧೀಜಿ ವಿಚಾರದ ಪ್ರಸ್ತಾಪದಲ್ಲಿ ''ದೈವಿಕತೆ'' ಎಂಬುದು ಪ್ರತಿಬಾರಿಯೂ ''ದೈಹಿಕತೆ'' ಎಂದು ತಪ್ಪಾಗಿ ಅಚ್ಚಾಗಿದೆ. ಅದನ್ನು ಸರಿಪಡಿಸಿಕೊಂಡು ಓದಿಕೊಳ್ಳಬೇಕಾಗಿ ವಿನಂತಿ. ಮುದ್ರಣದೋಷಕ್ಕಾಗಿ ವಿಷಾದಿಸುತ್ತೇವೆ.

— ಸಂ

# ಭಯೋತ್ಪಾದನೆಯ ನಿಗ್ರಹ

ಹೆಚ್ಚುತ್ತಲೇ ಇರುವ ಭಯೋತ್ಪಾದಕ ಕೃತ್ಯಗಳನ್ನು ತಡೆಯುವ ಕ್ರಮಗಳ ಬಗ್ಗೆ ಪುಂಖಾನುಪುಂಖವಾಗಿ ಚರ್ಚೆ ಸಾಗುತ್ತಿದೆ. ಮಾಧ್ಯಮಗಳು, ಸರ್ಕಾರದ ವಲಯಗಳು, ರಕ್ಷಣಾದಳಗಳು, ಹೀಗೆ ಎಲ್ಲರೂ ಇದರಲ್ಲಿ ಪಾಲ್ಗೊಂಡಿದ್ದಾರೆ. ಪರಸ್ಪರ ದೂಷಣೆ ಮತ್ತು ಸರ್ಕಾರದ ಸಂಪೂರ್ಣ ಸೋಲಿನ ಬಗ್ಗೆ ಟೀಕೆ, ಇವು ಹೆಚ್ಚು ಕಂಡು ಬಂದಿವೆ. ಈ ರೀತಿಯ ಭಯೋತ್ಪಾದನಾ ಹಲ್ಲೆಗಳು ನಡೆಯುತ್ತಿರುವುದೇಕೆಂಬುದು ಪ್ರಮುಖ ಪ್ರಶ್ನೆ. ಮುಸಲ್ಮಾನ ಜನಾಂಗಕ್ಕೆ ಆಗಿರುವ ಅನ್ಯಾಯ ಮತ್ತು ಗುಜರಾತಿನ ಸರ್ಕಾರದ ಉಸ್ತುವಾರಿಯಲ್ಲಿ ಮುಸಲ್ಮಾನರ ಮೇಲೆ ನಡೆದ ದೌರ್ಜನ್ಯಗಳಿಗೆ ಪ್ರತೀಕಾರವಿದೆಂದು ಭಯೋತ್ಪಾದಕ ಗುಂಪುಗಳು ಹೇಳಿಕೊಂಡಿರುವುದಾಗಿ ಆಗಾಗ್ಗೆ ವರದಿಗಳು ಬರುತ್ತಿರುತ್ತವೆ. ಈ ತರ್ಕವನ್ನು ಮಾನ್ಯಮಾಡುವುದು ಅನಗತ್ಯ. ಕುಕೃತ್ಯ ಗಳನ್ನೆಸಗುವವರು ಯಾವಾಗಲೂ ಏನಾದರೊಂದು ಸಮರ್ಥನೆ ನೀಡುತ್ತಲೇ ಇರುತ್ತಾರೆ. ಬಲಾತ್ಕಾರದಿಂದ ಲೈಂಗಿಕ ಅತ್ಯಾಚಾರವೆಸಗುವವನು ತಾವು ಮೋಹಕ್ಕೆ ಗುರಿಯಾಗಲು ಏನೋ ಪ್ರಚೋದನೆ ಇತ್ತೆಂದು ಹೇಳುವುದು ಇದಕ್ಕೆ ಒಂದು ಉದಾಹರಣೆ. ಯಾರೋ ಕೋಪ ಬರಿಸಿದ್ದರಿಂದ ಕೊಲೆ ಮಾಡಬೇಕಾಯಿತೆಂದು ಹೇಳುವ ಅಪರಾಧಿಗಳು ಸಹ ಇಂಥವರೇ. ಲಂಚ ಕೊಡಲು ಜನ ಸಿದ್ಧವಾಗಿರುವುದರಿಂದ ತಾನು ಭ್ರಷ್ಟಾಚಾರದಲ್ಲಿ ತೊಡಗಿರುವುದಾಗಿ ಅಧಿಕಾರಿಗಳು ಹೇಳಿಕೊಳ್ಳಬಹುದು. ಇಂತಹ ಸಮರ್ಥನೆಗಳಿಗೆ ಸೊಪ್ಪು ಹಾಕುವುದಾದರೆ ನಾವೆಂದೂ ಸರಿಯಾದ ಕಾರಣವನ್ನು ತಿಳಿಯಲು ಹೋಗಲಾರೆವು. ಯಾರಿಗೆ, ಎಷ್ಟೇ, ಅನ್ಯಾಯವಾಗಿದ್ದರೂ ವೈಯಕ್ತಿಕ ಕಾರಣಕ್ಕಾಗಿ ಸಾರ್ವಜನಿಕ ಹತ್ಯೆಯಲ್ಲಿ ನಿರತರಾಗುವುದಕ್ಕೆ ಸಮರ್ಥನೆ ಇರಲಾರದು. ತುಳಿತಕ್ಕೆ ಗುರಿಯಾಗಿದ್ದರೆ ನ್ಯಾಯಕ್ಕಾಗಿ ಹೋರಾಡಬೇಕಾದ್ದು ಸಹಜ. ನಾಗರಿಕ ಸಮಾಜದಲ್ಲಿ ಅದಕ್ಕೊಂದು ಸಂಹಿತೆ ಇದೆ. ಅಗತ್ಯವಿದ್ದರೆ ಆ ಸಂಹಿತೆಯನ್ನು ಬದಲಾಯಿಸಲು ಸಹ ಹೋರಾಡಬೇಕಾಗುತ್ತದೆ. ಆದರೆ ಯಾವ ಸಂಹಿತೆಯೂ ಬೇಡವೆನ್ನುವುದು ಸಾಧ್ಯವಿಲ್ಲ. ಈ ನೆಲೆಯಲ್ಲಿ ನಿಂತು ನೋಡಿದರೆ ಭಯೋತ್ಪಾದಕರ ತರ್ಕದಲ್ಲಿ ಹುರುಳಿಲ್ಲ, ಅದಕ್ಕೆ ಮಾನ್ಯತೆ ಕೂಡದು. ಅದಕ್ಕೆ ಮಾನ್ಯತೆ ನೀಡಿದರೆ, ಸಂಘಪರಿವಾರವು ಗುಜರಾತಿನಲ್ಲಿ ನಡೆಸಿದ ಕೋಮುಹತ್ಯೆಗಳನ್ನು ಕೂಡ ಪ್ರತೀಕಾರದ ಕ್ರಿಯೆಯೆಂದು ಒಪ್ಪಿದಂತಾಗುತ್ತದೆ. ಪ್ರತಿಯೊಂದು ಅನ್ಯಾಯಕ್ಕೂ ಪ್ರತಿಕ್ರಿಯೆ ಉಂಟು. ಆದರೆ ಆ ಅನ್ಯಾಯದ ಹಿಂದಿನ ಅನ್ಯಾಯವೂ ಇರಬಹುದಲ್ಲ! ಹಾಗಾದರೆ ಮೂಲ ಅನ್ಯಾಯ ಯಾವುದು ಮತ್ತು ಅದನ್ನು ಗುರುತಿಸುವುದು ಹೇಗೆ?

ಆದ್ದರಿಂದ, ಭಯೋತ್ಪಾದಕರ ಕೊಲ್ಲುವ ಕೃತ್ಯಗಳಿಗೆ ಕಾರಣ ಹುಡುಕುವುದಕ್ಕಿಂತಲೂ ಅವರು ಇನ್ನು ಮುಂದೆ ಹಾಗೆ ಮಾಡದಿರಬೇಕಾದರೆ ನಾವೇನು ಮಾಡಬೇಕೆಂಬುದು ಹೆಚ್ಚು ಮುಖ್ಯ. ನಮ್ಮ ದೇಶದಲ್ಲಿ ಸುರಕ್ಷತಾ ವಿಧಾನಗಳು ಈ ದಿಸೆಯಲ್ಲಿ ಸಮಗ್ರವಾಗಿ ರೂಪುಗೊಳ್ಳಬೇಕಾಗಿದೆ. ಕಾನೂನು ಬಿಗಿಗೊಳಿಸುವುದು, ಪೊಲೀಸ್ ದಳಗಳು ಹೆಚ್ಚು ಅಚ್ಚುಕಟ್ಟಾಗಿ ಕಾರ್ಯಾಚರಣೆ ನಡೆಸುವುದು, ನ್ಯಾಯಾಲಯಗಳಲ್ಲಿ ಅಪರಾಧಗಳ ಮೊಕದ್ದಮೆಗಳನ್ನು ನಡೆಸುವ ವಿಧಾನದಲ್ಲಿ ಬದಲಾವಣೆ, ಇತ್ಯಾದಿಗಳೆಲ್ಲಾ ಅದರಲ್ಲಿ ಸೇರುತ್ತವೆ. ಆದರೆ ಇದನ್ನೆಲ್ಲಾ ಮಾಡಬಹುದಾದ್ದು ಪ್ರಭುತ್ವ ಮಾತ್ರ. ಹಾಗಿದ್ದರೆ ಸಾಮಾನ್ಯ ನಾಗರಿಕರ ಪಾತ್ರವೇನು?

ಸಾಮಾನ್ಯವಾಗಿ ಜನರು ಒಂದಲ್ಲ ಒಂದು ಮತಧರ್ಮಕ್ಕೆ ಸೇರಿರುವುದಾಗಿ ಭಾವಿಸುತ್ತಾರೆ. ಅದರಲ್ಲಿ ಅವರಿಗೇನೋ ಸಾಂತ್ವನ ದೊರೆಯುತ್ತಿರಬಹುದು. ಸುತ್ತಣ ಪ್ರಪಂಚವನ್ನು ನೋಡುವಾಗ ಇವರೆಲ್ಲಾ ತಮ್ಮ ತಮ್ಮ ಮತಧರ್ಮಗಳ ಪ್ರೇರಣೆಗೆ ಒಳಗಾಗಿರುವ ಸಾಧ್ಯತೆಯುಂಟು. ಮತಧರ್ಮಗಳನ್ನು ಒಬ್ಬೊಬ್ಬರೂ ತಮ್ಮ ಅನುಭವದ ಹಿನ್ನೆಲೆಯಿಂದ ಮಾಪನ ಮಾಡಬಹುದು ಮತ್ತು ಅದರಿಂದ ಪ್ರಭಾವಿತರಾಗಿರಬಹುದು. ಭಯೋತ್ಪಾದಕರು ಇದಕ್ಕೆ ಹೊರತಲ್ಲ. ಅವರ ಕಾರ್ಯಾಚರಣೆಯು ಸ್ವಂತದ ಮತಧರ್ಮದ ಚೌಕಟ್ಟಿನಲ್ಲಿ ಬಾರದಿರಬಹುದು, ಆದರೆ ಬರುತ್ತದೆಂದು ಅವರು ಭ್ರಮಿಸುತ್ತಾರೆ. ಬಿನ್ ಲಾಡೆನ್, ಸಾಧ್ವಿ ಪ್ರಜ್ಞಾ, ಎಲ್ಲರೂ ಹೀಗೆ ಭಾವಿಸಿಕೊಳ್ಳುತ್ತಾ ತಮ್ಮ ಮತ ಧರ್ಮದ 'ರಕ್ಷಣೆ' ಮಾಡುತ್ತಿರುವುದಾಗಿ ತಿಳಿಯುತ್ತಾರೆ. ಮುಜಾಹಿದೀನ್ ಬಣವು ತನ್ನ ಕಾರ್ಯಾಚರಣೆಯನ್ನು ''ಭಾರತದ ಮುಸಲ್ಮಾನರ ಪರ''ವಾದದ್ದೆಂದು ಹೇಳಿಕೊಳ್ಳುವಂತೆ ಇತರರೂ ಯಾರದೋ ಪರವಾದವರೆಂದು ಘೋಷಿಸಿಕೊಳ್ಳಬಹುದು.

ಆದ್ದರಿಂದ ನಾವು ಮೊದಲು ಮಾಡಬೇಕಾದ ಕೆಲಸವೆಂದರೆ ಭಯೋತ್ಪಾದಕರನ್ನು ಅವರ ಘೋಷಿತ ಮತಧರ್ಮದಿಂದ ಪ್ರತ್ಯೇಕಿಸುವುದು. ಯಾಕೂಬ್ ಮೆಮೋನ್ ಮುಂಬೈ ಬಾಂಬ್ ಸಿಡಿತದ ಹೊಣೆಗಾರನಾದರೆ ಮುಸಲ್ಮಾನ ಉಲೇಮಾಗಳು ಮೊದಲು ಅವನನ್ನು ತಮ್ಮ ಧರ್ಮಪಂಥದಿಂದ ಹೊರಹಾಕಬೇಕು. ''ನೀನು ನಮ್ಮ ಪಂಥಕ್ಕೆ ಸೇರಲು ಅನರ್ಹ'' ಎಂದು ಬಹಿರಂಗವಾಗಿ ಅವರು ಅವನಿಗೆ ಹೇಳಬೇಕು. ಸಾಧ್ಯವಾದರೆ ಅವನ ಮುಸಲ್ಮಾನ ಹೆಸರನ್ನು ಕಿತ್ತುಹಾಕಿ ಅವನನ್ನು ಯಾವನೋ ಕ-ಗ-ಚ ಎಂದು ಕರೆಯಬೇಕು. ಇಂತಹ ಉಗ್ರ ಸಾಮಾಜಿಕ ಬಹಿಷ್ಕಾರದಿಂದ ಏನಾಗುತ್ತದೆಂಬ ಅಂಜಿಕೆ ಬೇಡ. ಮೊದಲಿಗೆ ಅದು ಅವನ ವ್ಯಕ್ತಿತ್ವವನ್ನು ಹಿಂಡಿ ಹಿಪ್ಪೆ ಮಾಡುತ್ತದೆ, ತಾನು ತನ್ನ ಮತಧರ್ಮಕ್ಕೆ ನೀಡುವ ವ್ಯಾಖ್ಯಾನವು ಅಸಂಗತವೆಂದು ಅವನು ತಿಳಿಯ ಬೇಕಾಗುತ್ತದೆ, ಅವನ ಧಾರ್ಷ್ಟ್ಯವನ್ನು ಮುರಿಯುತ್ತದೆ. ಮತಧರ್ಮವು ಭಯೋತ್ಪಾದನೆಗೆ ಪ್ರೇರಣೆ ನೀಡುತ್ತದೆಂಬ ಮಿಥ್ಯೆ ಮತ್ತು ಮತಧರ್ಮದ ರಕ್ಷಣೆಗೆ ಭಯೋತ್ಪಾದನೆ ಅಗತ್ಯವೆಂಬ ಮಿಥ್ಯೆ, ಎರಡನ್ನೂ ಹೋಗಲಾಡಿಸಬೇಕು. ಈ ದೃಷ್ಟಿಯಿಂದ ''ಸಾಮಾಜಿಕ ಮತ್ತು ಮತಧಾರ್ಮಿಕ ಬಹಿಷ್ಕಾರವು'' ಪ್ರಯೋಜನ ನೀಡಬಹುದು. ಎಂತೆಂಥದೋ ಕಾರಣಗಳಿಗೆ 'ಫತ್ವಾ' ನೀಡುವ ಬದಲು 'ದರ್ ಉಲೂಂ' ಸಂಸ್ಥೆಯು ಭಯೋತ್ಪಾದನೆಯ ವಿರುದ್ಧ ಫತ್ವಾ ನೀಡಬಹುದು, ಹಿಂದು ಮತಧರ್ಮದ ಜಗದ್ಗುರುಗಳೂ ಅಂಥದೇ ಪ್ರಕ್ರಿಯೆಯ ಆಯ್ಕೆ ಮಾಡಿಕೊಳ್ಳಬಹುದು. ರೋಮಿನ ಪೋಪ್ ಸಹ ಆ ಹಾದಿಯಲ್ಲಿ ನಡೆಯಬಹುದು.

ಪ್ರಾಚೀನ ಭಾರತದಲ್ಲಿ ಈ ರೀತಿಯ ಸಾಮಾಜಿಕ ಬಹಿಷ್ಕಾರ ಮತ್ತು ಮತಧರ್ಮದಿಂದ ಹೊರದೂಡುವಿಕೆ ಪ್ರಚಲಿತವಾಗಿತ್ತು. ಆಳುವ ದೊರೆ ಬದಲಾದರೂ ಪ್ರಾಚೀನ ಭಾರತದ ಸಮಾಜದಲ್ಲಿ ಕಲ್ಲೋಲ ಉಂಟಾಗದಿದ್ದುದಕ್ಕೆ ಅದೂ ಒಂದು ಕಾರಣವಾಗಿದ್ದಿರ ಬೇಕು. ಪ್ರಾಚೀನ ಭಾರತವು ಎಲ್ಲ ಶಿಕ್ಷೆಗಳಿಗೂ ಪ್ರಭುತ್ವದತ್ತಲೇ ಮುಖ ಮಾಡುತ್ತಿರಲಿಲ್ಲ, ಸಮಾಜವು ಸ್ವಾಯತ್ತವಾಗಿ ಶಿಕ್ಷೆಯನ್ನು ನೀಡುವ ಪದ್ಧತಿಯನ್ನು ಬೆಳೆಸಿಕೊಂಡಿತ್ತು. ಆದರೆ ಅಂದಿನ ಸಾಮಾಜಿಕ ಅಡ್ಡ ಮಾರ್ಗಗಳು ಇಂದಿನ ಭಯೋತ್ಪಾದಕ ಅಡ್ಡಮಾರ್ಗಗಳಂತೆ ಇರಲಿಲ್ಲ. ಯಾವುದೋ ಹಳ್ಳಿಯಲ್ಲಿ ಜರುಗಬಹುದಾದ ಅಂತರ್ಜಾತೀಯ ವಿವಾಹವನ್ನು ಗ್ರಾಮ ಪಂಚಾಯತಿಯು ಇಂದು ಬಹಿಷ್ಕರಿಸಿದರೆ ಅದು ಹೆಮ್ಮೆಯ ವಿಷಯ ವಾಗುವುದಿಲ್ಲ; ಆದರೆ ಅಂದು ಹಾಗೆ ಮಾಡಲಾಗುತ್ತಿತ್ತು. ಇಂದು ಯಾವ ಸಂದರ್ಭದಲ್ಲಿ ಬಹಿಷ್ಕಾರ ಹೇರಬೇಕೆಂಬುದನ್ನು ವಿವೇಚನೆಯಿಂದ ತೀರ್ಮಾನಿಸಿಕೊಳ್ಳಬೇಕು, ಅಷ್ಟೆ. ಭಯೋತ್ಪಾದಕರನ್ನು ಸಮಾಜದ ಪರಿಧಿಯಿಂದ ಹೊರಗಿಡಲು ಮಾತ್ರವೇ ಸಾಮಾಜಿಕ ಮತ್ತು ಮತಧಾರ್ಮಿಕ ಬಹಿಷ್ಕಾರವನ್ನು ಬಳಸಿಕೊಳ್ಳಬೇಕು.

ಗಾಂಧೀಜಿಯನ್ನು ಗೋಡ್ಸೆ ಕೊಂದ ಸಂದರ್ಭದಲ್ಲಿ ನಾವಿಂತಹ ಕೆಲಸ ಮಾಡಬೇಕಾಗಿತ್ತು. ಗೋಡ್ಸೆಯನ್ನು ಹಿಂದು ಮತಧಾರ್ಮಿಕ ಚೌಕಟ್ಟಿನಿಂದ ಹೊರಗಿರಿಸಿದ್ದಿದ್ದರೆ ಹಿಂದುಧರ್ಮಕ್ಕೆ ಕಳಂಕ ಅಂಟಿಕೊಳ್ಳುತ್ತಿರಲಿಲ್ಲ. ಗೋಡ್ಸೆಗೆ ಭಾರತದ ಪ್ರಜಾಹಕ್ಕನ್ನು ಹಿಂತೆಗೆದುಕೊಂಡು ಹಿಂದುಧರ್ಮದಿಂದ ದೂಡಿದ್ದರೆ ಮುಂದಿನ ದಶಕಗಳಲ್ಲಿ ಆ ಮಾದರಿಯನ್ನು ಅನುಸರಿಸಲು ಸಾಧ್ಯವಾಗುತ್ತಿತ್ತು. ಹಿಂದುಧರ್ಮದ ಹೆಸರಿನಲ್ಲಿ ಬೆಳೆಯುತ್ತಿರುವ ಜಡ್ಡುತನ ಮತ್ತು ಮತಾಂಧತೆಯನ್ನು ಅಂದೇ ಚಿವುಟಿಹಾಕಬಹುದಿತ್ತು. ಅಂಥದೇ ಮಾದರಿಯನ್ನು ಬೇರೆ ಮತಧರ್ಮಗಳ ಭಯೋತ್ಪಾದಕರ ಸಂಬಂಧದಲ್ಲೂ ಅನುಸರಿಸಬೇಕು. ಪ್ರಭುತ್ವದಿಂದಲೇ ಎಲ್ಲವನ್ನೂ ನಿರೀಕ್ಷಿಸುವುದಕ್ಕೆ ಪರ್ಯಾಯವಾಗಿ ಇದು ಸಮಾಜದ ಮಧ್ಯ ಪ್ರವೇಶಕ್ಕೆ ಒಂದು ಹಾದಿಯನ್ನು ತೋರಿಸುತ್ತದೆ. ಮತಧರ್ಮಗಳನ್ನು ಮುನ್ನಡೆಸುವ ಕರ್ತವ್ಯವನ್ನು ನಿರ್ವಹಿಸುತ್ತೇವೆಂದು ಭಾವಿಸಿರುವ ಎಲ್ಲ ''ಗುರು''ಗಳೂ ಇದನ್ನು ಗಮನಿಸಬೇಕು.

ಮುಂಬೈ ತನು ಮೆಹ್ತಾ ತಿವಾರಿ

---

'ಹೊಸತು'ವಿನ ಜನವರಿ ೨೦೦೯ರ ಸಂಚಿಕೆಯು ವಿಶೇಷ ವಾರ್ಷಿಕ ಸಂಚಿಕೆಯಾಗಿ ಹೊರಬರಲಿದೆ. ಸುಮಾರು ೨೫೦ ಪುಟಗಳ ಈ ಸಂಚಿಕೆಯನ್ನು ಈಗ ಸಿದ್ಧಗೊಳಿಸಲಾಗುತ್ತಿದೆ. ಪ್ರತಿ ತಿಂಗಳೂ ೨೮ನೇ ದಿನಾಂಕದಂದು ಪತ್ರಿಕೆಯನ್ನು ಅಂಚೆಗೆ ರವಾನಿಸಲಾಗುತ್ತದೆ. ಜನವರಿ ಸಂಚಿಕೆಯನ್ನು ಡಿಸೆಂಬರ್ ೨೮ರಂದು ರವಾನಿಸಲು ಸಾಧ್ಯವಾಗದು. ಆದ್ದರಿಂದ ಸಂಚಿಕೆಯು ಜನವರಿ ೧೦ರ ವೇಳೆಗೆ ನಮ್ಮ ಓದುಗರಿಗೆ ತಲುಪುತ್ತದೆ. ಓದುಗರು ಮನ್ನಿಸಿ ಸಹಕರಿಸಬೇಕೆಂದು ವಿನಂತಿ.

— ಸಂ

ಈ ತಿಂಗಳು (೩ನೇ ಪುಟದಿಂದ)
ದೇಶದಲ್ಲಿ 'ಅಸ್ಸೋಚಾಮ್' ಎನ್ನುತ್ತಾರೆ. ತನ್ನ ಇತ್ತೀಚಿನ ವರದಿಯಲ್ಲಿ ಈ ಸಂಸ್ಥೆಯು ಒಂದು ಎಚ್ಚರಿಕೆಯನ್ನು ನೀಡಿತ್ತು. ಜಾಗತಿಕ ಹಣಕಾಸು ಮುಗ್ಗಟ್ಟಿನಿಂದಾಗಿ, ದೀಪಾವಳಿಯ ನಂತರ ದೇಶದ ಏಳು ಉದ್ಯಮ ವಿಭಾಗಗಳಲ್ಲಿ ಶೇ. ೨೦ರಿಂದ ೩೦ರಷ್ಟು ಮಂದಿ ಕೆಲಸಗಾರರು ಕೆಲಸ ಕಳೆದುಕೊಳ್ಳಬೇಕಾಗುತ್ತದೆ, ಎಂದು. ಇದು ವಾಸ್ತವದಿಂದ ದೂರವಲ್ಲ. ಆದರೆ ದೊಡ್ಡ ಉದ್ಯಮಿಗಳು, ಚಿದಂಬರಂ ಕೂಟ, ಎಲ್ಲಾ ಅಬ್ಬರ ಮಾಡಿ ಆ ವರದಿಯನ್ನು ಹಿಂತೆಗೆದು ಕೊಳ್ಳುವಂತೆ ಅಸ್ಸೋಚಾಮ್ ಮೇಲೆ ಒತ್ತಡ ಹೇರಿದರು, ವರದಿಯನ್ನು ಮುಚ್ಚಿಹಾಕಿದರು. ''ಮುಕ್ತ ಉದ್ಯಮ''ದ ಹೊಗಳು ಭಟರಾದ ಚಿದಂಬರಂ, ಅಂಬಾನಿ, ಮುಂತಾದ ಬಂಡವಾಳ ವೀರರಿಗೆ ನಾಚಿಕೆಯಾಗಬೇಕು. ಉದ್ಯಮದ ಒಂದು ಸಂಸ್ಥೆಯ ವರದಿಯನ್ನು ಸಹಿಸದ ಈ ಪುಂಡಬಂಡವಾಳಿಗರು ''ಮುಕ್ತತೆ''ಯ ಹರಿಕಾರರು! ರಾಜ್ಯದ ಬೊಕ್ಕಸವನ್ನು ಬರಿದು ಮಾಡುವುದರಲ್ಲಷ್ಟೆ ಇವರ ಮುಕ್ತತೆಯು ಕಂಡುಬರುತ್ತದೆ. ಮೂರು ಇತ್ತೀಚಿನ ಉದಾಹರಣೆ ಗಳಿವೆ : (ಅ) ಟೆಲಿಕಾಂ ವಿಭಾಗದಲ್ಲಿ ಕೇಂದ್ರ ಸರ್ಕಾರವು ಬ್ಯಾಂಡ್ ಹಂಚಿಕೆಯನ್ನು ಮಾಡುವಾಗ ಅವನ್ನು ಕಡಿಮೆ ಹಣಕ್ಕೆ ಪಡೆದ ಖಾಸಗಿ ಉದ್ಯಮಿಗಳು ಅವನ್ನು ಸ್ಥಳೀಯ ಮತ್ತು ವಿದೇಶಿ ಕಂಪನಿಗಳಿಗೆ ಮಾರಿ ಸುಮಾರು ೫೦,೦೦೦ ಕೋಟಿ ರೂಪಾಯಿಗಳ ಲಾಭ ಮಾಡಿಕೊಂಡಿದ್ದಾರೆಂದು ವರದಿಯಾಗಿದೆ. ('ಟೈಂಸ್ ಆಫ್ ಇಂಡಿಯಾ' ಪತ್ರಿಕೆಯ ಒಂದು ಈಚಿನ ಸಂಪಾದಕೀಯದ ಪ್ರಕಾರ ಅದು ೩೫,೦೦೦ ಕೋಟಿ. ಈ ಪತ್ರಿಕೆ ಯಾವಾಗಲೂ ಇಷ್ಟು ನಿಖರವಾಗಿ ಸರ್ಕಾರದ ನೀತಿಯನ್ನು ಖಂಡಿಸುವುದಿಲ್ಲ. ಈಗ ಹಾಗೆ ಮಾಡಿರುವುದಕ್ಕೆ ಏನು ಕಾರಣವೋ!) ಇವರು ಉತ್ಪಾದನೆಯಂತಹ ಉದ್ಯಮಗಳನ್ನು ಬೆಳೆಸುವುದಿಲ್ಲ, ಕೇವಲ ನುಂಗಣ್ಣಗಳಾಗಿ ಬೊಜ್ಜು ಬೆಳೆಸುತ್ತಾರೆ. ಈ ವ್ಯವಹಾರವನ್ನು ಸರ್ಕಾರವೇ ನೇರವಾಗಿ ಮಾಡಿದ್ದರೆ ಅಷ್ಟು ಕೋಟಿಗಳು ರಾಜ್ಯದ ಬೊಕ್ಕಸಕ್ಕೆ ಬರುತ್ತಿರಲಿಲ್ಲವೆ ? ಅದಕ್ಕೆ ಅವಕಾಶ ಕೊಡದೆ ತಮಿಳುನಾಡಿನ ರಾಜ ಎಂಬ ಕೇಂದ್ರ ಸಚಿವರು, ಚಿದಂಬರಂ, ಅಹ್ಲುವಾಲಿಯ, ಎಲ್ಲಾ ಎಷ್ಟು ಕಮಿಷನ್ ಪಡೆದಿರುತ್ತಾರೋ ಯಾರಿಗೆ ಗೊತ್ತು! ಯಾವುದೋ ಕಾಲದ ೬೪ ಕೋಟಿ ಬಫೋರ್ಸ್ ಹಗರಣದ ಬಗ್ಗೆ ಈಗಲೂ ದನಿಯೆತ್ತುವ ನಮ್ಮ ಕೆಲವು ಮಾಧ್ಯಮ ಗಳಿಗೆ ಸಾರ್ವಜನಿಕ ಸಂಪತ್ತಿನ ಬಗ್ಗೆ ಕಾಳಜಿಯಿಲ್ಲ; ಅವರಿಗೆ ಬೇಕಾದ್ದು ಅಂದಿನ ಪ್ರಧಾನಿಯನ್ನು ಬಯ್ಯುತ್ತಿರುವುದು, ಅಷ್ಟೆ. ಆ ಹಗರಣವನ್ನು ಪ್ರಸ್ತಾಪಿಸುತ್ತಿರಬೇಕು, ನಿಜ ; ಆದರೆ ೫೦,೦೦೦ ಕೋಟಿಯನ್ನು ಹಾಡುಹಗಲೇ ರಾಜ್ಯದ ಬೊಕ್ಕಸದಿಂದ ಲೂಟಿ ಮಾಡಿರುವ ವಿಚಾರವು ನಗಣ್ಯವಾಗಿರುವುದೇಕೆ ? ಚಿದಂಬರಂ ಬಹಳ ಸುಸಂಸ್ಕೃತನೆಂಬ ಸುಳ್ಳು ಭಾವನೆಯಿಂದಲೆ ಅಥವಾ ಮಾಧ್ಯಮಗಳ ಪ್ರಮುಖ ಮಾಲಿಕರು ತಮಗೂ ಏನನ್ನಾದರೂ ಚೆನ್ನಾಗಿ ದಕ್ಕಿಸಿಕೊಂಡಿದ್ದಾರೆಂದೆ? ನ್ಯಾಯಾಲಯವು ಸ್ವಯಂ ನಿರ್ಧಾರ ತೆಗೆದುಕೊಂಡು ಈ ಹಗರಣದ ತನಿಖೆ ನಡೆಸಬೇಕು, ಕಂಟ್ರಾಕ್ಟ್‌ಗಳನ್ನು ರದ್ದುಗೊಳಿಸಬೇಕು, ಮತ್ತು ಸಾರ್ವಜನಿಕ ಬೊಕ್ಕಸಕ್ಕೆ ೫೦,೦೦೦ ಕೋಟಿ ನಷ್ಟವಾಗದಂತೆ ನೋಡಿಕೊಳ್ಳಬೇಕು. ಯಾವ ಖಾಸಗಿಯವರಿಗೂ ಕಂಟ್ರಾಕ್ಟ್ ನೀಡದೆ ನೇರವಾಗಿ ಸರ್ಕಾರಿ ಸಂಸ್ಥೆಗಳೇ ಇದನ್ನೆಲ್ಲಾ ನಿಭಾಯಿಸಬಲ್ಲುವೇ ಎಂಬುದನ್ನು ಸಹ ಪರೀಕ್ಷಿಸಬೇಕು. (ಆ) ನೂರು ವರ್ಷಗಳ ಕಾಲ ನಮ್ಮ ದೇಶದ ಅನಿಲದ ಅಗತ್ಯವನ್ನು ಪೂರೈಸಲು ಸಾಧ್ಯವಾಗುವಷ್ಟು ಅಗಾಧ ಅನಿಲವು ಕೃಷ್ಣಾ-ಗೋದಾವರಿ ಬಯಲಿನಲ್ಲಿ ದೊರಕಿದೆಯೆಂದು ಹೇಳುತ್ತಾರೆ. ಅಷ್ಟು ದೊಡ್ಡ ನಿಕ್ಷೇಪವನ್ನು ಹೆಚ್ಚು ಕಡಿಮೆ ಪುಕಸಟ್ಟೆಯಾಗಿ ಕೇಂದ್ರ ಸರ್ಕಾರವು ಅಂಬಾನಿಗೆ ದಾನ ಮಾಡಿದೆ. ಇದರ ಬಾಬ್ತು ಸಾರ್ವಜನಿಕ ಬೊಕ್ಕಸಕ್ಕೆ ಉಂಟಾಗಿರುವ ಮೊತ್ತವನ್ನು ಲೆಕ್ಕ ಹಾಕಲು ಸಾಧ್ಯವಿಲ್ಲ. ಇದು ಖಾಸಗಿ ಬಂಡವಾಳಿಗರ 'ಅಮೂಲ್ಯ ಕೊಡುಗೆ'! (ಇ) ಟಾಟಾ ಕಂಪನಿಯು ಮುಂದೆಂದೋ ಮಾರುಕಟ್ಟೆಗೆ ಬಿಡುಗಡೆ ಮಾಡುತ್ತದೆಂದು ಹೇಳಲಾಗಿರುವ ಒಂದು ಲಕ್ಷ ಬೆಲೆಯ ನ್ಯಾನೋ ಕಾರ್ ಪಶ್ಚಿಮ ಬಂಗಾಳದಿಂದ ಗುಜರಾತಿಗೆ ಬಂದಿತಷ್ಟೆ. ಅದಕ್ಕೆ ಮಮತಾ ಬ್ಯಾನರ್ಜಿ ಮತ್ತು ನರೇಂದ್ರ ಮೋದಿ ತಮ್ಮ 'ಅಮೂಲ್ಯ' ಕಾಣಿಕೆ ನೀಡಿದ್ದಾರೆ; ಒಬ್ಬರು ಓಡಿಸುವುದರಲ್ಲಿ, ಇನ್ನೊಬ್ಬರು ಬಾಚಿಕೊಳ್ಳುವುದರಲ್ಲಿ. ಇದರಿಂದ ಪಶ್ಚಿಮ ಬಂಗಾಳಕ್ಕೆ ಎಷ್ಟು ಹಣ ನಷ್ಟವಾಯಿತೋ ತಿಳಿಯದು, ಆದರೆ ಗುಜರಾತಿಗೆ ಸುಮಾರು ಮೂರು ಸಾವಿರ ಕೋಟಿ ಮಣ್ಣುಪಾಲಾಗಿದೆ. ಟಾಟಾಗೆ ಕೊಟ್ಟಿರುವ ಭೂಮಿಗೆ ಹಣವಿಲ್ಲ, ಉತ್ಪಾದನೆಯ ಮೇಲೆ ಹತ್ತು ವರ್ಷ ತೆರಿಗೆಯಿಲ್ಲ, ವಿದ್ಯುತ್ತಿಗೆ ಹಣ ತೆರಬೇಕಾಗಿಲ್ಲ. ಕಡೆಗೆ ಸಿಂಗೂರಿನಿಂದ ಯಂತ್ರಗಳನ್ನು ಸಾಗಿಸಲು ಸಹ ಗುಜರಾತ್ ಸರ್ಕಾರ (ಅಂದರೆ ಜನ) ಎಪ್ಪತ್ತು ಕೋಟಿ ತೆರುತ್ತಾರೆ. ಈ ಅವ್ಯವಹಾರದಲ್ಲಿ ಮೋದಿ ಪಕ್ಷಕ್ಕೆ ಎಷ್ಟು ಹಣ ಲಾಭವಾಗಿ ದೊರೆತಿದೆಯೋ ತಿಳಿಯದು. ಆದರೆ ''ಖಾಸಗಿ ಬಂಡವಾಳಿಗ'' ಎನಿಸಿಕೊಳ್ಳುವ ಟಾಟಾ ಕಂಪನಿಯು ಸಂಪೂರ್ಣ ವಾಗಿ ಸಾರ್ವಜನಿಕರ ಹಣದಿಂದ ಉದ್ದಿಮೆ ನಡೆಸುತ್ತಿದೆ. ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಇದನ್ನು ಎಲ್ಲ ಖಾಸಗಿ ಕಂಪನಿಗಳ ಬಗೆಗೂ ಸಾಮಾನ್ಯೀಕರಿಸಿ ಹೇಳಬಹುದು.

ಇಂತಹ ಬಂಡವಾಳಿಗ ಕೂಟಗಳು ಮತ್ತು ಅವುಗಳ ಪೋಷಣೆಗಾಗಿ ಹಾಗೂ ಪೋಷಣೆಯಿಂದ ಕೆಲಸ ಮಾಡುತ್ತಿರುವ ಕೇಂದ್ರ ಸರ್ಕಾರವು ಆರ್ಥಿಕ ನೀತಿಗಳನ್ನು ನಿರೂಪಿಸುವಾಗ ಅಮೆರಿಕಾ ಬಿಕ್ಕಟ್ಟಿನಿಂದ ನಮ್ಮ ದೇಶವು ಹೊಡೆತಕ್ಕೆ ಸಿಲುಕದಂತೆ ನಿರ್ಧಾರಗಳನ್ನು ತೆಗೆದುಕೊಳ್ಳುತ್ತದೆಂದು ನಿರೀಕ್ಷಿಸಬಹುದೆ ?

*    *    *

ರಾಜ ಠಾಕ್ರೆಯ ಪ್ರತಾಪ ಈಗ ಮುಂಬೈನಲ್ಲಿ ಮನೆಮಾತಾಗಿದೆ. ಸಂವಿಧಾನವು ನೀಡಿರುವ ಹಕ್ಕಿನ ಬಗ್ಗೆ ಪ್ರಶ್ನೆ ಎತ್ತುವವರು ವಿರಳ. ಎಲ್ಲ ಪ್ರಜೆಗಳೂ ಎಲ್ಲಿ ಬೇಕಾದರೂ ವಾಸವ್ಯ ಹೂಡಬಹುದು. ಆದರೆ ಅದಕ್ಕೆ ಪ್ರತಿರೋಧವೇ ಇರಕೂಡದೆಂದು ನಿರೀಕ್ಷಿಸುವುದು ಕಷ್ಟ. ಅಸ್ಸಾಂನಂತಹ ರಾಜ್ಯಗಳಲ್ಲಿ ವಲಸೆಗಾರರ ಸಮಸ್ಯೆಯು ಬೃಹತ್ ಚಳುವಳಿಗಳಿಗೆ ಕಾರಣವಾಯಿತು. ಕರ್ನಾಟಕದಲ್ಲಿ ಸಹ ಇದೊಂದು ದೊಡ್ಡ ಪ್ರಮಾಣದ ಸಮಸ್ಯೆಯಾಗಿ ಬೆಳೆದರೆ ಆಶ್ಚರ್ಯವಿಲ್ಲ. ಬೆಂಗಳೂರಿನ ಬಡಾವಣೆಗಳನ್ನು ನೋಡಿದರೆ ಇದು ತಿಳಿಯುತ್ತದೆ. ರಾಜ ಠಾಕ್ರೆ ಅನುಸರಿಸುವ ಮಾರ್ಗ ಮತ್ತು ಅದರ ಉದ್ದೇಶ ಪ್ರಶ್ನಾರ್ಹವಾದ್ದು. ಬಾಳ ಠಾಕ್ರೆ ೧೯೬೦-೭೦ರ ದಶಕಗಳಲ್ಲಿ ಮುಂಚೂಣಿಗೆ ಬಂದಿದ್ದೇ ಹಾಗೆ. ಆಗ ದಕ್ಷಿಣ ಭಾರತದವರು ಹಲ್ಲೆಗೆ ಗುರಿಯಾಗಿದ್ದರು, ಈಗ ಉತ್ತರ ಭಾರತದವರ ಸರದಿ. ಬಿಹಾರ, ಉತ್ತರ ಪ್ರದೇಶ, ಮುಂತಾದ ರಾಜ್ಯಗಳ ಅನಭಿವೃದ್ಧಿಯೂ ರಾಜ ಠಾಕ್ರೆಯಂಥವರಿಗೆ ಗ್ರಾಸ ಒದಗಿಸುತ್ತದೆ. ಒಂದು ರಾಜ್ಯದೊಳಗೆ ಅಸಮತೋಲನ ಇರಕೂಡದೆಂಬಂತೆ, ಇಡೀ ದೇಶದಲ್ಲೂ ಅಸಮತೋಲನ ಇಲ್ಲದಂತೆ ಯೋಜನೆಗಳನ್ನು ಹಾಕಿಕೊಳ್ಳಬೇಕು. ಇಲ್ಲವಾದಲ್ಲಿ ರಾಜ ಠಾಕ್ರೆಯಂಥವರ ಫ್ಯಾಸಿಸ್ಟ್ ಬಣಗಳನ್ನು ತಡೆಯುವುದು ಕಷ್ಟವಾಗುತ್ತದೆ. ಈ ಸಂಬಂಧದಲ್ಲಿ ಹೊರಬಂದಿರುವ ಇನ್ನೊಂದು ಮಾಹಿತಿ ಮುಖ್ಯವಾದುದು: ರಾಜ್ ಠಾಕ್ರೆ ಮತ್ತು ಅವನ ಬಣದ ನಾಯಕರಿಗೂ ನಗರಗಳಲ್ಲಿ ಭೂಮಿಯನ್ನು ಒಳಹಾಕಿಕೊಳ್ಳುವ ಮಾಫಿಯಾಗಳಿಗೂ ನಿಕಟ ಸಂಪರ್ಕವಿದೆಯೆಂದು ವರದಿಯಾಗಿದೆ. ಗುಟ್ಟಾಗಿ ಭೂಮಿ ಕಬಳಿಸಲು ಬಹಿರಂಗವಾಗಿ ''ಮರಾಠಿ ಮನುಷ್ಯ''ನ ಹಿತದ ಬಗ್ಗೆ ರಾಜ್ ಉಜ್ವಲವಾದ ಮಾತುಗಳನ್ನಾಡಬೇಕು! ನಮ್ಮಲ್ಲೂ ಈ ಸಂತತಿಯವರು ಚಿಗುರೊಡೆಯುತ್ತಿದ್ದಾರೆಯೆ ? ವಿಶ್ಲೇಷಣೆ ಮಾಡಿಕೊಂಡು ತಿಳಿಯಬೇಕು.

ಎಲ್ಲ ರಾಜ್ಯಗಳು ಮತ್ತು ಪಕ್ಷಗಳು ಗಮನಿಸಲೇಬೇಕಾದ ಇನ್ನೊಂದು ಸಂಗತಿಯಿದೆ. ನಮ್ಮ ದೇಶದಲ್ಲಿ ಔದ್ಯೋಗಿಕ ಅಭಿವೃದ್ಧಿಯ ಅವಶ್ಯಕತೆಯ ಬಗ್ಗೆ ಬಹುತೇಕ ಎಲ್ಲರೂ ಸಹಮತ ಹೊಂದಿದ್ದಾರೆ. (ಆದರೂ ಆಗಾಗ್ಗೆ ಗಾಂಧೀಜಿಯ ಆದರ್ಶವನ್ನು ನೆನೆದು ಗುಡಿ ಕೈಗಾರಿಕೆಗಳ ಶ್ರೇಷ್ಠತೆಯನ್ನು ಕೊಂಡಾಡುತ್ತಾರೆ. ಗಾಂಧೀಜಿಯನ್ನು ಇನ್ನೂ ಪೂರ್ತಿ ಮರೆತಿಲ್ಲವೆಂಬುದಕ್ಕೆ ಇದೊಂದೇ ಅವರು ನೀಡಬಹುದಾದ ಪುರಾವೆ !) - ಬೃಹತ್ ಉದ್ಯಮಗಳು ಎಲ್ಲೇ ಸ್ಥಾಪನೆಗೊಳ್ಳಲಿ, ಅಲ್ಲಿ ಬೇರೆ ರಾಜ್ಯಗಳಿಂದಲೂ ದುಡಿಮೆಗೆ ಬರಬೇಕಾಗುವುದು ಸಹಜ. ಹೊರರಾಜ್ಯದ ಬಂಡವಾಳ ಬೇಕು, ಆದರೆ ದುಡಿಮೆಗಾರರು ಬೇಡ, ಎಂಬುದು ವಂಚನೆಯ ಮಾತು, ಅಸಾಧ್ಯದ ಮಾತು. ಬೆಂಗಳೂರಿನಲ್ಲಿ ಇಸ್ರೋ ಇರಬೇಕಾದರೆ ಹತ್ತಾರು ರಾಜ್ಯಗಳ ವಿಜ್ಞಾನಿಗಳು ಇಲ್ಲಿರಬೇಕಾಗುತ್ತದೆ. ಮುಂಬೈನಲ್ಲಿ 'ಮರಾಠಿ ಮಾಣುಸ' ಮಾತ್ರ ಇರಬೇಕೆಂದು ಠಾಕ್ರೆಗಳು ಹೇಳುವಾಗ ಅವರಿಗೆ ಇದೆಲ್ಲಾ ತಿಳಿದೇ ಇರುತ್ತದೆ. ಸಾಮಾನ್ಯ ದರ್ಜೆಯ ಕೆಲಸಗಾರರು ಹೊರಗಿನಿಂದ ಬರಕೂಡದೆಂದು ಆಗ್ರಹಿಸಿದರೆ, ಆಗ ಬರುವ ಪ್ರಶ್ನೆ : ಎಲ್ಲಕ್ಕೂ ಬೇಕಾಗುವಷ್ಟು ಮಂದಿ ಮಹಾರಾಷ್ಟ್ರದಿಂದಲೇ ಸಿಗಲು ಸಾಧ್ಯವೇ ? ಸರ್ಕಾರಿ ಸಂಸ್ಥೆಗಳಲ್ಲಿ ಕೆಲವು ಸಾಮಾನ್ಯ ಹುದ್ದೆಗಳಿಗೆ ಸ್ಥಳೀಯರಿಗೆ ಆದ್ಯತೆ ಇರಬೇಕೆಂದಷ್ಟೇ ಆಗ್ರಹಿಸುವುದು ಕಾನೂನು ರೀತ್ಯಾ ಸಮ್ಮತವಾದ್ದು, ಮಿಕ್ಕಂತೆ ಸಂಪೂರ್ಣ ನಿಗ್ರಹ ಸಾಧ್ಯವಿಲ್ಲ. ಬೆಂಗಳೂರಿನಲ್ಲಿ ಅತಿಹೆಚ್ಚಿನ ಬಡಗಿಗಳು ಉತ್ತರ ಪ್ರದೇಶ ಮತ್ತು ಬಿಹಾರಗಳವರು; ಮನೆ ಕಟ್ಟುವ ಕೆಲಸಗಾರರಲ್ಲಿ ತಮಿಳುನಾಡಿನವರು ಹೇರಳವಾಗಿ ಇದ್ದಾರೆ. ಅವರನ್ನೆಲ್ಲಾ ಕಳಿಸಿಬಿಟ್ಟರೆ ಅವರ ಸ್ಥಾನಗಳನ್ನು ತುಂಬಲು ಎಷ್ಟು ಕನ್ನಡಿಗರನ್ನು ತರಬಲ್ಲೆವು ? ರಾಜ ಠಾಕ್ರೆ ಇದನ್ನೆಲ್ಲಾ ತಿಳಿದಿದ್ದು ಕೂಡ ಠಕ್ಕಿನ ಮಾತನಾಡುತ್ತಾನೆ.

*    *    *

ಭಯೋತ್ಪಾದನೆಯ ಇನ್ನೊಂದು ಭಯಾನಕ ಮುಖ ಈಗ ಹೊರಗೆ ಕಾಣುವಂತಾಗಿದೆ. ಸಾಧ್ವಿ ಪ್ರಜ್ಞಾ ಉದ್ಘಾಟಿಸಿದ ಕಾರ್ಯಕ್ರಮದ ಆಳ ಮತ್ತು ಹರಹು ಗಂಭೀರವಾಗಿರುವಂತೆ ತೋರುತ್ತಿದೆ. ಕಂಚಿಯ ಸ್ವಾಮಿ ತನ್ನ ಅನುಯಾಯಿಯ ಹತ್ಯೆಗೆ ಸಂಚು ಹೂಡಿದ್ದನೆಂಬುದು ಜನಕ್ಕೆ ಮತ್ತು ಬಹುಮಟ್ಟಿಗೆ ನ್ಯಾಯಾಲಯಕ್ಕೂ ಮರೆತುಹೋಗಿದೆ. ಈಗ ಸಾಧ್ವೀಮಣಿಯ ನೇತೃತ್ವದಲ್ಲಿ ಸೈನ್ಯದ ಅಧಿಕಾರಿಗಳು ತಮ್ಮದೇ ಆದ ವಿಶಿಷ್ಟ ರೀತಿಯ ಭಯೋತ್ಪಾದಕತೆಯಲ್ಲಿ ನಿರತರಾಗಿರುವ ಸುದ್ದಿಗಳು ಬರುತ್ತಿವೆ. ಅಯೋಧ್ಯೆಯಲ್ಲಿ ಮಸೀದಿ ಒಡೆದುಹಾಕಿದ ಮೇಲೆ ಕೈಗಳು ಕಚ್ಚುತ್ತಿದ್ದಿರಬೇಕು, ಆದ್ದರಿಂದ ಅವು ಬಾಂಬ್ ಸಿಡಿಸುವ ''ದೇಶಭಕ್ತಿ ಕ್ರಿಯೆ''ಯತ್ತ

ಮಿಸಿವೆ. ರಾಜನಾಥ್ ಸಿಂಗ್ ಮತ್ತು ಅದ್ವಾನಿ ಮುಂದಾಳತ್ವದಲ್ಲಿರುವ ರಾಜಕೀಯ ಯಕರು ಸಹಜವಾಗಿಯೇ ಇದೆಲ್ಲ ಸುಳ್ಳು ಆರೋಪಗಳೆಂದು ಕೂಗಾಡುತ್ತಿದ್ದಾರೆ. ೀತಿಯು ಮೊಸರು ತಿಂದು, ಮೇಕೆಯ ಬಾಯಿಗೆ ಸ್ವಲ್ಪ ಬಳಿದು, ಅದನ್ನು ದೂಷಣೆಗೆ ಲುಕಿಸುವಂತೆ ನಮ್ಮ ಸಾಧ್ವೀಮಣಿಗಳು ಹಾಗೂ ಸೈನ್ಯಾಧಿಕಾರಿಗಳು ಯಾವ ಯೋತ್ಪಾದಕ ಕೃತ್ಯಗಳನ್ನು ನಡೆಸಿ ಅಲ್ಪಸಂಖ್ಯಾತರ ಗುಂಪಿನಿಂದ ಬಂದ ಭಯೋತ್ಪಾದಕರ ಣಗಳಿಗೆ ಅದನ್ನು ಆರೋಪಿಸಿದ್ದಾರೋ ಮುಂದೆ ತಿಳಿದುಬರಬಹುದು. ಮಾಲೆಗಾಂವ್‌ನಲ್ಲಿ ಯೋತ್ಪಾದಕ ಕೃತ್ಯಗಳನ್ನೆಸಗಿದ್ದಾರೆನ್ನಲಾದ ಲೆಫ್ಟಿನೆಂಟ್ ಕರ್ನಲ್ ಪ್ರಸಾದ್ ಶ್ರೀಕಾಂತ್ ರೋಹಿತ್ ಮುಂತಾದವರ ವಿಚಾರಣೆಯು ಕೆಟ್ಟ ರಾಜಕೀಯದ ನಿದರ್ಶನವೆಂದು ರತೀಯ ಜನತಾ ಪಕ್ಷದ ದೊಡ್ಡ ಹಾಗೂ ಚಿಲ್ಲರೆ ನಾಯಕರು ಹೇಳಿದ್ದಾರೆ. ುಸಲ್ಮಾನರು ಆಪಾದಿತರಾದಾಗ ಅದ್ವಾನಿಯವರು ಹೀಗೆಂದೂ ಹೇಳಿರಲಿಲ್ಲ. ಅಂದರೆ, ಯೋತ್ಪಾದಕರಲ್ಲಿ ಸಹ ಕೋಮುಗಳನ್ನಾಧರಿಸಿದ ತಾರತಮ್ಯವಿರಬೇಕೆಂದರ್ಥ. ಾಗಾದರೆ, ಭಯೋತ್ಪಾದನೆಯ ನಿಗ್ರಹ ಹೇಗೆ ? ಇನ್ನು ಮುಂದೆ ಅದ್ವಾಣಿಯವರು ಕ್ಸಲೀಯರನ್ನು ಟೀಕಿಸಬಾರದು, ಏಕೆಂದರೆ ಕೆಲವು ವಕ್ತಾರರ ಪ್ರಕಾರ ನಕ್ಸಲೀಯರ ರುದ್ಧದ ಕಾರ್ಯಾಚರಣೆಯು ಕೆಟ್ಟ ರಾಜಕೀಯವೆನಿಸಿಕೊಂಡಿದೆ. ಅದ್ವಾನಿಯವರ ಹಿಕೆಗೆ ಇನ್ನೊಂದು ವ್ಯಾಪ್ತಿಯೂ ಇದೆ: ಕೆಲವು ಆಶಯಗಳ ಪೂರೈಕೆಗೆ ಭಯೋತ್ಪಾದನೆಯ ಮ ಸಾಧುವಾದುದು, ಎಂಬುದು ಆ ವ್ಯಾಪ್ತಿ. ಹಾಗಿದ್ದರೆ ಕಾನೂನು ಮತ್ತು ಸುವ್ಯವಸ್ಥೆ ಂಬುದು ಅರ್ಥವಿಲ್ಲದ ಮಾತಾಗುತ್ತದೆ. ಎರಡೂ ಭಯೋತ್ಪಾದಕ ಗುಂಪುಗಳು ಹೇಗಾದರೂ ಸ್ತಿತ್ವಕ್ಕೆ ಬಂದಿರಲಿ, ಅವು ಕೇವಲ ತಮ್ಮ ತಮ್ಮೊಳಗೆ ವ್ಯಾಜ್ಯ ಮಾಡಿಕೊಳ್ಳುವುದಿಲ್ಲ. ರಡು ಗಂಪುಗಳೂ ನಾಗರಿಕ ಸಮಾಜವನ್ನೇ ಹಿಂಸೆಗೆ ಗುರಿಮಾಡುತ್ತವೆ. ಭಾರತೀಯ ನತಾ ಪಕ್ಷವು ದೇಶದಲ್ಲಿ ಆಡಳಿತ ಪಕ್ಷವಾಗಿತ್ತು ಮತ್ತು ಮತ್ತೊಮ್ಮೆ ಆ ಸ್ಥಾನಕ್ಕೆ ಬರಲು ಚ್ಛಿಸುತ್ತಿದೆ. ಹೀಗಿರುವಾಗ ಭಯೋತ್ಪಾದಕತೆಯನ್ನು ಅಪಾಯಕಾರಿ ರಾಜಕಾರಣಕ್ಕೆ ಸ್ತುವನ್ನಾಗಿಸಿಕೊಳ್ಳಕೂಡದೆಂಬ ಕನಿಷ್ಠ ಪ್ರಜಾಪ್ರಭುತ್ವವಾದಿ ಪ್ರಜ್ಞೆ ಆ ಪಕ್ಷಕ್ಕೆ ಅಗತ್ಯವಾಗಿದೆ.

* * *

ಹೈದರಾಬಾದ್ ಕರ್ನಾಟಕವೆಂದು ಕರೆಯಲಾಗುತ್ತಿದ್ದ ಭಾಗದಲ್ಲಿ ಇತ್ತೀಚೆಗೆ ಒಂದು ಥಾಕಥಿತ ''ದಲಿತ ಸಾಹಿತ್ಯ ಸಮಾವೇಶ'' ನಡೆಯಿತು. ಸಂಘಟಕರೆಲ್ಲಾ ಕೇಸರಿ ಧ್ವಜದ ಾರ್ಯಕರ್ತರೆಂದು ಎಲ್ಲ ವರದಿಗಳೂ ತಿಳಿಸಿವೆ. ಇದ್ದಕ್ಕಿದ್ದಂತೆ ಸಾಹಿತ್ಯದಲ್ಲಿ, ಅದರಲ್ಲೂ ದಲಿತ ಸಾಹಿತ್ಯದಲ್ಲಿ, ಇವರ ಆಸಕ್ತಿ ಹೊರಚಿಮ್ಮಿರುವುದು ಅನಾರೋಗ್ಯಕರ ದುರಂತದ ೂಚನೆ ಇರಬಹುದೆ ? ಹಾಗಿದ್ದರೆ ಅದು ಸಾಹಿತ್ಯಕ್ಕೆ ಮಾರಕವಾದುದು ಮತ್ತು ದಲಿತರಿಗೆ ೇಯವಾದುದು. ಆದರೆ ಕುಂಕುಮದ ನಾಮ ಹಾಕಿಕೊಂಡು ಸಮಾವೇಶದಲ್ಲಿ ರಾರಾಜಿಸಿದ ದಲಿತ ಕವಿ ಮತ್ತು ಆತ್ಮೀಯ ಸ್ನೇಹಿತ ಡಾ॥ ಸಿದ್ದಲಿಂಗಯ್ಯನವರು ಇದನ್ನು ಒಪ್ಪಲಾರರು. ಸಮಾವೇಶದಲ್ಲಿ ಪಾಲ್ಗೊಂಡ ಪ್ರಾಧ್ಯಾಪಕ - ಕವಿಮಿತ್ರ ಚೆನ್ನಣ್ಣ ವಾಲೀಕಾರರು ಏನು ೇಳುತ್ತಾರೆಂಬ ಕುತೂಹಲ ಉಳಿದಿದೆ. ಇನ್ನೊಂದು ಬೆಳವಣಿಗೆಯಲ್ಲಿ ಸಂಗೀತಗಾರ ೇಸುದಾಸ್ ಅವರಿಗೆ ಶಾಲೆ ಆರಂಭಿಸಲು ಒಂದಷ್ಟು ಭೂಮಿ ಕೊಡುವುದಾಗಿ ಮುಖ್ಯಮಂತ್ರಿಗಳು ತಿಳಿಸಿದ್ದಾರೆ. ಇದು ಎಸ್. ಎಂ. ಕೃಷ್ಣ ಕಾಲದ ಆಶ್ವಾಸನೆಯೆಂದು ೇಳಲಾಗಿದೆ. ಜೇಸುದಾಸ್ ಮಾಡಬಹುದಾದ್ದನ್ನು ವಿದ್ವಾನ್ ಆರ್. ಕೆ. ಶ್ರೀಕಂಠನ್ ಅಥವಾ ಡಾ॥ ರಾ. ಸತ್ಯನಾರಾಯಣ ಮಾಡಲಾರರೆ ಎಂಬುದನ್ನು ವಿಚಾರ ಮಾಡಬೇಕು. ಇರಲಿ, ಇದೆಲ್ಲಾ ಗೌಣವಾದ ವಿಚಾರ. ಮುಖ್ಯವಾದುದೇನೆಂದರೆ ದಲಿತರಾಗಲಿ ಇತರರಾಗಲಿ ತಮ್ಮ ಬಹುಕಾಲದ ಚಿಂತನೆಯ ಹಾದಿಯಲ್ಲಿ ಮುಗ್ಗರಿಸುವುದು ಶ್ರೇಯಸ್ಕರವಲ್ಲ. ನಮ್ಮಲ್ಲಿ ದ್ಧತೆ ಮತ್ತು ಭದ್ರತೆಗಳ ಕೊರತೆ ಇದೆ, ನಿಜ. ಆದರೆ ಪ್ರಗತಿಪರರು, ದಲಿತರು, ಂಡಾಯ ಸಾಹಿತಿಗಳು ಹೀಗೆ ಆಡಳಿತಾರೂಢ ಪಕ್ಷದೊಡನೆ ಸಹಕರಿಸಲೇಬೇಕೆನ್ನುವ ಾಯಮಾನಕ್ಕೆ ಅಂಟಿಕೊಂಡರೆ ನಾಳೆಯ ದಿನಗಳು ಹೇಗಿರುತ್ತವೆ ? ಮತ್ತೆ ಇನ್ನೂ ಾರಾರನ್ನು ತೃಪ್ತಿಗೊಳಿಸುವ ಸಾಹಸಕ್ಕೆ ಸಿದ್ಧರಾಗಬೇಕು ? ಯಾರೊಡನೆಯೂ ವೈಷಮ್ಯ ಳೆಸಿಕೊಳ್ಳಬೇಕಾಗಿಲ್ಲ, ಆದರೆ ಯಾರನ್ನೂ ಓಲೈಸಲೇಬೇಕೆಂಬ ನಿಯಮವೂ ಇಲ್ಲ. ಮಬದ್ಧವಾದ ಸಹಕಾರ ನೀಡುವುದೇ ಬೇರೆ, ತಾಳಕ್ಕೆ ತಕ್ಕಂತೆ ಕುಣಿಯ ಹೊರಡುವುದೇ ೇರೆ. ನಾವೆಲ್ಲ ಇದನ್ನು ಶಾಂತವಾಗಿ ಆಲೋಚಿಸಬೇಕಾದ ದಿನಗಳಿವು.

* * *

ವ್ಯಾಟಿಕನ್ ಎಂಬ ಪುಟ್ಟ ರಾಜ್ಯದ ಅಧಿಪತಿಗೆ ಪೋಪ್ ಎಂಬ ಹೆಸರಿದೆ. ಆತನು ಕ್ರೈಸ್ತ ರ್ಮದ ಒಬ್ಬ ಗುರು, ಅಥವಾ ಅವರ ಪದಗುಚ್ಛ ಬಳಸುವುದಾದರೆ 'ಕುರಿಯ ಮಂದೆ ಾಯುವ ಧಾರ್ಮಿಕ ನಾಯಕ'. ಮಂದೆ ಒಂದೆಡೆ ಇಲ್ಲ, ವಿಶ್ವದಲ್ಲೆಲ್ಲಾ ಹರಡಿಹೋಗಿದೆ. ಲ್ಲ ಕಡೆಯ ಕುರಿಗಳ ರಕ್ಷಣೆಯ ಹೊಣೆಯೂ ತನ್ನದೆಂದು ಪೋಪ್ ಬಗೆಯಬೇಕಾದ್ದು ಅವರ ಕರ್ತವ್ಯ. ಕಳೆದ ಕೆಲವು ದಶಕಗಳಲ್ಲಿ ಪೋಪ್ ಮಹಾಪ್ರಭುವು ವಿಶ್ವದ ಅನೇಕ ಸರ್ವಾಧಿಕಾರಿಗಳಿಗೆ, ಮಿಲಿಟರಿ ದುರಾಡಳಿತಗಾರರಿಗೆ ಬೆಂಬಲ ನೀಡಿರುವುದುಂಟು. ಹಿಟ್ಲರ್ ಎಂಬ ಕ್ರೈಸ್ತ ರಾಜಕಾರಣಿಗೂ ಪೋಪರ ಅಭಯಹಸ್ತವಿದ್ದುದು ತಿಳಿದ ವಿಷಯವೇ. ಈಗಿನ ಪೋಪ್ ಬೆನೆಡಿಕ್ಟ್ ಹೇಳಿಕೆಯೊಂದರಲ್ಲಿ ಭಾರತ ಮತ್ತು ಇರಾಕ್ ದೇಶಗಳಲ್ಲಿ ಕ್ರೈಸ್ತರ ಮೇಲೆ ನಡೆದಿರುವ ಹಲ್ಲೆಗಳ ಬಗ್ಗೆ ತಮ್ಮ ಅಸಮಾಧಾನವನ್ನು ಸೂಚಿಸಿ, ಎರಡೂ ದೇಶಗಳಲ್ಲಿ ಕ್ರೈಸ್ತರಿಗೆ ರಕ್ಷಣೆ ನೀಡಬೇಕೆಂದು ಮನವಿ ಮಾಡಿ ಕೊಂಡಿದ್ದಾರೆ. ಅವರ ಸೌಜನ್ಯವನ್ನು ಮೆಚ್ಚಬೇಕಾದ್ದೇ. ಆದರೆ ಭಾರತವನ್ನು ಇರಾಕಿನ ಜೊತೆ ಹೆಸರಿಸಿರುವುದು ಸರ್ವಥಾ ಯೋಗ್ಯವಲ್ಲ. ಇರಾಕಿನಲ್ಲಿ ಹಲವು ಶತಮಾನಗಳಿಂದ ಕ್ರೈಸ್ತರು ಯಾವ ಉಪಟಳವೂ ಇಲ್ಲದೆ ಜೀವನ ನಡೆಸಿದ್ದಾರೆ. ಪೋಪರ ಶಿಷ್ಯ ಜಾರ್ಜ್ ಬುಷ್ ಇರಾಕನ್ನು ಆಕ್ರಮಿಸಿದಾಗ ಪೋಪ್ ಕಣ್ಣಿಗೆ ಸುಣ್ಣ ಬಿದ್ದಿತ್ತು, ಆದ್ದರಿಂದ ಅವರು ಅದನ್ನು ನೋಡಲಿಲ್ಲ. ಈಗಲೂ ಬುಷ್‌ಗೆ ''ನೀನು ಅಲ್ಲಿಂದ ತೊಲಗಿಹೋಗು, ಜನರೆಲ್ಲಾ ಅನ್ಯೋನ್ಯವಾಗಿ ಬಾಳಬಲ್ಲರು'' ಎಂದು ಹೇಳುವುದಿಲ್ಲ. ಬುಷ್‌ನ ಆಕ್ರಮಣವೂ ಬೇಕು, ಕ್ರೈಸ್ತರ ರಕ್ಷಣೆಯೂ ಆಗಬೇಕು. ಇದು ಪೋಪರ ತುಚ್ಛ ರಾಜಕಾರಣ. ಇನ್ನು ಭಾರತದ ಬಗ್ಗೆ ಹೇಳಬೇಕಾದರೆ, ಬುಷ್‌ನ ಪರಮ ಸ್ನೇಹಿತರೆನ್ನಲಾದ ಅದ್ವಾನಿ ಪಕ್ಷದವರು ಕ್ರೈಸ್ತರ ಮೇಲೆ ಹಲ್ಲೆ ನಡೆಸಿ ದ್ದಾಗ್ಯೂ, ಭಾರತದ ಜನತೆಯು ತನ್ನೆಲ್ಲಾ ಮತಧರ್ಮೀಯರಿಗೂ ಪೋಪರ ಸಲಹೆ, ಮಧ್ಯ ಪ್ರವೇಶ ಇಲ್ಲದೆಯೂ ರಕ್ಷಣೆ ನೀಡಲು ಬದ್ಧವಾಗಿದೆ, ಸರ್ವಪ್ರಯತ್ನಗಳನ್ನೂ ಮಾಡುತ್ತದೆ. ಹಿಟ್ಲರ್ ಮತ್ತು ಬುಷ್‌ಗೆ ಆಶೀರ್ವಾದ ನೀಡಿರುವ ಪೋಪರು ಇದನ್ನರಿತರೆ ಕ್ಷೇಮ.

* * *

ಇರಾಕ್‌ನಲ್ಲಿ ಆಕ್ರಮಣಕಾರಿಯಾಗಿ ನೆಲೆಗಳನ್ನುಳ್ಳ ಅಮೆರಿಕಾ ತನ್ನ ದೇಶದ ಅಧ್ಯಕ್ಷೀಯ ಚುನಾವಣೆಗೆ ಮುಂಚೆ ಸಿರಿಯಾದ ಮೇಲೆ ಮಿಲಿಟರಿಯನ್ನು ಪ್ರಯೋಗಿಸಿ ಹಲವು ನಾಗರಿಕರನ್ನು ಕೊಂದಿದ್ದು ಅತ್ಯಂತ ತೀವ್ರ ಖಂಡನೆಗೆ ಗುರಿಯಾಗಬೇಕಾಗಿತ್ತು, ಆದರೆ ಮನಮೋಹನ ಸಿಂಗ್ ಸರ್ಕಾರಕ್ಕೆ, ಪ್ರಣವ ಮುಖರ್ಜಿಯವರಿಗೆ, ನರಗಳು ಸತ್ತು ಹೋಗಿವೆ. ಆದ್ದರಿಂದ ಅವರು ತುಟಿ ಬಿಚ್ಚಲಿಲ್ಲ. ಸಿರಿಯಾದ ಮೇಲಿನ ಆಕ್ರಮಣವು ತನ್ನ ಪಕ್ಷದ ಅಭ್ಯರ್ಥಿಗೆ ಗೆಲುವು ತರಬಹುದೆಂಬ ನಿರೀಕ್ಷೆಯು ಹುಸಿಯಾಗಿ ಬುಷ್, ಶ್ವೇತ ಭವನದ ಯಾವುದೋ ಬುಷ್‌ನಲ್ಲಿ ಅಡಗಿ ಕುಳಿತುಕೊಂಡುಬಿಟ್ಟಿರಬೇಕು. ಒಸಾಮಾ ಹೆಸರಿನೊಡನೆ ಪ್ರಾಸ ಕೂಡುವ ಒಬಾಮಾ, ತನ್ನ ಹೆಸರಿನಲ್ಲಿ 'ಹುಸೇನ್' ಎಂಬ ಪದವಿದ್ದು ನೈಜೀರಿಯಾ ಮೂಲದ ಕರಿಯ ಸಂತತಿಗೆ ಅರ್ಧದಷ್ಟಾದರೂ ಸೇರಿದ್ದಾರೆ. ವಲಸೆ ಬಂದ ಕರಿಯರ ವಂಶಸ್ಥನೊಬ್ಬ ಅಮೆರಿಕಾದ ಅಧ್ಯಕ್ಷನಾಗಿ ಚುನಾಯಿತನಾಗಿರುವುದು ಸಂತಸದ ಸ್ವಾಗತಾರ್ಹ ಅಭಿನಂದನಾರ್ಹ ಸಂಗತಿ. ಆತನ ವಿಕ್ರಮವು ತನ್ನ ಸ್ವಂತದ ವರ್ಚಸ್ಸನ್ನು ಸ್ವಲ್ಪಮಟ್ಟಿಗೆ ಪ್ರತಿಫಲಿಸುತ್ತದೆ. ಮಿಕ್ಕಿದ್ದು ಬುಷ್ ಮಹಾಶಯನ ಅತ್ಯಂತ ಕಳಪೆಯ ನೀತಿ ಮತ್ತು ಆಡಳಿತ ವೈಖರಿಯ ಬಗೆಗೆ ಅಮೆರಿಕಾದ ಜನ ನೀಡಿರುವ 'ಅರ್ಹತಾ ಪತ್ರ'ವಾಗಿದೆ. ಜಗತ್ತಿನಲ್ಲಿ ಏನೋ ಮಹತ್ತರ ಕ್ರಾಂತಿಯೊಂದು ಜರುಗಿದೆ, ಜನವರಿ ೨೦ರ ನಂತರ ವಿಶ್ವವು ಬೇರೆಯೇ ಮಾದರಿಯದಾಗಿರುತ್ತದೆ, ಒಬಾಮಾ ಒಬ್ಬ ಪ್ರವಾದಿ ರಾಜಕಾರಣಿ, ಎಂಬರ್ಥ ಬರುವಂತೆ ನಮ್ಮ ಮಾಧ್ಯಮಗಳು ಸುಸ್ತಾಗುವಷ್ಟು ವ್ಯಾಖ್ಯಾನ ನೀಡಿ ನಮಗೆಲ್ಲಾ ಕಿವುಡುತನ-ಕುರುಡುತನಗಳನ್ನು ಆರೋಪಿಸಿವೆ. ನಮ್ಮ ದೇಶದಲ್ಲಿ ಎಲ್ಲವೂ ಅತಿ ! ಒಬಾಮಾ ಗೆದ್ದರೆ ಭಗವಂತನ ಅವತಾರ ಆಯಿತೆಂಬಂತೆ ಸಂಭ್ರಮವು ದಡ್ಡತನ. ಅದನ್ನು ಎಣೆಯಿಲ್ಲದೆ ಪ್ರದರ್ಶಿಸಿದ ನಮ್ಮ ಮಾಧ್ಯಮಗಳಿಗೆ ಯಾವಾಗ ಸ್ವಂತಿಕೆಯ ಅರಿವಾಗುವುದೋ ಕಾಣೆವು. ಒಬಾಮಾ ಚುನಾಯಿತನಾಗಿದ್ದು ಒಂದು ಅಪೂರ್ವ ಘಟನೆ, ನಿಜ ; ಆದರೆ ಆತನ ರಾಜಕೀಯ ರೀತಿ-ನೀತಿಗಳು ''ಮಿಲಿಟರಿ-ಔದ್ಯಮಿಕ ಸಂಕೀರ್ಣ''ದ ಹಿತಾಸಕ್ತಿಯನ್ನು ಮೀರಿ ನಿಲ್ಲುತ್ತವೆಯೇ ? ಇರಾಕ್ ಮತ್ತು ಆಫ್ಘಾನಿಸ್ಥಾನ, ಪ್ಯಾಲಿಸ್ಟೈನ್-ಇಸ್ರೇಲ್, ವೆನೆಝುಯೇಲ, ಕ್ಯೂಬ, ಮುಂತಾದ ದೇಶಗಳ ಬಗ್ಗೆ ಆತನ ನೀತಿಯು ಬುಷ್ ದುರಾಡಳಿತದ ನೀತಿಗಿಂತ ಭಿನ್ನವಾಗಿರುತ್ತವೆಯೇ ? ''ವೆನೆಝುಯೇಲಾದ ಸರ್ವಾಧಿಕಾರಿಯನ್ನು ಕೆಳಗಿಳಿಸಬೇಕು'' ಎಂದು ಹ್ಯೂಗೋ ಶವೇಜ್ ಬಗ್ಗೆ ಒಬಾಮಾ ಬಡಬಡಿಸಿರುವುದು ಸುಳ್ಳೆ ? ಕ್ಯೂಬಾದ ವಿರುದ್ಧ ವಿಧಿಸಲಾಗಿರುವ ಅನಿಷ್ಟ ಬಹಿಷ್ಕಾರವನ್ನು ಈತ ಹಿಂತೆಗೆದುಕೊಳ್ಳುತ್ತಾನೆಯೇ ? ಭಾರತದಂತಹ ದೇಶಗಳ ಮೇಲೆ ಒತ್ತಡ ಹೇರುವುದನ್ನು ನಿಲ್ಲಿಸಲಾಗುತ್ತದೆಯೇ ? ಅಮೆರಿಕಾದ ಅಧ್ಯಕ್ಷರು ಇಬ್ಬಗೆಯವರು; ಒಬ್ಬ ಟ್ವೀಡಲ್‌ಡಂ, ಇನ್ನೊಬ್ಬ ಟ್ವೀಡಲ್‌ಡೀ, ಎಂಬ ಮಾತಿದೆ. ಡಂ ಹೋಗಿ ಡೀ ಬಂದಿರುವುದು ವಿಶ್ವದಲ್ಲಿ ಮಹಾನ್ ಕ್ರಾಂತಿಯನ್ನೇನೂ ಉಂಟು ಮಾಡಲಾರದೆಂಬ ನಿರಾಸೆಯ ಭಾವನೆ ಅನಿವಾರ್ಯವಾಗಿದೆ.

# ಇಹ ತಹದ ಹೊಸಿಲ ದಾಟಿಸುವ ಜೋಗಿ








## ಭೀಮಸೇನ

'ಮಿಲೇ ಸುರ್ ಮೇರಾ ತುಮ್ಹಾರಾ', 'ಭಾಗ್ಯದ ಲಕ್ಷ್ಮೀ ಬಾರಮ್ಮಾ', 'ನಂಬಿದೆ ನಿನ್ನ ನಾದದೇವತೆ' – ಭೀಮಸೇನ ಜೋಶಿಯವರ ಈ ಗಾಯನವನ್ನು ಕೇಳಿ ಆನಂದಿಸದ ವ್ಯಕ್ತಿಯೇ ಇರಲಿಕ್ಕಿಲ್ಲ. ಆರು ದಶಕಗಳಿಂದ ತಮ್ಮ ಅಮೋಘವಾದ ಗಾಯನದ ಮೂಲಕ ಪುರಾಣ ಪುರುಷನಂತೆ ಮೆರೆಯುತ್ತಾ ನಮ್ಮೊಂದಿಗಿರುವ ಭೀಮಸೇನ ಜೋಶಿಯವರಿಗೆ ಭಾರತ ಸರಕಾರ 'ಭಾರತರತ್ನ' ಪ್ರಶಸ್ತಿ ಕೊಟ್ಟು ಗೌರವಿಸಿರುವುದು ಹರ್ಷದ ಸಂಗತಿ. ಅವರ ಅಪಾರ ಅಭಿಮಾನಿಗಳಿಂದ ಪ್ರಶಂಸೆ, ಅಭಿನಂದನೆಗಳ ಸುರಿಮಳೆ ಸಹಜ. ಸಿದ್ಧಿ ಪ್ರಸಿದ್ಧಿಯ ನೆಲೆಯಲ್ಲಿ ಗೌರೀ ಶಂಕರ ಶಿಖರದ ಮಟ್ಟದಲ್ಲಿರುವ ಗಾಯಕನಿಗೆ ಈ ಪ್ರಶಸ್ತಿ ದೊರಕಿದಾಗ ಅವರು ವಿನಯಪೂರ್ವಕವಾಗಿ ಹೇಳುವ ಮಾತು ತಾವು ಈ ಪ್ರಶಸ್ತಿಯನ್ನು ಎಲ್ಲ ಸಂಗೀತಗಾರರ ಪರವಾಗಿ ಸ್ವೀಕರಿಸುತ್ತಿದ್ದೇನೆ ಎಂದು. ಕಿರಾಣ ಘರಾಣೆಯ ಅಪ್ರತಿಮ ಗಾಯಕ. ಪಂಡಿತ ಪಾಮರರೆಲ್ಲಾ ಸಮಾನವಾಗಿ ಆಸ್ವಾದಿಸಬಹುದಾದ ಅವರ ಮಧುರ ಕಂಠದ ಗಾಯನದ ಯಾವುದೇ ಪ್ರಕಾರ ಕೇವಲ ರಂಜನೆಯನ್ನು ಕೊಡುತ್ತದೆಂಬ ಮಾತು ಒಪ್ಪುವಂತಿಲ್ಲ. ಯಾವುದೇ ಕಲೆಯಾಗಲಿ, ವಿಶೇಷವಾಗಿ ಸಂಗೀತದಂತಹ ಮೌಖಿಕ ಪರಂಪರೆಯ ಶ್ರವಣ ಮಾಧ್ಯಮ, ಕೇವಲ ಆನಂದ ನೀಡುವುದಿಲ್ಲ; ಅದರೊಂದಿಗೆ ರಸಾನುಭವ ಅಥವಾ ರಸಾನುಭೂತಿ ಎನ್ನಲಾಗುವ ಅನಿರ್ವಚನೀಯ ಅನುಭವವನ್ನೂ ನೀಡುತ್ತದೆ. ಇದನ್ನು ಭಾಷೆಯಲ್ಲಿ ಪ್ರಕಟಿಸಲು ಸಾಧ್ಯವಿಲ್ಲ. ತಾನು ಮಾತ್ರವಲ್ಲದೆ ತನ್ನ ಶ್ರೋತೃಗಳನ್ನು ಸಹ ಅನನ್ಯ ಲೋಕವೊಂದಕ್ಕೆ ಕೊಂಡೊಯ್ಯುವ ಸಂಗೀತ ಮಾಂತ್ರಿಕನೆಂದರೆ ಭೀಮಸೇನ ಜೋಶಿ.

೧೯೨೨ರಲ್ಲಿ ಗದಗಿನಲ್ಲಿ ಜನಿಸಿದ ಭೀಮಸೇನ ಬಾಲ್ಯದಲ್ಲೇ ಸಂಗೀತದ ಹುಚ್ಚು ಹಿಡಿಸಿಕೊಂಡು ಶಾಲೆಗೆ ಹೋಗುವ ಬದಲು ದಾರಿಯ ಹೋಟೆಲಿನೆದುರು ನಿಂತು ಅಬ್ದುಲ್ ಕರೀಂ ಖಾನರ ಸಂಗೀತ ಧ್ವನಿಮುದ್ರಿಕೆಗಳನ್ನು ಕೇಳುವುದರಲ್ಲಿ ತಲ್ಲೀನನಾಗಿರುತ್ತಿದ್ದ. ಕೇಳಿದ್ದನ್ನು ಸ್ಫುಟವಾಗಿ ಗುನುಗುನಿಸುವುದರಲ್ಲಿ ಆತ ಪ್ರವೀಣ. ಖಾನರಂತೆ ತಾನೂ ಸಂಗೀತಗಾರನಾಗಬೇಕೆಂಬ ಉತ್ಕಟೇಚ್ಛೆ ಅವರಲ್ಲಿ ಬಲವಾಗಿತ್ತು. ಊಟದ ಸಮಯದಲ್ಲಿ ಒಂದು ಮಿಳ್ಳೆ ತುಪ್ಪ ಹೆಚ್ಚಾಗಿ ಹಾಕಲಿಲ್ಲವೆಂಬ ನೆಪವು ಅವರನ್ನು ಮನೆಯಿಂದ ಹೊರಹೋಗಿ ಗುರುವಿನ ಹುಡುಕಾಟಕ್ಕೆ ತೊಡಗಿಸಿತು. ಟಿಕೆಟ್ ಇಲ್ಲದೆ ಬಿಜಾಪುರ, ಪುಣೆ, ಮುಂಬೈ, ಗ್ವಾಲಿಯರ್ ಇತ್ಯಾದಿ ಕಡೆಗಳಿಗೆ ರೈಲಿನಲ್ಲಿ ಪ್ರಯಾಣಿಸಿದ ಭೀಮಸೇನರು ಒಮ್ಮೆ ಸಿಕ್ಕಿಹಾಕಿಕೊಂಡು ಎರಡು ದಿನ ಜೈಲುವಾಸವನ್ನೂ ಕಂಡರು. ರೈಲಿನಲ್ಲಿ ಮಧುರಕಂಠದಿಂದ ಸಹಪ್ರಯಾಣಿಕರಿಗೆ ಸಂಗೀತದೌತಣ ಮಾಡಿಸಿ, ಕ್ರಮೇಣ ಉಸ್ತಾದ್ ಹಾಫ಼ಿಜ಼ಾಲಿ ಖಾನ್, ಕೃಷ್ಣರಾವ್ ಪಂಡಿತ್, ರಾಜ ಭೈಯ್ಯ ಇವರಿಂದ ಗ್ವಾಲಿಯರ್ ಸಂಗೀತದ ಪರಿಚಯ ಪಡೆದ ಭೀಮಸೇನರು ಹತ್ತಾರು ಕಠಿಣ ಪರೀಕ್ಷೆಗಳಿಗೆ ಗುರಿಯಾದರು. ಒಬ್ಬ ಕುರುಡ ಸಂಗೀತಗಾರನಿಂದ ಅವರು ಧ್ರುಪದ ಕಲಿತರಂತೆ. ನಂತರ ಕಲ್ಕತ್ತಾದ ಭೀಷ್ಮದೇವ ಚಟರ್ಜಿಯವರ ಬಳಿ ಶಿಷ್ಯತ್ವ. ಹರಿವಲ್ಲಭ ಸಂಗೀತ ಸಮ್ಮೇಳನದಲ್ಲಿ ವಿನಾಯಕ್‌ರಾವ್ ಪಟವರ್ಧನ್ ಅವರು ಇವರ ಸಂಗೀತ ಕೇಳಿ, ಆಸಕ್ತಿ ತಿಳಿದು, ಸವಾಯಿ ಗಂಧರ್ವರಲ್ಲಿ ಸಂಗೀತ ಕಲಿಯಲು ಪ್ರೇರೇಪಿಸಿದರು. ಹೀಗಾಗಿ ಅವರು ಗದಗಿಗೆ ಹಿಂದಿರುಗಿ ತಂದೆ-ತಾಯಿಯರ ಸಂತೋಷವನ್ನು ಇಮ್ಮಡಿಗೊಳಿಸಲು ಸಾಧ್ಯವಾಯಿತು. ಮಗನನ್ನು ಸವಾಯಿ ಗಂಧರ್ವರಲ್ಲಿ ಶಿಷ್ಯವೃತ್ತಿಗೆ ಸೇರಿಸಿದರು. ಕಠಿಣವಾದ ಗುರುಕುಲ ಪದ್ಧತಿಯಲ್ಲಿ ಗುರುಸೇವೆಯಲ್ಲಿ ಕಲಿಕೆ. ದಿನಕ್ಕೆ ೧೦-೧೨ ಗಂಟೆ ಅಭ್ಯಾಸ. (ಅವರೇ ಹೇಳುವಂತೆ ಚಿಮಣಿ ಎಣ್ಣೆ ದೀಪ ಆರುವವರೆಗೆ). ಐದು ವರ್ಷಗಳಲ್ಲಿ ಕಲಿಸಿದ ರಾಗಗಳು ಬೆರಳೆಣಿಕೆಯಷ್ಟು: ತೋಡಿ, ಮುಲ್ತಾನಿ, ಪೂರಿಯಾ ಇತ್ಯಾದಿ. ಗುರುಗಳ ಅನಾರೋಗ್ಯದಿಂದ ವಿದ್ಯಾಭ್ಯಾಸ ಮತ್ತೆ ಸ್ಥಗಿತ. ಗದಗಿಗೆ ವಾಪಸು. ಇನ್ನೂ ಕಲಿಯಬೇಕೆಂಬ ದಾಹ. ಮತ್ತೆ ರಾಮಪುರಕ್ಕೆ ಪ್ರಯಾಣ. ಮುಶ್ತಾಖ ಹುಸೇನ್ ಖಾನರಲ್ಲಿ ಶಿಷ್ಯವೃತ್ತಿ. ಆದರೆ ಅವರು ಕಲಿಸುವ ಒಂದೇ ರಾಗ ನಟಮಲ್ಹಾರ್, ಆದರೂ ಬಿಡದ ಛಲ. ಅಲ್ಲಿಂದ ಮುಂದೆ ಲಖನೌಗೆ ಪ್ರಯಾಣ. ಆಕಾಶವಾಣಿಯಲ್ಲಿ ನೌಕರಿ. ಅಲ್ಲಿ ಇವರ ಪ್ರಥಮ ಆಕಾಶವಾಣಿ ಸಂಗೀತ, ೧೯೪೩ರಲ್ಲಿ. ಬಿಸ್ಮಿಲ್ಲಾ ಖಾನರ ಭೇಟಿ, ಸ್ನೇಹ. ಬೇಗಂ ಅಖ್ತರ್ ರಸೂಲನಬಾಯಿ ಸಂಗೀತ ಕೇಳುವ ಅವಕಾಶ. ತನ್ನ ಗುರುಗಳ ಅರವತ್ತನೆಯ ಹುಟ್ಟುಹಬ್ಬದ ಆಚರಣೆಯಲ್ಲಿ ಪುಣೆಯಲ್ಲಿ ಗುರುಗಳ ಸಮ್ಮುಖದಲ್ಲಿ ಪ್ರಥಮ ಸಂಗೀತ ಕಛೇರಿ. ಪ್ರಸ್ತುತ ಪಡಿಸಿದ್ದು ಮಿಯಾ ಮಲ್ಹಾರ್ ರಾಗ ಮತ್ತು ಒಂದು ನಾಟ್ಯಗೀತ. ಅಲ್ಲಿಂದ ಶುರುವಾಗಿದ್ದು ಅವರ ನಾದೋಪಾಸನೆ. ಬಿಡುವಿಲ್ಲದಷ್ಟು ಕಾರ್ಯಕ್ರಮಗಳು. ಪುಣೆ, ಮುಂಬೈ, ಜಲಂಧರ್, ಕಲ್ಕತ್ತಾ ಹೀಗೆ ದೇಶಾದ್ಯಂತ ಕಾರ್ಯಕ್ರಮಗಳು. ವಿದೇಶಗಳಲ್ಲಿ ಇವರ ಗಾಯನಕ್ಕೆ ಬೇಡಿಕೆ. ಇವರ ಅವಿರತ ಕಾರ್ಯಕ್ರಮಗಳಿಗಾಗಿ ವಿಮಾನಯಾನ ಮಾಡಬೇಕಾದ ಸಂದರ್ಭಗಳನ್ನು ಕಂಡು ಇವರ ಹಿತೈಷಿ ಮಹಾರಾಷ್ಟ್ರದ ಖ್ಯಾತ ಪು. ಲ. ದೇಶಪಾಂಡೆಯವರು ಜೋಶಿಯವರನ್ನು 'ಹವಾಯಿ ಗಂಧರ್ವ' ಎಂದು ಕರೆಯುತ್ತಿದ್ದರು. ಇವರ ಸಂಗೀತ ಗಣಿಯಲ್ಲಿ ಹೊರಬಂದ ಖಯಾಲ, ಠುಮ್ರಿ, ಅಭಂಗ, ದಾಸವಾಣಿ, ಭಾವಗೀತೆಗಳು ರತ್ನಗಳೋಪಾದಿಯಲ್ಲಿ ದೊರಕಿದ ಸ್ವರಸಂಪತ್ತು, ಭಾವತೃಪ್ತಿ, ಎಲ್ಲಾ ಸಂಗೀತ ರಸಿಕರಲ್ಲಿ ಒಂದು ರೀತಿಯ ರಸಾನುಭೂತಿಗೆ ಎಡೆಮಾಡಿಕೊಟ್ಟಿವೆ. ಇದು ಅತಿಶಯದ ಮಾತಲ್ಲ, ಅದನ್ನು ಅನುಭವಿಸಿಯೇ ತಿಳಿಯಬೇಕು. ಅದೆಷ್ಟು ರಾಗಗಳು ಮತ್ತು ಎಂತಹ ಅಮೋಘ ವಿನ್ಯಾಸ! ಕೇಳುವುದೇ ಒಂದು ಆನಂದ. ಇವರದು ಧ್ಯಾನಶೀಲ, ಅಂತರ್ಮುಖಿ ಭಾವದೀಪ್ತಿಯ ಗಾಯನ.

ಇವರು ಮೂಲತಃ ಮಿತಭಾಷಿಗಳು. ಭಾಷಣ ಮಾಡಲು ಕೋರಿಕೆ ಬಂದಾಗ 'ನಾವು ಸಂಗೀತಗಾರರು, ಹಾಡುವುದೊಂದೇ ನಮ್ಮ ಕೆಲಸ' ಎಂದು ವಿನಯವಾಗಿ ನಿರಾಕರಿಸುವವರು. ಅನಿವಾರ್ಯವಾದಲ್ಲಿ ಸಂದರ್ಭಕ್ಕೆ ತಕ್ಕಂತೆ ಸಂಗೀತ ಕಲಾವಿದರ ಸಂಬಂಧವಾಗಿ ಸಮತೂಕದ ಒಂದೆರಡು ಮಾತುಗಳನ್ನು ಹೇಳಿರುವುದುಂಟು. ಖ್ಯಾತಿ, ಹೆಸರಿನ ಹಿಂದೆ ಬೆನ್ನು ಹತ್ತಿದವರಲ್ಲ. ಯಾವಾಗಲೂ ತಮ್ಮ ರಿಯಾಜು, ಸಂಗೀತ ಕಾರ್ಯಕ್ರಮಗಳು, ಬಿಡುವಿನ ವೇಳೆಯಲ್ಲಿ ಕ್ರಿಕೆಟ್ ಮ್ಯಾಚ್ ವೀಕ್ಷಣೆ, ಪತ್ತೇದಾರಿ

ವಿನಾಯಕ ಎಲ್. ಕುಲಕರ್ಣಿ

ತ್ರಿಲರ್‌ಗಳನ್ನು ಓದುವುದು, ವೇಗವಾಗಿ ಕಾರು ಓಡಿಸುವುದು, ದುರಸ್ತಿ ಮಾಡುವುದು. ಇವರು ಸಾಹಿತಿಗಳೊಂದಿಗೆ, ಸಹ ಕಲಾವಿದರೊಂದಿಗೆ ಗೌರವಾದರಗಳನ್ನಿಟ್ಟುಕೊಂಡು ನಡೆಯುತ್ತಾ ಎಲ್ಲಿಯೂ ತಮ್ಮ ದೊಡ್ಡಸ್ತಿಕೆಯನ್ನು ಮೆರೆದಿಲ್ಲ. ಹಾಗೇನಾದರೂ ಪ್ರಸಂಗ ಬಂದಲ್ಲಿ ಕಟು ಸತ್ಯವನ್ನು ಹೇಳಲು ಹಿಂಜರಿದಿಲ್ಲ. ಇವರ ಸಂಗೀತ ಸೇವೆಯನ್ನು ಗುರುತಿಸಿ ಆಗಿನ ಪ್ರಧಾನ ಮಂತ್ರಿಯಾಗಿದ್ದ ರಾಜೀವ ಗಾಂಧಿ ಇವರನ್ನು ರಾಜ್ಯಸಭೆಯ ಸದಸ್ಯರನ್ನಾಗಿ ನೇಮಕಾತಿ ಮಾಡಲು ತಾವೇ ಸ್ವತಃ ದೂರವಾಣಿಯ ಮೂಲಕ ಸಂಪರ್ಕಿಸಿದಾಗ ಅವರು ಕೊಟ್ಟ ಶಾಂತ ಉತ್ತರ : ''ಮೇರೆ ದೋ ತಾನ್‌ಪುರೆ ಹಿ ಮೇರೇ ಲಿಯೆ ರಾಜ್ಯಸಭಾ ಔರ್ ಲೋಕಸಭಾ ಹೈ.''

ಇಂಗ್ಲಿಷ್‌ನಲ್ಲಿ ಒಂದು ಶುಭೋಕ್ತಿ ಉಂಟು : ರಾಜನು ಸಂಗೀತಪ್ರಿಯನಾದರೆ ನಾಡಿನಲ್ಲಿ ಕಡಿಮೆ ಹಿಂಸೆ ಇರುತ್ತದೆ, ಎಂದು. ಪ್ರಸಕ್ತ ಸಂದರ್ಭದಲ್ಲಿ ಹೇಳುವುದಾದಲ್ಲಿ ಇಂದಿನ ಪ್ರಜಾಪ್ರಭುತ್ವದ ದೊರೆಗಳು ಮತ್ತು ಅಧಿಕಾರಿಗಳೆಲ್ಲ ಸಂಗೀತದ ಬಗ್ಗೆ ಸ್ವಲ್ಪ ಒಲವು ಬೆಳೆಸಿಕೊಂಡಲ್ಲಿ ಹಿಂಸೆಯ ಮಟ್ಟ ಕಡಿಮೆ ಆಗಿ ನಮ್ಮ ಸಮಾಜದ ನೆಮ್ಮದಿ ಹೆಚ್ಚಾಗಬಹುದು. ಭೀಮಸೇನರ ಸಂಗೀತ  ಇಂತಹ ಸಂಗೀತವೆಂದು ಹೇಳುವಲ್ಲಿ ಯಾವ ರೀತಿಯ ಆತಿಶಯೋಕ್ತಿ ಇಲ್ಲ. ತಮ್ಮ ಕಿರಾಣ ಘರಾಣೆಯ ಅಬ್ದುಲ್ ಕರೀಂ ಖಾನ್ ಮತ್ತು ಸವಾಯಿ ಗಂಧರ್ವರ ಗಾಯನ ಶೈಲಿಯ ಭದ್ರ ಬುನಾದಿಯಲ್ಲಿ ಇತರ ಘರಾಣೆಗಳ (ಇಂದೋರ್, ಗ್ವಾಲಿಯರ್, ಪಟಿಯಾಲಾ) ಉತ್ತಮ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ತಮ್ಮದೇ ಆದ ವಿಶಿಷ್ಟ ಖಯಾಲ, ಠುಮ್ರಿಗಳನ್ನು ಜೋಶಿಯವರು ಪ್ರಸ್ತುತಪಡಿಸುವಲ್ಲಿ ಯಶಸ್ಸಿನ ಉನ್ನತ ಮಟ್ಟವನ್ನು ಮುಟ್ಟಿದ್ದಾರೆ. ಮಾಧುರ್ಯ, ಲಯಗಾರಿಕೆ, ತಾನುಗಳ ಪ್ರಯೋಗಗಳಿಂದ ಖಯಾಲ ಗಾಯನಕ್ಕೆ ವಿಶೇಷ ಒತ್ತುಕೊಡುವಲ್ಲಿ ಸಫಲರಾಗಿದ್ದಾರೆ. ತಮ್ಮ ಗಾಯನದಲ್ಲಿ ಉಸ್ತಾದ ಅಮೀರ್ ಖಾನ್ ಮತ್ತು ಕೇಸರ ಬಾಯಿಯವರಿಂದ ಪ್ರಭಾವಿತರಾಗಿರುವುದನ್ನು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಂಡಿರುವ ಜೋಶಿ, ಗಾಯಕ ಇನ್ನೊಬ್ಬರ ಗಾಯನವನ್ನು ಕೇಳಬೇಕೆಂದು ಬಯಸುತ್ತಾರೆ. ಬಹುಶಃ ಇವರು ಸಂಗೀತ ಕ್ಷೇತ್ರಕ್ಕೆ ಕಾಲಿಡುವಾಗ ನಮ್ಮ ದೇಶವು ವಸಾಹತುಶಾಹೀ ಆಡಳಿತದಿಂದ ಪ್ರಜಾಪ್ರಭುತ್ವ ವಾದದತ್ತ ವಿಕಾಸವಾದ ಪರಿಣಾಮವೋ ಏನೋ, ಸಂಗೀತವು ರಾಜಾಶ್ರಯ ಇಲ್ಲದೆ ಹೋದಾಗ ಸೂಕ್ಷ್ಮ ಮನಸ್ಸಿನ, ಪ್ರಯೋಗಶೀಲ ಭೀಮಸೇನರು ಈ ಬದಲಾವಣೆಗೆ ಸ್ಪಂದಿಸಿದ್ದು ತಮ್ಮ ಹೊಸರೀತಿಯ ಗಾಯನದ ಮೂಲಕ. ಅದಕ್ಕಾಗಿ ಅವರು ಆಯ್ದ ಸಂಗೀತ ಪ್ರಕಾರಗಳು ಹಲವಾರು. ಖಯಾಲ, ಠುಮ್ರಿ, ದಾಸವಾಣಿ, ಸಂತವಾಣಿ, ಅಭಂಗ, ಭಾವಗೀತೆ. ಎಲ್ಲದರಲ್ಲೂ ಅವರದೇ ಛಾಪು. ಅವರದ್ದೇ ಒಂದು ಅನನ್ಯತೆ. ಅದಕ್ಕೆಂತಲೇ ಅವರ ಶ್ರೋತೃ ಸಂಖ್ಯೆ ಅಪಾರ. ಜನಸಮುದಾಯದ ಎಲ್ಲ ವರ್ಗದ ಜನರು ಅವರ ಸಂಗೀತವನ್ನು ಸವಿದು ಆನಂದಿಸಿದ್ದಾರೆ. ಇವರ 'ಎಂದಿಗಾವುದೋ ನಿನ್ನ ದರುಶನ', 'ಕರುಣಿಸೋ ರಂಗಾ', 'ಎನ್ನ ಪಾಲಿಸೋ ಕರುಣಾಕರ', 'ಜೋ ಭಜೇ ಹರಿಕೋ ಸದಾ' 'ಕಂಗಳಿದ್ಯಾತಕೋ ಕಾವೇರಿ ರಂಗನ್ನ ನೋಡದ' ಇವೆಲ್ಲಾ ಅಪೂರ್ವವಾದವು.

'ಸಾವಳೆ ಸುಂದರ, ರೂಪ ಮನೋಹರ'ದಂತಹ ಅದ್ಭುತ ಗಾಯನದ ಭೀಮಸೇನನನ್ನು ಕಂಡು ಪಂಢರಿ ವಿಠಲ, ಕೃಷ್ಣ ಇವರೆಲ್ಲಾ ಪ್ರತ್ಯಕ್ಷ ದರ್ಶನ ನೀಡಲು ಮುಜುಗರ ಅನುಭವಿಸಿರಬೇಕು; ಎಲ್ಲವನ್ನೂ ಪಡೆದಿರುವ ಭೀಮಸೇನನಿಗೆ ಕೊಡಲು ತಮ್ಮಲ್ಲೇನೂ ಉಳಿದಿಲ್ಲವಲ್ಲಾ, ಎಂದು. ಅಂತಹ ಮೈಮರೆಸುವ ಸಂಗೀತ ಜೋಶಿಯವರದು. ಕಠಿಣ ಪರಿಶ್ರಮ, ಶ್ರದ್ಧೆ, ಸಾಧನೆಗಳಿಂದ ಪಡೆದ ತಮ್ಮ ವಿದ್ಯೆಯು ದೈವ ಮತ್ತು ಗುರುಕೃಪೆಯ ಫಲವೆಂದು ಭೀಮಸೇನರು ಹೇಳಿದರೆ ಅದು ಧಾರ್ಮಿಕ ಸಂಪ್ರದಾಯದ ಕವಚವನ್ನು ತೊಡಿಸಿ ತಮ್ಮ ನಿರಂತರ ಪ್ರಯತ್ನವನ್ನು ಮುಚ್ಚಿಡುವ ವೈಖರಿ, ಅಷ್ಟೆ. ಒಬ್ಬ ನಮ್ರ ಕಲಾವಿದನ ವಿನಯಕ್ಕೆ ಇದೊಂದು ನಿದರ್ಶನ. ಅಹಮಿಕೆಯ ಲವಲೇಶವೂ ಇಲ್ಲದ ಪರಿಶುದ್ಧ ವ್ಯಕ್ತಿತ್ವ ಅವರದು. ಒಂದು ಸಂದರ್ಭದಲ್ಲಿ ಅವರೆಂದಿದ್ದರು : ''ಅಬ್ದುಲ್ ಕರೀಂ ಖಾನರು ಭೈರವಿ ರಾಗದಲ್ಲಿ ಷಡ್ಜ ಹಚ್ಚುವಂತೆ ನನಗೆ ಸಾಧ್ಯವಾಗುವವರೆಗೂ ನಾನು ಅವರ ಶಿಷ್ಯನೇ ಸರಿ'', ಎಂದು. ಭಾಷೆ, ಜಾತಿ, ಲಿಂಗ, ಗಡಿ ಎಲ್ಲವನ್ನೂ ಮೀರಿ ಬೆಳೆದ ಸಂಗೀತವನ್ನು ಜನಸಮುದಾಯಕ್ಕೆ ನೀಡಿದ ಈ ಶ್ರೇಷ್ಠ ಕಲಾವಿದನಿಗೆ ಯಾವ ಪ್ರಶಸ್ತಿ ನೀಡಿದರೂ ಅದು ಕಡಿಮೆಯೇ. ತಮಗೆಷ್ಟೇ ಪ್ರಶಸ್ತಿಗಳು ದೊರೆತರೂ ತಾವು ಕೇವಲ ಭೀಮಸೇನ ಜೋಶಿ ಮಾತ್ರ, ಎಂಬ ಮಾತನ್ನು ಇತ್ತೀಚೆಗಷ್ಟೇ ಅವರು ಆಡಿದ್ದಾರೆ. ಮೇರು ಸಮಾನರಾದ ಭೀಮಸೇನರಿಗೆ ನಾವು ಸಲ್ಲಿಸಬೇಕಾದ ಅತ್ಯುನ್ನತ ಗೌರವದಲ್ಲಿ ಪ್ರಶಸ್ತಿಯು ಒಂದು ಚಿಕ್ಕ ಅಂಶ. ಮೌಖಿಕ  ಪರಂಪರೆಯ ಸಂಗೀತವನ್ನು ಇಂದಿನ ತಂತ್ರಜ್ಞಾನದ ಯುಗದಲ್ಲಿ ಹೆಚ್ಚು ಅರ್ಥಪೂರ್ಣವಾಗಿಸುವುದು ಅದಕ್ಕಿಂತಲೂ ಹೆಚ್ಚಿನ ಗೌರವವಾಗುತ್ತದೆ. ಅವರ ಸಂಗೀತ ಕೇಳುವುದು, ಇತರರನ್ನು ಕೇಳುವಂತೆ ಮಾಡುವುದು, ಇವು ಹೃದಯ ಶ್ರೀಮಂತಿಕೆಯನ್ನು ತರುತ್ತವೆ. ಮನಸ್ಸಿಗೆ ಆಹ್ಲಾದ ಪಡೆದುಕೊಳ್ಳುವುದರ ಜೊತೆಗೆ ನಮ್ಮ ಸಾಂಸ್ಕೃತಿಕ ಬದುಕನ್ನು ಹೆಚ್ಚು ಹಸನಾಗಿಸಿಕೊಳ್ಳುವ ನಿಟ್ಟಿನಲ್ಲಿ ನಾವು ಮುನ್ನಡೆದರೆ ಯಶಸ್ವೀ ಕಲಾವಿದನಿಗೆ ಅದಕ್ಕಿಂತಲೂ ಬೇರೆ ತೃಪ್ತಿ ಇಲ್ಲ. ಹಾಗೆ ಮುನ್ನಡೆಸಲು ಭೀಮಸೇನ ಜೋಶಿಯವರು ಸಮರ್ಥರಿದ್ದಾರೆ; ತೃಪ್ತಿ ಪಡೆಯಲು ನಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಬೇಕು, ಅಷ್ಟೆ.

**ವಿನಾಯಕ ಎಲ್. ಕುಲಕರ್ಣಿ**
೫೬, 'ಅಮೃತವರ್ಷಿಣಿ' ೭ನೇ ಮುಖ್ಯರಸ್ತೆ, ಬಿಕಾಸಿಪುರ, ಸುಬ್ರಹ್ಮಣ್ಯಪುರ ಪೋಸ್ಟ್, ಬೆಂಗಳೂರು-೫೬೦ ೦೬೧

*ಸಂಪಾದಕೀಯ* *(೫ನೇ ಪುಟದಿಂದ)*

ವೇಳೆಗೆ ಹಲವು ತಲೆಗಳು ಉರುಳಬೇಕಾಗಿತ್ತು. ಆದರೆ ಅಂತಹದ್ದೇನೂ ಆಗಿಲ್ಲ. ಬದಲಾಗಿ, ಬುಷ್ ಆಡಳಿತವು ಈ ಬಿಕ್ಕಟ್ಟನ್ನು ಒಂದು ಮಹತ್ತರ ಅವಕಾಶವೆಂಬ ರೀತಿಯಲ್ಲಿ ನಡೆಸಿಕೊಂಡಿದೆ. ಸರ್ಕಾರದ ನಿಲುವು ಸ್ವಾರಸ್ಯಕರವಾಗಿದೆ : ಈಗ ಸಂಕಷ್ಟಕ್ಕೆ ಸಿಲುಕಿರುವ ಹಣಕಾಸು ಸಂಸ್ಥೆಗಳು ಮುಳುಗಿಹೋಗಲು ಬಿಡಲಾಗದಷ್ಟು ದೊಡ್ಡವು; ಆದ್ದರಿಂದ ಅವನ್ನು ಪಾರು ಮಾಡಲು ಸಾರ್ವಜನಿಕ ಹಣವನ್ನು ನೀಡಬೇಕಾದ್ದು ಅತ್ಯಗತ್ಯ. ಸರ್ಕಾರವು ಕೊಡುಗೈಯ್ಯಿನ ಧಾರಾಳತನ ತೋರಿಸುವುದು ಸಾಧುವಾಗಿದೆ ! – ಜನಸಾಮಾನ್ಯರು ಚಿಕ್ಕ ಜನ, ಆದ್ದರಿಂದ ಅವರು ಕಳೆದುಕೊಳ್ಳುವ ಹಣಕ್ಕೆ ಬೆಲೆಯಿಲ್ಲ. ಹೀಗಾಗಿ ಅವರಿಗೆ ಎರಡು ಬಗೆಯ ಹೊಡೆತ ಬಿದ್ದಿದೆ: ತಮ್ಮ ಸ್ವಂತದ ಹಣ ಕಳೆದುಕೊಂಡದ್ದೊಂದು, ತಾವು ಸರ್ಕಾರಕ್ಕೆ ಪಾವತಿಸಿದ್ದ ತೆರಿಗೆಯ ಹಣವನ್ನು ಖಾಸಗಿ ಕಂಪನಿಗಳಿಗೆ ವರ್ಗಾಯಿಸಿದ್ದು ಇನ್ನೊಂದು. ಅಂದರೆ ಅವರ ಪೀಡಕರನ್ನು ತಮ್ಮ ಸಟ್ಟಾ ವ್ಯಾಪಾರದಲ್ಲಿ ತೊಡಗಿಸಿಡಲು ಸ್ವತಃ ಜನಸಾಮಾನ್ಯರೇ ಹಣ ತೆರಬೇಕು !

ಹಣಕಾಸು ಸಂಸ್ಥೆಗಳು ಹಾಗೂ ಅವುಗಳ ನಿರ್ಲಜ್ಜ ಮೇಲ್ವಿಚಾರಕರು ಸ್ವಲ್ಪ ಮಾನ ಕಳೆದು ಕೊಂಡಿರಬಹುದು, ಆದರೆ ಅವರ ಲಾಭಗಡುಕತನಕ್ಕೆ ಯಾವ ಧಕ್ಕೆಯೂ ಉಂಟಾಗಿಲ್ಲ. ಎಲ್ಲಿಯವರೆಗೆ ಪರಭಾರೆ ವ್ಯವಹಾರಗಳು ಸುಸೂತ್ರವಾಗಿ ನಡೆಯುತ್ತಿದ್ದವೋ ಅಲ್ಲಿಯ ತನಕ ಪೊಗದಸ್ತು ಲಾಭ ಬಾಚಿಕೊಂಡಿದ್ದರು; ಸಾರೋಟು ಮಗುಚಿಕೊಂಡಾಗ ಸರ್ಕಾರವು ಮಧ್ಯಪ್ರವೇಶ ಮಾಡಿ ಅವರ ಸಾಲಗಳನ್ನೆಲ್ಲಾ ರಾಷ್ಟ್ರೀಕರಿಸಿತು ! ಅದಕ್ಕಿಂತಲೂ ಉತ್ತಮವಾದ ಚೌಕಾಶಿಯುಂಟೆ !!

ಇಷ್ಟೊಂದು ಅನಾಹುತ ಜರುಗಿದ್ದಾಗ ಸಹ ಪ್ರಬಲವಾದ ನಿಯಂತ್ರಣ ಸೂತ್ರಗಳನ್ನೇನೂ ಅಳವಡಿಸಲಾಗಿಲ್ಲ, ಹಾಗೆ ಮಾಡಬೇಕೆಂಬ ಒತ್ತಾಯವೂ ಗಟ್ಟಿಯಾಗಿ ಬಂದಿಲ್ಲ. ಕೇವಲ ಅಲ್ಲೊಂದು, ಇಲ್ಲೊಂದು ಕೂಗು ಕೇಳಿಬಂದಿದೆ, ಅಷ್ಟೆ. ಅಮೆರಿಕಾದ ಪ್ರಮುಖ ಅರ್ಥಶಾಸ್ತ್ರಜ್ಞರು ಅಂಥವರು. ಅವರಲ್ಲಿ ಬಹುಮಂದಿಗೆ ಆರ್ಥಿಕ ವ್ಯವಹಾರಗಳಲ್ಲಿ ಸರ್ಕಾರವು ಮಧ್ಯಪ್ರವೇಶ ಮಾಡುವುದೆಂದರೆ ಅಪಥ್ಯ. ಭಾರಿ ವ್ಯಾಪಾರಿಗಳು, ಉದ್ಯಮಿಗಳು ಸಹ ಅದನ್ನು ಒಂದು ಅನಾರೋಗ್ಯಕರ ಪ್ರವೃತ್ತಿಯೆಂದು ಬೊಬ್ಬಿಡುತ್ತಾರೆ. ಆದರೆ ಅವರ ಸ್ವಂತದ ಅವ್ಯವಹಾರಗಳಿಂದ ನಷ್ಟಕ್ಕೆ ಸಿಲುಕಿಕೊಂಡಾಗ ಮಾತ್ರ ಸರ್ಕಾರವು ಕಡ್ಡಾಯವಾಗಿ ಸಹಾಯಹಸ್ತ ನೀಡಬೇಕು ! ಅಮೆರಿಕಾದ ಮಾರುಕಟ್ಟೆ ಸಿದ್ಧಾಂತವು ಇಂತಹ ವಿಪರ್ಯಾಸಗಳಿಂದ ತುಂಬಿದೆ. ಅದು ಬಂಡವಾಳಶಾಹಿಯ ಹೀನ ಲಕ್ಷಣ.

ಅಮೆರಿಕಾದಲ್ಲಿ ಘಟಿಸಿರುವ ಆಘಾತದಿಂದ ಭಾರತವು ಕಲಿಯಬೇಕಾದ್ದು ಸಾಕಷ್ಟಿದೆ. ಮಾರುಕಟ್ಟೆಯ ಸ್ವಾಯತ್ತ ವರ್ತನೆಯು ಸರ್ವಥಾ ಅಸಮರ್ಪಕವೆಂಬುದಕ್ಕೆ ಪುರಾವೆಯೇನಾದರೂ ಬೇಕಾದರೆ, ಅದಕ್ಕೆ ಈಗ ಪುರಾವೆ ಸಿಕ್ಕಿದೆ. ಮಾರುಕಟ್ಟೆಯ ನಿಯಂತ್ರಣವು ಅನಿವಾರ್ಯವೆಂದು ಸಿದ್ಧವಾಗಿದೆ. ನಮ್ಮ ದೇಶದಲ್ಲಿರುವ ಸಾಮಾಜಿಕ-ಆರ್ಥಿಕ ತಾರತಮ್ಯಗಳ ಸಂದರ್ಭದಲ್ಲಿ ನಿಯಂತ್ರಣವು ಅತ್ಯಗತ್ಯ. ಭಾರತದ ಆರ್ಥಿಕತೆಯ ಅನೇಕ ವಿಭಾಗಗಳು ಮುಂದಿನ ದಿನಗಳಲ್ಲಿ ಮುಗ್ಗಟ್ಟಿಗೆ ಸಿಲುಕಿಕೊಳ್ಳುವುದು ಸಂಭಾವ್ಯವೆನಿಸುತ್ತದೆ. ವಿಶೇಷತಃ ಅಮೆರಿಕಾದೊಡನೆ ವ್ಯವಹಾರಗಳನ್ನು ಇರಿಸಿಕೊಂಡಿರುವ ವಿಭಾಗಗಳಿಗೆ ಮೊದಲ ಪೆಟ್ಟು ಖಾತ್ರಿಯಾದದ್ದು. ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ಕ್ಷೇತ್ರಗಳು ಈ ವಿಭಾಗಕ್ಕೆ ಸೇರುತ್ತವೆ. ಅಂತೆಯೇ, ಅಮೆರಿಕಾದ ಉದ್ಯಮ, ಬ್ಯಾಂಕ್ ವ್ಯವಹಾರ, ಮುಂತಾದವುಗಳ ಮುನ್ನಡೆಗೆ ಭಾರತದಲ್ಲಿ ಶ್ರಮಿಸುತ್ತಿರುವ ಕಾರ್ಯಕ್ಷೇತ್ರಗಳಿಗೂ ಏಟು ಬೀಳುವುದು ಖಂಡಿತ. ಹಾಗೇನೂ ಆಗುವುದಿಲ್ಲವೆಂದು ಅರ್ಥ ಸಚಿವ ಪಿ. ಚಿದಂಬರಂ ಎಷ್ಟೇ ಪ್ರಲಪಿಸಿದರೂ ಅದನ್ನು ತಪ್ಪಿಸುವುದು ದೂರದ ಮಾತೇ ಸರಿ. ಇಂತಹ ಬಿಕ್ಕಟ್ಟುಗಳನ್ನು ಇನ್ನು ಮುಂದಾದರೂ ನಮ್ಮ ಮೇಲೆ ಹೇರಿಕೊಳ್ಳದಿರುವಂತೆ ಸಂಯೋಜಿಸಿಕೊಳ್ಳಬೇಕಾದರೆ ದೂರದರ್ಶಿತ್ವ ಮತ್ತು ದೀರ್ಘ ಕಾಲಿಕ ಯೋಜನೆಗಳು ಬೇಕಾಗುತ್ತವೆ. ಅವುಗಳಲ್ಲಿ ಅತಿ ಪ್ರಮುಖವಾದವೆಂದರೆ, (ಅ) ಆರ್ಥಿಕ ಸ್ವಾವಲಂಬನೆ. ಮತ್ತು (ಆ) ಉತ್ಪಾದನೆ ಮುಂತಾದ ಆರ್ಥಿಕ ಚಟುವಟಿಕೆಗಳ ಬಹುಮುಖೀ ವಿಸ್ತರಣೆ.

ಬದರಿನಾಥ್ ರಾವ್

# ಆ ಅಮೂಲ್ಯ ಕಲಾಕೃತಿ

ಬ. ನಾ. ರಘುರಾಮ

ನಮ್ಮ ಮಲೆನಾಡಿನ ಪಶ್ಚಿಮ ಘಟ್ಟಗಳ ಇಳುಕಿನಲ್ಲಿ ಒಂದೆಡೆ ಪಚ್ಚೇ ಬೈಲೆಂಬ ಒಂದು ಪುಟ್ಟಗ್ರಾಮ. ಘಟ್ಟಗಳ ಸುಂದರ ಭವ್ಯ ದೃಶ್ಯಾವಳಿ. ವಿಶಾಲವಾಗಿ ಕಣ್ಣೆದುರಾಗುವಂಥ ಸ್ಥಳ, ಹೀಗಿದ್ದು ಚಿತ್ರಕಾರರಿಗೆ ಹೇಳಿಮಾಡಿಸಿದಂಥ ಜಾಗ. ಒಂದೆರಡು ವಸತಿ-ಹೋಟೆಲುಗಳು ಉದ್ಭವವಾಗಿದ್ದವು. ಅವಲ್ಲದೆ ಟೆಂಟ್, ಗುಡಿಸಲುಗಳಲ್ಲೂ ಹತ್ತೆಂಟು ವಿವಿಧ ಬಗೆಯ ಚಿತ್ರ ಬಿಡಿಸುವವರದೊಂದು 'ತಾಂಡ'ವೇ ಆಗಿದ್ದಿತು ಅಲ್ಲಿ. ಆ ಗ್ರಾಮ ಸಣ್ಣಗುಡ್ಡದ ತಪ್ಪಲಿನಲ್ಲಿ ಇದ್ದು ಟೆಂಟ್, ಗುಡಿಸಲು, ಹೋಟೆಲುಗಳು ಗುಡ್ಡದ ಮೇಲಿನ ವಿಶಾಲವಾದ ಜಾಗದಲ್ಲಿದ್ದುವು. ಮೇಲಕ್ಕೆ ಹಲವು ಕಡೆಗಳಿಂದ ಕಾಲುದಾರಿಗಳಿದ್ದು ಅಲ್ಲಲ್ಲಿ ಪರಸ್ಪರ ಹಾದುಹೋಗುತ್ತಿದ್ದವಾಗಿ ಗಜಿಬಿಜಿಯಾಗಿತ್ತು. ಗುಡ್ಡದ ಮೇಲಕ್ಕೆ ಬಣ್ಣ, ಕಾಗದ, ಕುಂಚ, ಕ್ಯಾನ್ವಾಸ್ ಪೂರೈಸಲು ಬರುವ ಅಂಗಡಿಯವ ತರುವಾಯ ಒಂದು ದಿನ 'ಬಿಲ್'ವಸೂಲಿಗಾಗಿ ಇಂಥ ಗಜಿಬಿಜಿ ಹಾದಿಗಳಲ್ಲಿ ದಿಕ್ಕೆಟ್ಟು ಬರಿಗೈಯಲ್ಲಿ ಹಿಂದಿರುಗುತ್ತಿದ್ದ ತನ್ನನ್ನೇ ಎದುರುಗೊಂಡರೆ ಆಶ್ಚರ್ಯವೇನಿಲ್ಲ.

ಚಿತ್ರಕಾರರಿಗೆ ಕೋಣೆ ಬಾಡಿಗೆ ಕಡಿಮೆಯೇ ಇರಬೇಕು. ಪಶ್ಚಿಮಕ್ಕೇ ಕಿಟಕಿ ಬೇಕು. ಚಿತ್ರಿಸಲು ಅನುಕೂಲವೂ ಬೇಕು. ಇದ್ದ ಒಂದೆರಡು ಹೋಟೆಲ್‌ಗಳು ತುಂಬಿದ್ದವು. ಟೆಂಟ್, ಗುಡಿಸಲು ವಾಸಿಗಳು ಬಯಲನ್ನೇ ಉಪಯೋಗಿಸಬೇಕಾಗಿತ್ತು. ಹೋಟೆಲ್ ಒಂದರ ಮೇಲಂತಸ್ತಿನ ಎರಡು ಕೋಣೆಗಳನ್ನು ಬಾಡಿಗೆ ಪಡೆದು ಇಬ್ಬರು ಹುಡುಗಿಯರು ತಮ್ಮ ಸ್ಟುಡಿಯೋ ಇರಿಸಿಕೊಂಡಿದ್ದರು. ಜೋತ್ಸ್ನಾ ಒಬ್ಬಳಾದರೆ ಸುಜನಾ ಇನ್ನೊಬ್ಬಳು, 'ಜಾನಿ' ಹಾಗೂ 'ಸೂಜಿ' ಚುಟಕ ನಾಮಗಳು. ಜಾನಿ



ಬೆಳಗಾವಿಯವಳು, ಸೂಜಿ ಶಿರ್ಶಿಯವಳು. ಇಬ್ಬರೂ ಧಾರವಾಡದ ಕಾಲೇಜಿನಲ್ಲಿ ಓದುವಾಗ ಗೆಳತಿಯರಾಗಿ, ಚಿತ್ರಕಲೆಯಲ್ಲಿ ಆಸಕ್ತರಾಗಿದ್ದು ಪಚ್ಚೇಬೈಲಿಗೆ ಬಂದಿದ್ದರು. ಅಲ್ಲದೆ ಅವರ ಆಸೆ-ಆಕಾಂಕ್ಷೆಗಳು, ಸ್ವಭಾವಗಳು ಒಂದೇ ರೀತಿಯವಾಗಿದ್ದು ಸಹವಾಸ ತುಂಬ ಹಿತವಾಗಿತ್ತು ಇಬ್ಬರಿಗೂ.

ಬೇಸಿಗೆ ಕಳೆದು ಮಳೆಗಾಲ ಸುರುವಿನೊಡನೆಯೇ ಮಲೇರಿಯಾ ಕಾಣಿಸಿಕೊಂಡಿತ್ತು. ಅದರ ತೌರೇ ಮಲೆನಾಡು. ಮಳೆಗಾಲದಲ್ಲಿ ಹೆಚ್ಚಿನ ಉರುಬು, ಎಚ್ಚರಿಕೆ ವಹಿಸದ ನಾಲ್ಕಾರು ಮಂದಿಗೆ ಜ್ವರ ಅಂಟಿಕೊಂಡಿತ್ತು. ಕೆಳಗಿನ ಗ್ರಾಮದಲ್ಲಂತೂ ಮಲೇರಿಯಾ 'ಮಾರಿ'ಯಾಗಿದ್ದಳು. ಇದು ಗಂಡಸು, ಇದು ಹೆಂಗಸು; ಇದು ಮುದುಕಿ, ಇದು ಕೂಸು; ಇವ ಪೈಲ್ವಾನ್, ಈಕೆ ರಕ್ತಹೀನ ದುರ್ಬಲ ಹುಡುಗಿ ಎಂಬ ವಿವೇಚನೆ, ಕಕ್ಕಲಾತಿ ಆ ಜ್ವರಕ್ಕೆಲ್ಲಿಂದ ಬಂದೀತು! ಅನೀಮೀಯ ಅಂಟಿದ್ದ ಜಾನಿಯನ್ನೂ ಜ್ವರ ಕೆಡವಿತು. ಚಳಿ ನಡುಕ ಬಂದುದೇ ತಡ ಜಾನಿ ಮಂಚದ ಒಂದು ಮೂಲೆಗೆ ರಗ್ಗು ಹೊದೆದು ಮುಲಗುತ್ತ ಮುದುರಿಕೊಂಡಳು. ನಿಶ್ಚೇಷ್ಟ ದೇಹ, ಹೊರಗಡೆ ಕಿಟಿಕಿ ಮೂಲಕ ಕಾಣುತ್ತಿದ್ದ ಹೋಟೆಲಿನ ಅಡುಗೆ ಮನೆಯ ಕಪ್ಪು ಬಡಿದ ಗೋಡೆಯನ್ನೇ ಎವೆಯಿಕ್ಕದೆ ನೋಡುತ್ತಿದ್ದ ಅರೆ ಮುಚ್ಚಿದ್ದ ಕಣ್ಣುಗಳು, ಆಗಾಗ ಮುಲಗುಟ್ಟು, ಜ್ವರದ ತಾಪ ರಾತ್ರಿಪೂರ ಅವಳನ್ನು ಕಂಗೆಡಿಸಿತ್ತು. ಮಾರನೆಯ ದಿನ ಬೆಳಿಗ್ಗೆ ಬಿಡುವೇ ಇರದ ಗ್ರಾಮದ ವೈದ್ಯ ಹುಬ್ಬುಗಂಟು ಹಾಕಿಕೊಂಡು ನೋಡಲು ಬಂದ. ಗ್ರಾಮ ಹಾಗೂ ಗುಡ್ಡದ ಮೇಲುಗಡೆಯ ಆ 'ತಾಂಡ'ಗಳಿಗೆ ಹತ್ತಿ-ಇಳಿದು ಸಾಕಾಗಿ ಹೋಗಿತ್ತು ಆತನಿಗೆ. ಜಾನಿಯನ್ನು ಪರೀಕ್ಷಿಸಿ ಔಷಧ ಬರೆದುಕೊಟ್ಟು ಹೋದವನು ನಿತ್ಯ ವಿಸಿಟ್ ಕೊಡುತ್ತಿದ್ದ.

ಒಂದು ದಿನ ಸೂಜಿಯನ್ನು ಹೊರ ಅಂಗಳಕ್ಕೆ ಕರೆದು, ಉಷ್ಣಮಾಪಿಯನ್ನು ಅಲುಗಾಡಿಸುತ್ತ ವೈದ್ಯ ಹೇಳಿದ, ''ನಿನ್ನ ಗೆಳತಿಗೆ ವಾಸಿಮಾಡಿಕೊಳ್ಳೋ ಆಸೇನೇ ಇದ್ದಹಾಗಿಲ್ಲ. ಜ್ವರ ಭಾಳಾ ಅದೆ ಇನ್ನೂ. ತಾನು ಬದುಕೇ ಬದುಕ ಬೇಕಂತ ಘಟ್ಟಿ ಮನಸ್ಸು ಮಾಡದಿದ್ದರೆ ಔಷಧಿ, ಪಾಪ, ಏನು ಮಾಡೀತು ? ಈ ಹುಚ್ಚು ಮಂದಿ ತಂತಮ್ಮ ಗೋರಿಗಳ ಯೋಚನ್ಯಾಗೆ ಮುಳುಗಿ ವೈದ್ಯರನ್ನೇ ಮೂರ್ಖರನ್ನಾಗಿ, ಕೆಲಸಕ್ಕೆ ಬಾರದವರನ್ನಾಗಿ ಮಾಡಲಿಕ್ಕೆ ನೋಡ್ತಾರೇನೋ ? ನಿನ್ನ ಈ ಪುಣ್ಯಾತ್ಗಿತ್ತೀನೂ ಬದುಕೋ ಆಸಿ ಕಳಕೊಂಡವಳ ಹಾಗೆ ಮಾಡ್ತಿದ್ದಾಳೆ... ಅಲ್ಲಾ, ಅವಳಿಗೇನಾದರೂ ಒಂದು ಆಸೀ-ಗೀಸಿ ಅದೇನು ?'' ''ಅವಳಿಗೇ–ಅಂದ್ಹಾಗೆ, ಸೂರ್ಯ ಮುಳುಗೋ ಹೊತ್ತಿನಾಗೆ ಘಟ್ಟಗಳು ಕಾಂಬೋ ದೃಶ್ಯ ತಾನು ಚಿತ್ರಿಸಬೇಕೆಂಬ ಆಸೀ ಭಾಳಾ ಅವಳಿಗೆ,'' ಸೂಜೀ ಹೇಳಿದಳು. ''ಚಿತ್ರ ಬರೆಯೋದೂ ? – ಛ್ ! ಅಂಥದ್ದಲ್ಲಮ್ಮಾ, ಒಂದಲ್ಲ ಎರಡು ಸಲ ಯೋಚಿಸೋ ಅಂಥದ್ದು; ಒಬ್ಬ ಹುಡುಗಾ ಅಂತಿಟ್ಟುಕೊಳ್ಳೋಣ''. ''ಹುಡುಗಾ !'' ಸೂಜಿಯ ದನಿ ಬಿಲ್ಲಿನ ಬಿಗಿ ಹುರಿಯಂತೆ ಠೇಂಕರಿಸಿತು, ''ಅಂಥ ಯೋಗ್ಯತಿ ಇವತ್ತಿನ ಯಾವ ಹುಡುಗಂಗೇ...! ಇಲ್ಲ ಬಿಡ್ರೀ, ಸರ್, ಅಂಥಾದ್ದೇನಿಲ್ಲರೀ.'' ''ಹಾಗಾರೆ ಬರೇ ನಿಶ್ಶಕ್ತಿ, ಅಷ್ಟೇ. ನಂಗೆ ವೈದ್ಯಕೀ ತಿಳಿದ ಮಟ್ಟಿಗೆ ಪ್ರಯತ್ನ ನಡಸ್ತೀನಮ್ಮಾ ವಾಸಿಮಾಡ್ಲಿಕ್ಕೆ. ಆದರೆ ನೋಡು, ರೋಗಿ ತನ್ನ ತಿಥೀಗೆ ಬರೋ ಬ್ರಾಂಬ್ರನ್ನ ಎಣಸ್ಲಿಕ್ ಹತ್ತಿದ ಅಂದ್ರೆ ನನ್ನ ಚಿಕಿತ್ಸೀಗೆ ಇರೋ ವಾಸಿಮಾಡೋ ತಾಕತ್ನಾಗೆ ಐವತ್ತು ಶೇಕಡಾ ಕಳದ್ ಬಿಡ್ತೀನಿ. ಈಗ್ನೋಡು. ಒಂದು ಒಳ್ಳೇ ಫ್ಯಾಷನ್‌ದು ಚೂಡಿದಾರ್ರಾ ಪೈಜಾಮಾ, ಹುಬ್ಬಳ್ಳೀಗ್ಹೋಗಿ ಒಳ್ಳೆ ಒಂದು ಸಿನಿಮಾ ನೋಡೋದು ಅಥವಾ ಬೆಂಗ್ಳೂರು ಬೆಳಗಾವಿಯಾಗೆ ಈಚಿನ ಹೊಸ ಸ್ಟೈಲ್-ಫ್ಯಾಷನ್ ಏನಂತ ಒಂದ ಪ್ರಶ್ನೀ. ಇಂಥ ಕುತೂಹಲ ನಿಂಗೆ ಅವಳು ತಿಳಿಸೋ ಹಾಗೆ ನೀ ಮಾಡಿದ್ರೆ ಅವಳು ಉಳಿಯೋ ಛಾನ್ಸ್ ಹತ್ತಕ್ಕೊಂದಲ್ಲ ಐದಕ್ಕೊಂದಂತ ಭರವಸಿ ಕೊಡ್ತೀನಿ.''

ವೈದ್ಯ ಹೋದ ಮೇಲೆ ತಮ್ಮ ಕೆಲಸದ ಕೋಣೆಗೆ ಹೋದ ಸೂಜಿ ತನ್ನ ಸೆರಗೆಲ್ಲ ಒದ್ದೆಯಾಗುವಷ್ಟು ಅತ್ತಳು. ಆಮೇಲೆ ಹಲಗೆ ಕುಂಚ ಹಿಡಿದುಕೊಂಡು ಯಾವುದೋ ಪತ್ರಿಕೆಯ ಕತೆಗೆಂದು ಒಂದು ಮಸಿ-ಚಿತ್ರವನ್ನು ಬರೆಯ ತೊಡಗಿದಳು. ಚಿತ್ರಕಲೆಯಲ್ಲಿ ಗಣ್ಯಸ್ಥಾನವನ್ನು ಬಯಸುವ ಸಣ್ಣಪುಟ್ಟ ಉತ್ಸಾಹೀ ಚಿತ್ರಕಾರರಿಗೆ ತಮ್ಮಂತೆಯೇ ಸಾಹಿತ್ಯರಂಗದಲ್ಲಿ ವಿಶೇಷ ಸ್ಥಾನಕ್ಕಾಗಿ ಹಂಬಲಿಸಿ ದುಡಿಯುತ್ತಿರುವ ಹೊಸ ಬರಹಗಾರರು ಪತ್ರಿಕೆಗಳಿಗೆ ಕಳಿಸುವ ಕತೆ-ಗೀತಗಳಿಗೆ ಹೊಂದಿಕೆಯಾಗುವಂಥ ಚಿತ್ರ, ವ್ಯಂಗ್ಯಚಿತ್ರಗಳನ್ನು ಬರೆದು ಒದಗಿಸುವುದು ಉತ್ತಮ ಸಾಧನೆ ತಾನೆ? ಸೂಜಿ ಚಿತ್ರಿಸುತ್ತಿದ್ದುದು ಒಂದು ಕತೆಯ ನಾಯಕ ಹಳ್ಳಿಯ ಒಬ್ಬ ಗೊಲ್ಲನನ್ನು. ಅವನ ಕರಿಚಡ್ಡಿ,

ಕೆಂಪುವಲ್ಲಿ, ಚಿತ್ರಿಸುತ್ತಿರುವಂತೆಯೇ ಪಕ್ಕದಿಂದ ಅಸ್ಪಷ್ಟವಾಗಿ ದನಿಯೊಂದು ಬಾರಿಬಾರಿ ಕೇಳಿಬಂದಿತು. ಸೂಜಿ ತನ್ನ ಗೆಳತಿ ಮಲಗಿದ್ದ ಮಂಚದ ಬಳಿಗೆ ಬೇಗ ನಡೆದಳು.

ಜಾನಿಯ ಕಣ್ಣುಗಳು ಅಗಲವಾಗಿ ತೆರೆದಿದ್ದವು. ಕಿಟಕಿಯ ಹೊರಗಡೆ ದಿಟ್ಟಿಸುತ್ತ ಏನನ್ನೋ ಎಣಿಸುತ್ತಿದ್ದಳು – ಅದೂ ಹಿಂದುಮುಂದಾಗಿ! "ಹನ್ನೆರಡು", ಸ್ವಲ್ಪ ಹೊತ್ತು ತರುವಾಯ, "ಹನ್ನೊಂದು". ಹತ್ತು ಒಂಬತ್ತು ಮತ್ತು ಎಂಟು-ಏಳು ಅಂತರವಿಲ್ಲದೆ ಎಣಿಕೆಯಾಯಿತು. ಹಾಗೆ ಎಣಿಸಲು ಏನಾದರೂ ಇದ್ದೀತು ಎಂದು ಸೂಜಿ ಕಿಟಕಿಯ ಹೊರಕ್ಕೆ ನೋಡುತ್ತ ಹುಡುಕಿದಳು. ಏನೇನು ಇರಲಿಲ್ಲ. ನಿರ್ಜನವಾದ ಅಂಗಳ, ಹತ್ತು ಹನ್ನೆರಡು ಹೆಜ್ಜೆಯ ಆಚೆ ಕಟ್ಟಿಬಿಟ್ಟುಹೋಗಿದ್ದ ಅಡುಗೆಮನೆ-ಗೋಡೆ, ಆ ಗೋಡೆಗೆ ಅರ್ಧಮಟ್ಟದವರೆಗೂ ಏರಿತ್ತು ಎಂಥದೋ ಬಳ್ಳಿ-ಅದೂ ಸಹ ಒಣಗಿಹೋಗಿ ಬೇರು ಮೊದಲುಗೊಂಡು ಅರ್ಧಂಬರ್ಧ ಒಣಗಿದಂತಿತ್ತು. ಚಳಿಗಾಳಿಯ ಬಡಿತಕ್ಕೆ ಸಿಕ್ಕು ಬಹಳಷ್ಟು ಎಲೆಗಳೆಲ್ಲ ಉದುರಿದ್ದವು. ಕೆಲವೇ ಎಲೆಗಳುಳಿದಿದ್ದ ಆ ಒಣಕಲು ಬಳ್ಳಿ ಆ ಕಪ್ಪು ಹಿಡಿದ ಮುರುಕಲು ಗೋಡೆಯನ್ನು ಆಶ್ರಯಕ್ಕಾಗಿ ಅಪ್ಪಿ ಹಿಡಿದಿತ್ತು.

"ಏನೇ ಅದು, ಜಾನೂ, ನೀ ಎಣಿಸ್ತಿರೋದು, ಅದೂ ಹಿಂದುಮುಂದಾಗಿ ?" ಪ್ರೀತಿಯಿಂದ, ಅಚ್ಚರಿಯಿಂದ ಕೇಳಿದಳು ಸೂಜಿ. "ಆರು" ಜಾನಿ ಸುಯ್ದು, "ಲಗುಲಗೂನೆ ಬೀಳ್ತಾ ಅವೆ ಈಗ. ಮೂರು ದಿವಸದ ಕೆಳಗೆ ನಂಗೆಣಿಸ್ಲಿಕ್ಕೇ ಆಗದಷ್ಟಿದ್ದವು. ಅವನ್ನ ಎಣಿಸ್ಲಿಕ್ಕೆ ಹೋಗಿ ನನ್‌ತಲೀ ಚಿಟ್‌ಹಿಡ್ದುಹೋಗಿತ್ತು. ಈಗ ಭಾಳಾ ಹಗುರಾತು. ಅಗೋ, ಮತ್ತೊಂದು ಬಿತ್ತು, ಇನ್ನ ಉಳಿದಿರೋದು ಐದೇ ಐದವ್ವ." "ಯಾತರದೇ ಅದು ಐದು ಅಂದರೆ ? ನಿನ್ನ ಸೂಜೀಗೆ ಹೇಳಲ್ಲಾ ?" "ಯಲೀಗಳೇ, ಆ ಬಳ್ಳೀ ಮ್ಯಾಲವಲ್ಲಾ, ನೋಡು. ಎಣಸೀ ಎಣಸೀ ಸಾಕಾಗ್ಯದವ್ವಾ. ಕೊನೀಯಲೀ ಬೀಳೋದನ್ನ ಕಾದಿದ್ದೀನಿ. ಬಿತ್ತಂದ್ರೆ ಅದರ ಜತೀಗೆ ನಾನೂ ಹೋಗೋ ಆಕೀ! ಮೂರು ದಿವಸಾ ಹಿಂದಿನಿಂದ್ಲೇ ನಂಗೆ ಗೊತ್ತಾಗ್ಯದೆ. ಆ ಡಾಕ್ಟ್ರು ನಿಂಗೆ ಹೇಳ್ಲಿಲ್ಲೇನು ?"

"ನಂಗ್ಯಾರೂ ಹೇಳ್ಲಿಲ್ಲವ್ವಾ ಇಂಥ ಹುಚ್ಚುಚ್ಚು ಮಾತುಗಳ್ನ. ಆ ಒಣಕಲು ಬಳ್ಳೀಯಲಿಗಳು ಉದುರೋದಕ್ಕೂ ನೀ ಗುಣಹೊಂದಲಿಕ್ಕೂ ಏನೇ ಅದು ಸಂಬಂಧ ? ನೀ ಹುಷಾರಿದ್ದಾಗ ಅದೇ ಬಳ್ಳೀನ ಎಷ್ಟೊಂದು ಪ್ರೀತಿಸ್ತಿದ್ದಿ ಜ್ಞಾಪಿಸಿಕೋ. ಮೂರ್ಖತನ ಮಾಡಬೇಡ ನೋಡು ಜಾನಿ. ಅಂದ್ಹಾಗೆ ಡಾಕ್ಟ್ರು ಇವತ್ ಬೆಳಿಗ್ಗೆ ಏನಂತ ಹೇಳಿ ಹೋದ್ರು ಗೊತ್ತೇನು ? – ತಡೀ, ಏನಂತಂದ್ರು ಅಂದ್ರೇ – ಹತ್ರಾಗೆ ಒಂದೇ ಒಂದು ಪಾಲದೆ ನಿನ್ನ ಗೆಳತಿಗೆ ಗುಣಾ ಆಗೋದು. ನಾಳೇನೇ ಎದ್ದು ಓಡ್ಯಾಡ್ತಾಳೆ ನೋಡು, ಅಂತ. ಗೊತ್ತೇನು ? ಆದ್ರೆ ನೀ ಏನೇನೋ ಹುಚ್ಚು - ಹುರುಳು ತಗದು ಕೂತ್ಯಾಲ್ಲಾ!... ಇಗೋ, ಈ ಗಂಜೀ ತಟಗು ಕುಡಿದುಬಿಡು ಮತ್ತೆ; ಯಾವ ಆತಂಕಾನೂ ಇರ್ದೆ ನಿನ್ನ ಸೂಜೀ ಆ ಕಾರ್ಟೂನ್ ಒಂದಿಷ್ಟು ಬರದು ಮುಗಿಸ್ಲಂತೇ. ಆ ಪತ್ರಿಕೀ ಸಂಪಾದಕಂಗೆ ನಾಳೇನೇ ಕೊಡಬೇಕು. ಅವನಿಗೆ ಕೊಟ್ಟು ಆ ರೊಕ್ಕದಾಗೆ ನನ್ನ ಮುದ್ದು ಜಾನೀಗೆ ಕ್ರೀಂ-ಚಾಕ್‌ಲೇಟ್ ಕೊಂಡ್ಕೊಂಡು, ನನ್ ಹೊಟ್ಟೇಗಿಷ್ಟು ಹೋಟಲ್ ತಿನಸು ಹಾಕ್ಕೊಂಡು ಬರ್ತೀನಂತೆ."

"ನಂಗೇನೂ ಚಾಕ್ಲೇಟ್ ತರಬೇಕಾಗಿಲ್ಲೇಳು", ಕಿಟಕಿ ಹೊರಕ್ಕೆ ದಿಟ್ಟಿಸುತ್ತ ಜಾನಿ, "ಅಗೋ, ಇನ್ನೊಂದು ಬಿತ್ತು... ಉಹುಂ, ನಿನ್ನ ಗಂಜೀ ನಾ ವಲ್ಲೆ... ಇನ್ನ ನಾಕುಳೀತು. ಸಂಜೀ ಕತ್ಲಾಗೋದ್ರಾಗೆ ಆ ಕೊನೀಯಲೀ ಬಿದ್ ಬಿಡೋದಿಷ್ಟು ನೋಡಿದ್ರೆ ಸಾಕಾಗ್ಯದೆ. ಎಷ್ಟೂ ಅಂತ ಕಾಯ್ಲಿ, ಅಷ್ಟಾಯಿತಂದ್ರೆ ನಾನೂ ಕಣ್ಮುಚ್‌ಕೋತೀನಿ." ಇಷ್ಟು ಹೊತ್ತು ಮಾತನಾಡಿದ ಆಯಾಸದಿಂದ ಮುಲುಗುಟ್ಟ ತೊಡಗಿದಳು.

"ಜಾನೀ, ಏ ಜಾನೀ, ಹಾಂಗನಬ್ಯಾಡೇ ನಮ್ಮವ್ವಾ!" ಅವಳ ಮುಖಕ್ಕೆ ಮುಖವಿಟ್ಟು ಸೂಜಿ ಗೋಗರೆದಳು.



"ನಾ ಬರ್ದು ಮುಗಸೋತನಕ ನೀ ಆ ಕಡೀ ನೋಡದೆ ಮಾತಾಡದೆ ಕಣ್ಮುಚ್ಚಿ ಮಲಗಿರ್ತೀನಂತ ಮಾತು ಕೊಡ್ತೀಯಾ ? ಕೊಡ್ತೀನಂತ್ಹೇಳವ್ವಾ. ನಾಳೆ ಪಳಗೇ ಸಂಪಾಕದಂಗೆ ಕಳಿಸಿಬಿಡಬೇಕು ಇದನ್ನ. ಕಿಟಕಿಬಾ ಮುಚ್ಚಿಬಿಡ್ತಿದ್ದೆ. ಇದ್ದೆ, ಬರೀಲಿಕ್ಕೆ ನಂಗೆ ಬೆಳಕು ಬೇಕಲ್ವಾ." "ಆಚೆಕಡಿ ಹೋಗಿ ಒಳಗೆ ಕೂತು ಬರೀ ಬಾರ್ದೇನು," ಜಾನಿ ಸಿಟ್ಟಿನಿಂದಲೇ ಕೇಳಿದಳು. "ನಾ ಇಲ್ಲೇ ನಿನ್ ಹತ್ಲೇನೆ ಇರಬೇಕಾಗ್ಯದೆ. ಆ ಕೆಲಸಕ್ಕೆ ಬಾರದ ಬಡಕಲು ಬಳ್ಳೀ, ಯಲಿಗಳ ಕಡೀಗೆ ನೀ ನೋಡೋದು ನಂಗೆ ಬ್ಯಾಡಾಗ್ಯದೆ, ತಿಳಿತೇನು ?" ಸೂಜಿ ಗದರಿಸಿದಳು.

"ಹ್ಞೂ" ಜಾನಿ ಮುಲುಗುಟ್ಟುತ್ತಾ, "ನೀ ಬರದಾದ ತಕ್ಷಣ ನಂಗಿಷ್ಟು ಹೇಳು. ಆ ಕೊನೀಯಲೀ ಬಿದ್ದು ಬಿಡೋದು ಒಂದಿಷ್ಟು ನೋಡಬೇಕು ನಾನು. ಕಾದು ಕಾದು ನಂಗೆ ಸಾಕಾಗಿಹೋಗ್ಯದೆ. ಎಷ್ಟ್ ಹೊತ್ಗೆ ಬೀಳತ್ತೋ ಅಂತ ಯೋಚಿಸಿ ಯೋಚಿಸಿ ತಲೀ ಸುಸ್ತಿಕ್ ಹತ್ಯದೆ. ಈ ಜಾಗ, ಈ ಚಿತ್ರ-ಪತ್ರ, ನನ್ನ ಆಸೀ-ಆಕಾಂಕ್ಷಿಗಳು, ಬಂಧು-ಬಳಗ, ನೀನೂ ಕೂಡ; ಎಲ್ಲ ಸಂಬಂಧ ಹರಕೊಂಡು ಆ ಯಲೀಗಳ ಹಾಂಗ ಫಾಳಿ ಸಂಗಾತ ಹಾರ್ತಾ ಹಾರ್ತಾ ಹೊರಟುಬಿಡ್ತೀನಿ. ಅದು ಆ ಕೊನೀದು ಒಂದಿಷ್ಟು ಬಿತ್ತಂದ್ರೆ. ಪಾಪ! ಆ ಯಲಿಗಳಿಗೂ ಎಷ್ಟು ಸಾಕಾಗಿಹೋಗ್ಯದೋ ?"

ಸೂಜಿ ಅವಳಿಗೆ, "ನಿದ್ದೀ ಮಾಡ್ಲಿಕ್ಕಿಷ್ಟು ಯತ್ನಾ ಮಾಡು, ಜಾನೀ. ನಾ ಕೆಳಗೆ ಇಳದು ಹೋಗಿ ಆ ಬೈರಾಮನ್ನಾ ಕರದು ನನ್ನ ಚಿತ್ರಕ್ಕೆ ಒಂದಿಷ್ಟು ಮೊಡಲ್ ಆಗಿ ಕೂಡಂತ ಹೇಳ್ತೀನಿ. ಒಂದೇ ನಿಮಿಷದಾಗೆ ಬಂದು ಬಿಡ್ತೀನಿ. ನಾ ಬರೋತನಕ ಆ ಕಡಿ – ಈ ಕಡಿ ಅಲ್ಲಾಡಬಾರ್ದು; ಏನು ?"

* * *

ಆ ಬೈರಾಮ ಒಬ್ಬ ಕೀಳು ದರ್ಜೆಯ ಚಿತ್ರಕಾರ. ವಯಸ್ಸು ಅರವತ್ತೆಪ್ಪತ್ತು ಇದ್ದೀತು. ಮೈಸೂರು ಕಡೆಯವ. ಪೌರಾಣಿಕ ಚಿತ್ರಗಳಲ್ಲಿನ ಋಷಿಗಳಂತೆ ಜಟೆ ಗಡ್ಡ ಬಿಟ್ಟಿದ್ದ. ಕುರೂಪಿ, ಹೆಸರಿಗೆ ಮಾತ್ರ ಚಿತ್ರಕಾರ, ಅಷ್ಟಿಷ್ಟು ಅಭ್ಯಾಸ ಮಾಡಿದಂತಿತ್ತು. ಕಳೆದ ತನ್ನ ಆಯುಸ್ಸಿನಲ್ಲಿ ಒಂದಾದರೂ ಉತ್ತಮ ಚಿತ್ರ ಬಿಡಿಸಲು ಯತ್ನಿಸಿಯೇ ಇರಲಿಲ್ಲ. ಆದರೂ, ತನ್ನ ಅತ್ಯಮೋಘ ಕಲಾಕೃತಿ, (ಅವನದೇ ಉಚ್ಚಾರಣೆಯಲ್ಲಿ ಅವನ 'ಮಾಷ್ಟರ್‌ಪೀಸ್') ಇನ್ನೇನು ಮುಗಿಸಿಯೇ ಬಿಡುವವ ಎಂದು ಜಂಬ ಕೊಚ್ಚುವುದೇ ವಿನಾ ಕುಂಚ ಹಿಡಿದು 'ಓನಾಮ' ಸಹ ಮಾಡಿರಲಿಲ್ಲ. ಮುದಿ ಬೈರಾಮನ ಚಿತ್ರಗಾರಿಕೆಗೆ 'ಇತಿಶ್ರೀ'ಯೇ ಆಗುವಂತಿತ್ತು. ಅನೇಕ ವರ್ಷಗಳಿಂದ ಅಂಗಡಿ-ಮುಂಗಟ್ಟುಗಳ ಬೋರ್ಡ್‌ಗಳು, ಸಿನಿಮಾ ಪೋಸ್ಟರ್‌ಗಳು ಬರೆದು ಪುಡಿಕಾಸು ಗಳಿಸಿ ಬದುಕು ಸಾಗಿಸಿದ್ದ. ಜೊತೆಗೆ ಈ ಚಿತ್ರಗಾರರಿಗೆ ಚಿತ್ರಣಕ್ಕೆ ಮಾಡೆಲ್ ಕೂಡುವುದು ಸ್ವಲ್ಪ ಆದಾಯದ್ದಾಗಿತ್ತು. ಸಂಜೆಯಾಯಿತೆಂದರೆ ಅಮಲೇರುವಷ್ಟು ಸಾರಾಯಿ ಹೊಟ್ಟೆಗೆ ತುಂಬಿಸಿ ತನ್ನ ಮಷೂರ್ ಕಲಾಕೃತಿ ಪೂರ್ಣವಾಗಿಯೇ ಹೋಯಿತೆಂದು ಒರಲುತ್ತ ಒರಗುತ್ತಿದ್ದ. ಬೀಡಿ ಸೇದುವ ಚಟ ಸಹ ಜೊತೆಗೆ. ಅವನನ್ನು ಕಂಡರೆ ಹೋಟೆಲ್‌ನವರಿಗೆಲ್ಲ ಅಂಜಿಕೆ. ಮಹಾಕೋಪಿಷ್ಠ. ಯಾರು ಸ್ವಲ್ಪ 'ಅಯ್ಯೋ ಪಾಪಾ!' ಅಂದರೂ ಸಿಡಿಮಿಡಿಗೊಳ್ಳುವವನು, ಮೈಮೇಲೆ ಏರಿ ಹೋಗುವನು. ಆದರೆ, ಸೂಜಿ- ಜಾನಿಯರನ್ನು ಬಹಳವಾಗಿ ಹಚ್ಚಿಕೊಂಡಿದ್ದ. ಆ ಎರಡು ಹುಡುಗಿಯರ ರಕ್ಷಣೆ [illegible]

ನಾಯಿ'ಯಂತೆ ಎಚ್ಚರವಿರುತ್ತಿದ್ದ.

ಮೆಟ್ಟಲುಗಳನ್ನು ಇಳಿದವಳೇ ಸೂಜಿ ಅವುಗಳ ಕೆಳಗೆ ಬೈರಾಮ ರಚಿಸಿಕೊಂಡಿದ್ದ ಅವನ 'ಕೋಣೆ' ಹೊಕ್ಕಳು. ಅವನು ಬೀಡಿ ದಂ ಎಳೆಯುವುದರಲ್ಲಿ ತಲ್ಲೀನನಾಗಿದ್ದ. ಅವನ ಎದುರಿನಲ್ಲಿ ಸ್ವಲ್ಪ ದೂರದಲ್ಲಿ ಯಾವುದೇ ಬಣ್ಣದ ಪ್ರಪ್ರಥಮ ಸ್ಪರ್ಶ ಸಹ ಆಗದಿದ್ದ ಶುಭ್ರ ಕ್ಯಾನ್ವಾಸ್ ಪಸರಿಸಿದ ಹಲಗೆ ನಿಂತಿತ್ತು, ಅವನ ಮಷೂರ್ ಕಲಾಕೃತಿಯ ಮೊದಲ ಗೆರೆ ತನ್ನ ಮೇಲೆ ಯಾವ ಶುಭಕ್ಷಣದಲ್ಲಿ ಮೂಡುವುದೋ ಎಂದು ಕಾದುಕೊಂಡು. ಏನಿಲ್ಲೆಂದರೂ ಕಾಲು ಶತಮಾನದಿಂದಲೂ ಹಾಗೆ ಕಾದೇ ನಿಂತಿತ್ತದು.

ಸೂಜಿ ಒಳಕ್ಕೆ ಹೋದವಳೇ ಅವನಿಗೆ ಜಾನಿಯ ಸ್ಥಿತಿಯನ್ನು ವಿವರಿಸಿದಳು. ಅಲ್ಲದೆ ಮೊದಲಿನಿಂದ ಅನೀಮೀಯಾ ಕಾರಣ ರಕ್ತಹೀನಳಾಗಿ ನಿಶ್ಯಕ್ತಿಯ ಜೊತೆಗೆ, ಈ ಜ್ವರದ ತಾಪದ ಭರದಿಂದ ಕಂಗೆಟ್ಟ ಜಾನಿ, ಎಲೆಗಳು ಉದುರುವ ಕಾಲದಲ್ಲಿ ಅವು ಇದ್ದಹಾಗೆಯೇ ಅತಿ ಸೂಕ್ಷ್ಮವಾಗಿ ಹೋಗಿದ್ದಳು. "ಬೈರಾಮಣ್ಣ, ಆ ಬಳ್ಳಿ ಬೀಳಿಸ್ತಿರೋ ಯಲಿಗಳನ್ನ ಹುಚ್ಚುಚ್ಚಾಗಿ ಎಣಿಸ್ತಾ 'ತಾನೂ ಹಾಗೇ ನಾಳೆ - ನಾಡಿದ್ದರಲ್ಲಿ ಕಳಚಿಕೊಂಡು ಹಾರಿಹೋಗ್ತೀನಿ' ಅಂತ ಬಡಬಡಸ್ತಾಳೆ, ನೋಡೋ, ನಂಗೆ...ನಂಗಂತು ಏನೂ ತೋಚದೆ ಭಾಳಾ ಅಂಜಿಕಿಯಾಗ್ತಾ ಅದೆ," ಎಂದು ತನ್ನ ಆತಂಕ ಭಯವನ್ನು ಸೂಜಿ ಅವನ ಮುಂದೆ ತೋಡಿ ಕೊಂಡಳು. ಕೇಳಿದ ಬೈರಾಮನ ಕಣ್ಣುಗಳು ತುಂಬಿಕೊಂಡವು. ಜೊತೆಗೆ, ಇಂಥ ಅಸಂಬದ್ಧ ಪ್ರಲಾಪ, ಹುಚ್ಚು ಕಲ್ಪನೆ ಕಂಡರೆ ತನಗೆ ಎಷ್ಟೂ ಆಗದೆಂತೆಂಬಂತೆ ಒದರಿದ. ಅವನ ಭಾಷೆ, ಮೈಸೂರು ಕಡೆಯ ಸಾಬರು ಮಾತನಾಡುವಂತೆ, ಉರ್ದುಮಿಶ್ರಿತ ಕನ್ನಡದಲ್ಲಿ:

"ಕ್ಯಾ ? ಕೋನ್ ಕೀ ಸುಡುಗಾಡೀ ಬಳ್ಳೀಯಲಿಗೋಳು ಕೆಳ್ಗೆ ಬೀಳ್ತಾವೇ ಅಂತ ತಮ್ದಿ ಪಿರಾಣ ಕಳ್ಕಾಬೇಕಂಬೋ ಪಾಗಲ್ ಮಂದೀನೂ ಐದಾರಾ ದುನಿಯಾ ಮೇ ? ಇಂಥಾ ಶಮಾಚಾರಾ ನಮ್ದು ಕಬ್ಬೀ ಸುನ್ಯಾಚ್ ನೈ. ನಿಂಗೆ ಅಕ್ಕಲ್ ಕ್ಯಾ ಥೀ, ರೀ ? ಅವಳ್ ತಲೀ ಒಳಗೆ ಈ ಹರಾಮ್‌ಕೇ ಯೋಷ್ಣೆ ನುಗ್ಗೋಕೆ ನೀನ್ಯಾಕೆ ಬಿಟ್ಟೆ? ಯಾ ಬೇಚಾರೀ ಬಿಟಿಯ್ನು, ಮೇರಿ ಜಾನೀ ಮಾ! ಜಾ ಜಾ ನಿನ್ ಹರಕ್‌ದಾಡಿ ಹಳ್ಳಿಗೊಲ್ಲಾನ್ ಚಿತ್ರಕ್ಕೆ ಮಾದ್ರಿ ಕೂಡಾಕೆ ನಾ ಬರಲ್ಲ, ಹೋಗ್."

"ಹೌದಾ ? ನೀ ಬರಲ್ಲೇನು ? ಇಕಾ, ಏ, ಬೈರಾಮಾ, ನೀ ಎಂಥಾಂವ ಅಂಬೋದು ನಂಗೊತ್ತೇಳು... ಲುಚ್ಚಾ ಮುದುಕಾ ಇದ್ದೀ ನೀನು, ಲುಚ್ಚಾ ಮುದುಕಾ !" ಸೂಜಿ ಅಳಲು ಮೊದಲಿಟ್ಟಳು.

"ಅರೇ, ಅರೇ, ದೇಖ್ಯಾ ? ಜೈಸಿ ಔರತ್, ಒತ್ತಾಚ್, ಜೈಸೀ ಔರತ್ ! ನಮ್ದು ಕೂಡಾಕಿಲ್ಲ ಅಂದೀ ಎಲ್ಲಿ ಹೇಳ್ದಾ? ನಡೀ, ನಿಮ್ ಕೂಡಾನೇ ಬರ್ತಾನೆ. ನಿನ್ ತಸ್‌ಬೀರ್‌ಗೆ ಮಾದ್ರಿ ಕೂಡ್ತಾನೇಂತ ಆಧಾ ಗಂಟೇನಿಂದ ನಮ್ದು ಹೇಳ್ತಾನೇ ಅದಾನೆ, ಅಲ್ಲಾ? ಯಾ, ಅಲ್ಲಾಹ್; ಕೈಕು ಪೈದಾಯಾ, ಶೇ ಇನ್ ಔರತೋಂಕೋ ?... ಬೇಚಾರಿ ಜಾನೀ ಮಾಕೇ ಅಚ್ಛೇ ಲಡ್ಕೀ ಬುಖಾರ್ ಬಂದೀ ಮಲ್ಗಾಕೇ ಅಚ್ಚಾನಿಲ್ಲ ಈ ಹರಾಮ್‌ಕೇ ಜಾಗೇ ! ಕಲ್ ಈಚ್ ಬರಾದ್ ಮುಗೀಸ್ತಾನೆ ನಮ್ದು ಮಷೂರ್ ತಸ್‌ಬೀರ್, ನಮ್ದು ಮಾಷರ್‌ಪೀಸ್. ಆಮ್ಯಾಕೆ ನಮ್‌ಗೆ ಎಲ್ಲಾನೂ ಇಲ್ಲಿಂದೆ ನಿಕಲ್ ಜಾವ್. ಅಲ್ಲಾಹುದು ನಾಮ್ ಹಿಡ್ದಿ ಪ್ರತಿಗ್ಣೆ ಮಾಡ್ತಾನೆ ಈ ಬೈರಾಮ!"

ಇಬ್ಬರೂ ಮಹಡಿ ಏರಿ ಕೋಣೆ ಹೊಕ್ಕಾಗ ಜಾನಿ ನಿದ್ರೆ ಮಾಡುತ್ತಿದ್ದಳು. ಕಿಟಕಿ ಪರದೆಯನ್ನು ಪೂರ್ತಿ ಮುಚ್ಚಿ ಸೂಜಿ ಬೈರಾಮನನ್ನು ಪಕ್ಕದ ಕೋಣೆಗೆ ಬರುವಂತೆ ಸನ್ನೆ ಮಾಡಿದಳು. ಅಲ್ಲಿಯ ಕಿಟಕಿಯಿಂದ ಇಬ್ಬರು ಅಡುಗೆಮನೆಯ ಗೋಡೆಯ ಕಡೆಗೆ ನೋಡಿದರು. ಬೈರಾಮ ಇಷ್ಟಕ್ಕೆಲ್ಲ ಕಾರಣವಾಗಿದ್ದ ಆ ಒಣಕಲು ಬಳ್ಳಿಯನ್ನು ಸುಟ್ಟುಬಿಡುವಂತೆ ದೃಷ್ಟಿಸಿದ. ಆಮೇಲೆ ಇಬ್ಬರೂ ಮಾತಿಲ್ಲದೆ ಪರಸ್ಪರ ಮುಖ ನೋಡುತ್ತಾ ನಿಂತಿದ್ದರು ಸ್ವಲ್ಪ ಸಮಯ. ಹೊರಗಡೆ ಅಸಾಧ್ಯ ಥಂಡಿ ಬಿದ್ದಿತ್ತು, ಜಿನಿಜಿನಿ ಮಳೆ ಬೀಳುತ್ತಿತ್ತು. ಕೋಣೆಯ ಒಂದು ಮೂಲೆಯಲ್ಲಿದ್ದ ಜಾಡಿಯನ್ನೇ ಬೋರಲು ಹಾಕಿಕೊಂಡು ಅದರ ಮೇಲೆ ಸೂಜಿ ತಿಳಿಸಿದ ಭಂಗಿಯಲ್ಲಿ ಕುಳಿತ. ಮೈ ಮೇಲಿನ ಚಿಂದಿ ಅಂಗಿಯನ್ನೇ ಹೀಗೆ ಹಾಗೆ ಸರಿಮಾಡಿಕೊಳ್ಳುತ್ತ, ಗಡ್ಡವನ್ನು ನೇವರಿಸಿ ಕೊಳ್ಳುತ್ತ ತಯಾರಾದ.

* * *

ಸೂಜಿ, ರಾತ್ರಿ ಒಂದು ಗಂಟೆ ಸಹ ಸರಿಯಾಗಿ ನಿದ್ರೆ ಬಾರದೆ, ಮರುದಿನ ಬೆಳಿಗ್ಗೆ ಏಳುತ್ತಿದ್ದವಳೇ ನೆಟ್ಟ ನೋಟದಿಂದ ಕಿಟಕಿಯನ್ನು ಮರೆಮಾಡಿದ್ದ ಹಸಿರು ಪರದೆಯ ಕಡೆಗೆ ಜಾನಿ ನೋಡುತ್ತಿದ್ದುದನ್ನು ಕಂಡಳು. ಸೂಜಿ ಎದ್ದುದನ್ನು ತಿಳಿದು ಜಾನಿ ಅಸ್ಪಷ್ಟ ದನಿಯಲ್ಲಿ ಕರೆದು ಆಜ್ಞೆ ಮಾಡಿದಳು, "ಆ ಪರದೀ ಇಷ್ಟ್ ಎಳದು ಬಿಡೇ, ಸೂಜೀ ! ನಾ ಹೊರಗೆ




ನೋಡಬೇಕು." ಬೇಜಾರಿನಿಂದಲೇ ಕಿಟಕಿ ಬಳಿಗೆ ಹೋಗಿ ಸೂಜಿ ಪರದೆ ಎಳೆದಳು. ಇಬ್ಬರೂ ಎದುರು ಗೋಡೆ ಕಡೆಗೆ ದಿಟ್ಟಿಸಿದರು.

ಏನಾಶ್ಚರ್ಯ ! ರಾತ್ರಿ ಎಲ್ಲ ಬಿರುಮಳೆ ಗಾಳಿ ಹಚ್ಚಿ ಹೊಡೆದಿದ್ದಿತಾದರೂ ಎದುರಿನ ಮುರುಕು ಗೋಡೆಗೆ ಇನ್ನೂ ತಾಗಿಕೊಂಡಿತ್ತು ಆ ಒಣಕಲು ಬಳ್ಳಿ , ಆ ಬಳ್ಳಿಯ ತುದಿಯಲ್ಲಿ ಅದಕ್ಕಟ್ಟಿಕೊಂಡು ಒಂದೇ ಒಂದು ಎಲೆ ಇತ್ತು ಇನ್ನೂ. ಬಳ್ಳಿಗೆ ಸೇರಿಕೊಂಡಿದ್ದ ಕಡೆ ಇನ್ನೂ ಅಚ್ಚ ಹಸುರಿತ್ತು, ಆದರೆ ಎಲೆಯ ಅಂಚುಗಳಲ್ಲಿ ತುಸು ಹಳದಿ ಮೂಡಿತ್ತು. ಈಗಲೋ - ಆಗಲೋ ಬಳ್ಳಿಯಿಂದ ಬಿಡಿಸಿಕೊಂಡು ಬೀಳುವುದರಲ್ಲಿದ್ದರೂ ಆ ಒಂಟಿ ಎಲೆ, ನೆಲದಿಂದ ಸುಮಾರು ಇಪ್ಪತ್ತು ಅಡಿಗಳಷ್ಟು ಮೇಲೆ ಬಳ್ಳಿಗೆ ಅಂಟಿಕೊಂಡು ತನ್ನ ಅಂತ್ಯವನ್ನು ಧೈರ್ಯದಿಂದ ಎದುರಿಸಿ ಹೊಯ್ದಾಡುತ್ತಿರುವಂತಿತ್ತು.

ಜಾನಿ ದೀರ್ಘವಾಗಿ ಮೆಲ್ಲುಸಿರು ಬಿಟ್ಟು ಅಂದಳು, "ಅದೇ ಕೊನೀಯಲೀ, ರಾತ್ರೀನೇ ಯಾವಾಗಲೋ ಬಿದ್‌ಹೋಗಿರತ್ತೆ ಅಂತ ಅಂದ್ಕೊಂಡಿದ್ದೇ ಸೂಜೀ. ಫಾಳಿ ಬಿರುಸಿನಿಂದ ಬೀಸ್ತಾ ಇದ್ದದ್ದು ಕೇಳಿಸ್ತಿತ್ತು. ಆಶ್ಚರ್ಯ ! ಇನ್ನಾ ಬೀಳ್ದೆ ಹಾಗೆ ಇದೆ. ಮುಂಡೇದಕ್ಕೆ ಇನ್ನೂ ಉದರದೇ ಅಂಟಿಕೊಂಡೇ ಇರಬೇಕಂತ ಆಸೀನೋ ಏನೋ ?... ಇವತ್ತು ಖಂಡಿತ ಬಿದ್ದೇ ಬೀಳತ್ತೇಳು... ಅದರ ಜತೀಗೇ ನಾನೂ... ಸಾಯ್ತೀನಿ... ಉಫ್ !... ಕಾದುಕಾದು ಸಾಕಾಗಿಹೋಗ್ಯದವ್ವಾ !"

ಸೂಜಿ, ತನ್ನ ಶ್ರಾಂತ ಮುಖವನ್ನು ಜಾನಿಯವರೆಗೂ ಬಗ್ಗಿಸಿ ಗದ್ಗದಿತಳಾಗಿ ಗೋಳಿಟ್ಟಳು, "ಅಯ್ಯೋ ! ಹಾಗನಬ್ಯಾಡೇ, ತಾಯೀ, ನಿನ್ ಯೋಚನೀ ನಿಂಗಿಲ್ದಿದ್ರೆ ಹೋಗ್ಲಂತೆ, ನನ್ನ ಯೋಚನೀನರಾ ತುಸು ಮಾಡೇ ನನ್ನವ್ವಾ. ನೀ ಹಿಂಗೆಲ್ಲಾ ಬಡಬಡಸ್ತಿದ್ರೆ ನಾ ಏನರ ಮಾಡ್ಲಿ, ಹೇಳು ?" ಅದಕ್ಕೆ ಜಾನಿ ಏನೊಂದೂ ಉತ್ತರ ಕೊಡಲಿಲ್ಲ.

ಅಂಜಿಕೆ ಹುಟ್ಟಿಸುವಂಥ, ಅರಿವಿಗೆಟುಕದಂಥ ಆ ದೂರಾನುದೂರದ ಅಂತ್ಯ ಪ್ರಯಾಣವನ್ನೇ ಕುರಿತು ಯೋಚಿಸುತ್ತ, ಅದಕ್ಕೆ ಸಿದ್ಧನಾಗಲೇಬೇಕಾದ ಜೀವದಷ್ಟು ಏಕಾಕಿ ವಸ್ತು ಈ ವಿಶ್ವದಲ್ಲಿ ಇನ್ನಾವುದಿದೆ ? ಈ ಸುಂದರವಾದ ಸುತ್ತಲಿನ ಪ್ರಪಂಚಕ್ಕೆ, ಸ್ನೇಹ-ಬಾಂಧವ್ಯಗಳಿಗೆ ತನ್ನನ್ನು ಕಟ್ಟಿಬಿಗಿದ ಬಂಧನಗಳು ಒಂದೊಂದಾಗಿ ಸಡಿಲಗೊಳ್ಳುತ್ತ ಇದ್ದಂತೆಯೇ ಜಾನಿಯ ಮನೋವಿಕಲ್ಪವೂ ಹೆಚ್ಚುತ್ತಿರುವಂತೆ ಭಾಸವಾಗುತ್ತಿತ್ತು.

ಹಗಲು ಕಳೆಯಿತು. ಸಂಜೆಯ ಮಬ್ಬಿನಲ್ಲಿ, ಬಳ್ಳಿಗಂಟಿಕೊಂಡೇ ಇದ್ದ ಆ ಒಂಟಿ, ಜೀರ್ಣಂಜೀರ್ಣ ಎಲೆ ಅಸ್ಪಷ್ಟವಾಗಿ ಕಾಣಿಸುತ್ತಿತ್ತು. ರಾತ್ರಿ ಹೆಚ್ಚುವುದರ ಜೊತೆಗೆ ಗಾಳಿಯೂ ಬಿರುಸಾಗತೊಡಗಿತು. ಹಗಲುದ್ದಕ್ಕೂ ಬೀಳುತ್ತಲೇ ಇದ್ದ ತುಂತುರು ಮಳೆ ಜೋರಾಗಿ ಕಿಟಕಿಗೆ ಎರಚಲು ಹೊಡೆಯತೊಡಗಿತು. ಕಿಟಕಿ ಪೂರ್ತಿ ಮುಚ್ಚಬೇಕಾಯ್ತು. ಗಾಳಿ-ಮಳೆಯ ರಭಸದ ಭೋರೆಂಬ ಶಬ್ದ ಇನ್ನೆಲ್ಲ ಸದ್ದನ್ನು ಅಡಗಿಸಿತ್ತು.

ಮಾರನೆಯ ಬೆಳಿಗ್ಗೆ ಇನ್ನೂ ಬೆಳಕು ಹರಿಯಲೋ ಬೇಡವೋ ಎಂದು ಅನುಮಾನಿಸುತ್ತ ಇರುವಾಗಲೇ ಕಿಟಕಿ ತೆರೆದು ಪರದೆ ಒತ್ತರಿಸೆಂದು ಜಾನಿಯ ಅಪ್ಪಣೆಯಾಯಿತು.

ಆ ಕೊನೆಯ ಎಲೆ ಇನ್ನೂ ಅಲ್ಲಿಯೇ ಇತ್ತು!

ಬಹಳ ಹೊತ್ತು ಆ ಒಂಟಿ ಎಲೆಯನ್ನು ದಿಟ್ಟಿಸುತ್ತ ಜಾನಿ ಮೌನವಾಗಿ ಮಲಗಿದ್ದಳು. ಆಮೇಲೆ, ಸ್ಟವ್ ಮೇಲೆ ತನಗಾಗಿ ಹಾಲು ಕಾಯಿಸುತ್ತ ಕುಳಿತಿದ್ದ ಸೂಜಿಯನ್ನು ಕುರಿತು, ''ನಾ ಭಾಳಾ ಕೆಟ್ಟಾಕಿ ಅದೆ, ಸೂಡೀ. ಹಾಗಂತ ನಂಗೆ ತೋರಿಸ್ಲಿಕ್ಕಂತನೇ ಏನೋ ಒಂದು ಆ ಆ ಯಲೀನ್ನ ಬಳ್ಳಿ ಇಂದ ಬೀಳದ್ಹಾಂಗೆ, ಅಲ್ಲೇ ಇರೋ ಹಾಂಗೆ ಮಾಡ್ಯದೆ ಅಂತ ನನಗನಿಸ್ತಾ ಅದೆ. ಆ ದಿಟ್ಟಯಲೀ ನನ್ನ ಅಣಕಿಸೋ ಹಾಂಗೆ ಕಾಣಸ್ತದೆ, 'ಏ, ಹುಡುಗೀ, ನೀ ಸಾಯಬೇಕಂತಿ. ನನ್ನ ನೋಡು, ನಾ ಬದುಕೇ ತೀರ್ತೀನಿ ಅಂತ ಹಠ ಹಿಡಿತೀನಿ. ಸಾಯ್ತೀನಿ ಸಾಯ್ತೀನಿ ಅಂಬೋದು ಪಾಪ; ಗೊತ್ತಾ?' ಅಂತ ನಂಗೇ ಹೇಳ್ತಾ ಅದೆ ಅಂತನಸ್ತಾ ಅದೆ. ನಮ್ ಶಾಸ್ತ್ರಾನೂ ಹಾಗೇ ಹೇಳತ್ತಂತೆ, ಅಲ್ಲೇನು?... ಸೂಡೀ, ಸ್ವಲ್ಪ ಹಾಲು ನೀ ತಂದ್ಕೊಟ್ರೆ... ಬ್ಯಾಡ; ಮೊದ್ಲು ಆ ಖನಡೀ ಇಷ್ಟು ತಂದ್ಕೊಡೇ. ನನ್ ರೂಪ ಏನಾಗ್ಯದೋ ಅದರಾಗೆ ನೋಡ್ತೀನಿ... ಈ ದಿಂಬುಗಳನ್ನ ಸರಿಯಾಗಿಷ್ಟು ಜೋಡಿಸಿಡೇ ಆನಿಕೊಂಡು ಕೂಡ್ತೀನಿ. ಹಾಲು ಕುಡ್ದು ನೀ ನಾಷ್ಟಾ ತಯಾರ್ ಮಾಡೋದನ್ನ ನೋಡ್ತೀನಂತೆ.''

ಸೂಜಿ, ತಿನಸು-ಕಾಫಿ. ಅವಳಿಗೆ ತಂದುಕೊಟ್ಟು ತಾನೂ ಸಹ ಜೊತೆಗೆ ಕುಳಿತು ತಿನ್ನುತ್ತಾ ಅದು-ಇದು ಮಾತನಾಡಿದರು. ಏನೋ ಜ್ಞಾಪಿಸಿಕೊಂಡವಳಂತೆ ಜಾನಿ, ''ಸೂಡೀ, ನಾ ನಿಂಗೆ ಹೇಳ್ತಿರಲಿಲ್ಲಾ, ಸೂರ್ಯ ಮುಳುಗೋ ಹೊತ್ತಿನಾಗೆ ಕಾಂಬೋ ಘಟ್ಟಗಳ ದೃಶ್ಯ ಎಂದಾದರೂ ಒಂದು ದಿನ ಚಿತ್ರಿಸಿಯೇ ತೀರತೀನಿ ಅಂತ? ಇನ್ನೊಲ್ಪ ಶಕ್ತಿ ಬಂದ ಮ್ಯಾಲೆ ಖಂಡಿತ ಪ್ರಾರಂಭ ಮಾಡ್ತೀನೇ. ಏನಂತಿ?''

ಮಧ್ಯಾಹ್ನ ವೈದ್ಯ ನೋಡಲು ಬಂದ. ರೋಗಿ ಸ್ವಲ್ಪ ಗೆಲುವಾಗಿ ಇರುವುದು ಅವನಿಗೆ ಸಮಾಧಾನಕೊಟ್ಟಿತು. ಪರೀಕ್ಷಿಸಿ, ಟಾನಿಕ್ ಬರೆದುಕೊಟ್ಟು ಹೊರಡುವಾಗ ಸೂಜಿ ಅವನನ್ನು ಹಿಂಬಾಲಿಸಿ ಹೊರಗೆ ಹೋದಳು. ವೈದ್ಯ ಸೂಜಿಯ ಬೆನ್ನು ತಟ್ಟುತ್ತಾ, ''ಇನ್ನ ಯಾವ ಭಯಾನೂ ಇಲ್ಲಮ್ಮಾ. ಈ ಟಾನಿಕ್ ತಂದುಕೊಡು. ಇನ್ನೊಂದು ವಾರ ಛಂದಾಗಿ ನೋಡಿಕೋ. ಬಸ್! ಸರಿಹೋಗ್ತಾಳೆ ನಿನ್ನ ಗೆಳತಿ... ಅಂದ್ಹಾಗೆ, ಈ ಮಾಡಿ ಕೆಳಗೆ ಇನ್ನೊಂದು ಇದೇ ಕೇಸು. ಹೋಗಿ ನೋಡಬೇಕು. ಜ್ವರದ ಹೊಡತ ಜೋರದಂತೆ, ಸಾಕಷ್ಟು ಅನುಕೂಲ ಇಲ್ಲಿ ಇಲ್ಲಾಂತಂದ್ರೆ ಆಸ್ಪತ್ರೀಗೆ ಅಡ್ಮಿಟ್ ಮಾಡಸ್ತೀನಿ. ಅಲ್ಲಿ ಆರೈಕೆಗೆ ಸುಲಭ.''

ಮಾರನೆಯ ದಿನ ಮಧ್ಯಾಹ್ನ ಜಾನಿಯನ್ನು ನೋಡಿಹೋಗಲು ಬಂದಿದ್ದ ವೈದ್ಯ ಸೂಜಿಗೆ, ''ಸುಜಾತಾ, ಜೋತ್ಸ್ನಾ ಈಗ ಹ್ಯಾಗೆ ಚೇತರಿಸಿಕೊಂಡಿದ್ದಾಳೆ, ನೋಡು. ನೀನು ಆರೈಕೆ ಮಾಡಿ ಗೆದ್ದಿದ್ದೇಯಮ್ಮಾ, ಭೇಷ್... ನಿನ್ನೆ ಆಸ್ಪತ್ರೆಗೆ ಅಡ್ಮಿಟ್ ಮಾಡಿಸಿದೆನಲ್ಲಾ, ಇಲ್ಲಿಯದೇ ಇನ್ನೊಂದು ಇಂಥಾ ಕೇಸ್ ಅದು ಬೈರಾಮ ಅಂಬೋ ಮುದುಕಂದು. ಅವನೂ ಒಬ್ಬ ಚಿಲ್ರೆ ಆರ್ಟಿಸ್ಟ್ ಅಂತೆ. ಜ್ವರ ಜಾಸ್ತೀನೆ ಅದೆ. ಭಾಳಾ ಚಡಪಡಿಸ್ತಿದ್ದಾನೆ. ಏನಾಗತ್ತೋ ಅಂತ ನಂಗೆ ಚಿಂತಿಯಾಗ್ಯದೆ.''

ಬೈರಾಮನ್ನ ಆಸ್ಪತ್ರೆಗೆ ಸೇರಿಸಿರುವುದು ತಿಳಿದು ಗೆಳತಿಯರಿಬ್ಬರಿಗೂ ಬಹಳ ದುಃಖವಾಯಿತು. ಅಂದೇ ಸಂಜೆ ಸುಜನಾ ಅವನನ್ನು ನೊಡಿ ಬರಲು ಆಸ್ಪತ್ರೆಗೆ ಹೋದಳು. ಬೈರಾಮ ಮೈ ಮೇಲೆ ಪ್ರಜ್ಞೆ ಇಲ್ಲದೆ ಮಲಗಿದ್ದು ನೋಡಿ ಆತಂಕವಾಯಿತು. ಮೂರು ದಿವಸಗಳ ಹಿಂದೆ ತನ್ನ ಚಿತ್ರಕ್ಕೆ ಮಾದರಿ ಕುಳಿತಾಗ ಆರೋಗ್ಯವಾಗಿಯೇ ಇದ್ದವನು ಜ್ವರ ಅಂಟಿಸಿಕೊಂಡು ಈ ಸ್ಥಿತಿಯಲ್ಲಿ ಆಸ್ಪತ್ರೆಯಲ್ಲಿ ಮಲಗಿರಲು ಕಾರಣವೇನೆಂಬುದು ತಿಳಿಯದಾಯಿತು. ಹೋಟೆಲಿಗೆ ಹಿಂದಿರುಗಿದ ಮೇಲೆ ವಿಚಾರಿಸಬೇಕೆಂದುಕೊಂಡಳು.

ಮಾರನೆಯ ದಿನ ಬೆಳಿಗ್ಗೆ ಹೋಟೆಲಿನ ಕಸಮುಸುರೆಯ ಹೆಣ್ಣು ಮಗಳು ಅಳುತ್ತಾ ಬಂದು ಬೈರಾಮ ಹಿಂದಿನ ರಾತ್ರಿ ಮೃತನಾದನೆಂಬ ಸುದ್ದಿ ತಿಳಿಸಿದಾಗ ಗೆಳತಿಯರಿಬ್ಬರೂ ಅತ್ಯಂತ ದುಃಖಿತರಾದರು. ಇಬ್ಬರಿಗೂ ತಮ್ಮ ಆತ್ಮೀಯ ಬಂಧುವನ್ನು ಕಳೆದುಕೊಂಡಂತಾಗಿತ್ತು. ಕೆಲಸದವಳನ್ನು ವಿಚಾರಿಸಿದಾಗ ಅವಳು ಹೇಳಿದುದು ಇಷ್ಟು: ''ಆಸ್ಪತ್ರೆಗೆ ಸೇರಿಸುವ ಹಿಂದಿನ ದಿನ ಜ್ವರದ ತಾಪದಿಂದ ನಡುಕ ಹುಟ್ಟಿ ಮುಲಗುಟ್ಟುತ್ತ, ಯಾರೊಬ್ಬರೂ ಹತ್ತಿರವಿರದೆ ಒಬ್ಬನೇ ಮುದುರಿಕೊಂಡು ಬಿದ್ದುಕೊಂಡಿದ್ದ ಅವನನ್ನು ಕಂಡಳಂತೆ. ಅವನ ಅಂಗಿ, ಚಡ್ಡಿ, ಟವಲೆಲ್ಲ ಒದ್ದೆ ಮುದ್ದೆಯಾಗಿತ್ತಂತೆ. ಅಂಥ ಭಯಂಕರ ರಾತ್ರಿಯಲ್ಲಿ ಅವನು ಎಲ್ಲಿಗಾದರೂ ಹೋಗಿದ್ದಿರಬಹುದು ಎಂದು ಅವನ ಸುತ್ತಲೂ ನೋಡಿದಾಗ ಇನ್ನೂ ಸಣ್ಣಗೆ ಉರಿಯುತ್ತಿದ್ದ ಲಾಂದ್ರ, ಒಂದು ಏಣಿ, ಹಸಿರು, ಹಳದಿ ಬಣ್ಣಗಳು ಕಲೆಸಿದ ಒಂದು ತಟ್ಟೆ ಹಾಗೂ ಒಂದೆರಡು ಬಣ್ಣಗಳಿಂದ ಒದ್ದೆಯಾಗಿದ್ದ ಕುಂಚಗಳೂ ಚೆಲ್ಲಾಪಿಲ್ಲಿಯಾಗಿ ಹರಡಿದ್ದವಂತೆ.''

ಕೇಳಿದ ಕೂಡಲೇ ಸೂಜಿ, ''ಜಾನೀ, ಬೈರಾಮಂಗೆ ಜಬ್ಬಾಗಿ ಅವನು ಹೋಗಿಬಿಟ್ಟದ್ದಕ್ಕೆ ಕಾರಣ ನಂಗೆ ಈಗ ಹೊಳೀತಾ ಅದೆ. ಆ ಕಿಡಕೀ ಹೊರಗೆ ಇಷ್ಟು ನೋಡು. ಆ ಬಳ್ಳಿ ಮ್ಯಾಲೆ ಆ ಒಂಟಿಯಲೀ ಇವತ್ತೂ ಕಾಣಸ್ತಾನೇ ಅದಲ್ಲೇನೇ. ನಿನ್ನೆ-ಮನ್ನೆ ನೀನು, ಯಂಥಾ ಬಿರುಗಾಳಿ ರಾತ್ರಿಯೆಲ್ಲಾ ಬೀಸ್‌ತಿದ್ದರೂ ಆ ಯಲೀ ಬಿದ್ದೇ ಇಲ್ಲಾ, ಒಂದು ತಟಗನ್ನ ಅಲ್ಲಾಡ್ದೆ ಹ್ಯಾಂಗದೆ ನೋಡು, ಅಂತ ಆಶ್ಚರ್ಯ ಪಟ್ಟಲ್ಲೇನು? ಜಾನೀ, ನಿನ್ನ ಜೀವ ಉಳಿಸಿ, ಕಾಪಾಡಿದ್ದೇ ಆ ಕೊನೀಯಲಿ. ಅಹಾ! ಅದು... ಅದು... ನಮ್ ಬೈರಾಮನ ಅತ್ಯಮೋಘ, ಅಮೂಲ್ಯ ಕಲಾಕೃತಿ! ಅವನ ಮಾಸ್ಟರ್‌ಪೀಸ್, ಅವ್ವಾ! ಆ ಕೊನೀಯಲೀ ಉದುರಿಬಿದ್ದ ರಾತ್ರಿ ನಮ್ ಬೈರಾಮಣ್ಣ ಅದೇ ಜಾಗದಾಗೆ ತದ್ರೂಪದ ಆ ಚಿತ್ರ ಬಿಡಿಸ್ತಾನ, ನೋಡು.'' ಆ ಗೆಳತಿಯರು ಪರಸ್ಪರ ತಬ್ಬಿಕೊಂಡು ಅಳುತ್ತ ಕುಳಿತರು.

(ಓ ಹೆನ್ರಿಯ ಒಂದು ಕತೆಯನ್ನನುಸರಿಸಿ)

ಬ. ನಾ. ರಘುರಾಮ
ಹೌಸಿಂಗ್ ಬೋರ್ಡ್ ಕಾಲೋನಿ, ಗಾಂಧೀನಗರ, ಸಾಗರ - ೫೭೭೪೦೧

# ಸಾಲಾಯಣ




ತೃಣಾದಪಿ ಲಘುಸ್ತೂಲಾದಪಿ ಚ ಯಾಚಕಃ ।
ವಾಯುನಾ ಕಿಂ ನ ನೀತೋಽಸೌ
ಮಾಮಯಂ ಪ್ರಾರ್ಥಯೇದಿತಿ ॥

ಹುಲ್ಲಿಗಿಂತಲೂ ಹತ್ತಿ ಹಗುರ. ಹತ್ತಿಗಿಂತಲೂ ಬೇಡುವವನು ಹಗುರ. ಗಾಳಿ ಆತನನ್ನು ಏಕೆ ಕೊಂಡೊಯ್ಯುವುದಿಲ್ಲ ಗೊತ್ತೆ? ಆತನು ತನ್ನನ್ನೂ ಬೇಡಿಯಾನೆಂಬ ಆತಂಕ ಅದಕ್ಕೆ! ದಾರ್ಶನಿಕನೊಬ್ಬ ಸಾಲಗಾರನ ಸ್ಥಿತಿಯೂ ಒಂದೇ, ಸಾಯುವವನ ಸ್ಥಿತಿಯೂ ಒಂದೇ ಎನ್ನುತ್ತಾನೆ. "ಸಾಲ ಕೇಳದೆ ಹೋಯ್ತು, ಹೊಲ ನೋಡದೆ ಹೋಯ್ತು" ಅನ್ನುತ್ತಾರೆ ಜನಪದರು. "ಮನೆ ಕಟ್ಟಲು ಸಾಲ ಮಾಡಿದೆ. ಅದನ್ನು ತೀರಿಸಲಾಗದೆ ಸೈಟನ್ನು ಮಾರಿದೆ" ಎಂದು ಪ್ರಲಾಪಿಸುವವರುಂಟು! ಒಂದೆಡೆ ಮಾಡಿದ ಸಾಲ ತೀರಿಸಲು, ಇನ್ನೊಂದೆಡೆ ಸಾಲಕ್ಕೆ ಶರಣಾಗುವುದು ಅಷ್ಟೇ ಸಂಭಾವ್ಯವೆನ್ನಿ. ವಿಪರ್ಯಾಸವೆಂದರೆ "ನಿಮಗೆ ಸಾಲ ಬೇಕೆ? ಕೂಡಲೆ ಬಂದು ಕಾಣಿರಿ" ಎಂಬ ಜಾಹೀರಾತುಗಳು! ಇವು ಸಂತಸದೊಂದಿಗೆ ಭಯವನ್ನೂ ಹುಟ್ಟಿಸುತ್ತವೆ. ಕೊಟ್ಟ ಸಾಲವನ್ನು ವಸೂಲಿ ಮಾಡುವುದು ದುಡಿಮೆಯಷ್ಟೇ ತ್ರಾಸದ ಕೆಲಸ ಎನ್ನುವುದು ಅನುಭವಿಗಳ ನುಡಿ. ಸಾಲ ಪಡೆದವನಿಗಿಂತ ಸಾಲ ಕೊಟ್ಟವ ಸಿದ್ಧಾಪೇಕ್ಷಿಯು ಅಪಕ್ಕಪಗೋಳಿಗಾಗುತ್ತಾನೆ ಎನ್ನೋಣವೆ ?

ಸಾಲ ಮಾಡಿಯಾದರೂ ತುಪ್ಪ ತಿನ್ನು ಎಂದು ಆಲಂಕಾರಿಕವಾಗಿ ಹೇಳಿದ ಚಾರ್ವಾಕರು ಅನ್ನುವುದು ಬಹುಶಃ ಬದುಕು ಅಶಾಶ್ವತ, ಇರುವ ತನಕ ಸಂತಸದಿಂದಿರು ಎನ್ನುವ ಅರ್ಥದಲ್ಲೇ ಹೊರತು ಸಾಲ ಒಯ್ಯುವ ಪ್ರವೃತ್ತಿಯನ್ನು ಸಮರ್ಥಿಸಿ ಅಲ್ಲ. ಬ್ಯಾಂಕಿನ ಮ್ಯಾನೇಜರೊಬ್ಬರು ಈಚೆಗೆ ನನಗೆ ಒಂದು ಅನುಭವ ಹೇಳಿಕೊಂಡರು. ಒಂದು ದಿನ ಅವರ ಚೇಂಬರಿಗೆ ಆಸಾಮಿಯೊಬ್ಬ ಪ್ರಯಾಸದಿಂದ, ಮರದ ಹಲಗೆಯನ್ನು ಹೊತ್ತು ತಂದನಂತೆ. "ನಿನಗೆ ಹೆಡ್ ಆಫೀಸಿನಿಂದ ಯಾರಾದರೂ ಬಾಗಿಲು ತಂದುಹಾಕಲು ಹೇಳಿದ್ದಾರೆಯೇ" ಅಂತ ಕೇಳಿದರು ಮ್ಯಾನೇಜರ್. "ಹಾಗಲ್ಲ ಸಾರ್, ನೀವು ಬಾಗಿಲನ್ನು ಇಟ್ಟುಕೊಂಡು ಸಾಲ ಕೊಡಿ" ಅಂದ ಆ ಭೂಪ. "ಚೆಪ್ಪ, ಎಲ್ಲಿಯಾದರೂ ಬಾಗಿಲ ಮೇಲೆ ಸಾಲ ಕೊಡ್ತಾರ" ಎಂದು ಕೇಳಿದರು ಮ್ಯಾನೇಜರ್. "ಮತ್ತೆ ಮನೆ ಬಾಗಿಲಿಗೇ ಸಾಲ ಅಂತ ಪೇಪರ್‍ನಾಗೆ ಬಂದೈತಲ್ಲ ದೇವ್ರು" ಅನ್ನುವುದೇ ಆತ ?!

ಸಾಲ ಮಾಡುವವರು ಅತ್ಯಂತ ಜಾಣ್ಮೆ ತಾಳ್ಮೆ ವಾಕ್ಚಾತುರ್ಯವನ್ನೇ ಬಳಸುತ್ತಾರೆ. ನನ್ನ ಕೋ ಬ್ರದರ್ ನಾಣಿ ಒಳ್ಳೆಯ ನೌಕರಿಯಲ್ಲಿದ್ದು ಕೈತುಂಬ ಪಗಾರ ಗಳಿಸುತ್ತಾನೆ. ಆದರೂ ಸಾಲಸೋಲ ಎಂಬ ಭೂತಕ್ಕೆ ದಾಸನಾಗಿದ್ದಾನೆ. ಏನು ಮಾಡಲಿ ಹಾಗಾಯಿತು, ಇಂತಹ ಖರ್ಚು ಬಂತು, ನೆಂಟರು ಬಂದಿದ್ದರು... ಮುಂತಾಗಿ ಅವನ ರಾಮಾಣ್ಯ. ಒಮ್ಮೆ, ತೇದಿ ಇನ್ನೂ ನಾಲ್ಕು. "ಒಂದೈನೂರು ರೂಪಾಯಿ ಕೊಟ್ಟಿರಯ್ಯ. ಬೇಗ ತೀರಿಸ್ಬಿಡ್ತೀನಿ" ಅಂತ ಅಂಗಲಾಚಿದ. "ಅಲ್ವಯ್ಯ, ಸಂಬಳ ತಗೊಂಡು ನೂರು ತಾಸೂ ಆಗಿಲ್ಲ ಈಗ್ಲೇ ಕೈಗಡವಾದ್ರೆ ಇನ್ನು ತಿಂಗಳು ಪೂರ್ತಿ ಏನು ನಿನ್ನ ಗತಿ" ಅಂದೆ. ಅದಕ್ಕೆ ನಾಣಿ "ಖಂಡಿತವಾಗಿ ನನ್ನತ್ರ ಈಗ ಬೇಕಾದಷ್ಟು ದುಡ್ಡಿದೆ. ಆದ್ರೆ ನಿನ್ನತ್ರ ಆಮೇಲೆ ಇರುತ್ತೋ ಇಲ್ವೋ ಅಂತ ಈಗ್ಲೇನೆ ಕೇಳ್ತಿದೀನಿ" ಅಂದ ಪ್ರಜೆ!

ನಮ್ಮ ಆಫೀಸಿನ ಪ್ಯೂನ್ ಪರಪ್ಪ ಎಷ್ಟರಮಟ್ಟಿಗೆ ಉದ್ರಿಗೆ ಶರಣಾಗಿದ್ದಾನೆಂದರೆ ಅವನು ಯಾರನ್ನಾದರೂ ರಾಗವಾಗಿ "ಸಾ...ರ್" ಎಂದು ಸಂಬೋಧಿಸುವುದೇ ತಡ ಹಾಗೆ ಸಂಬೋಧಿಸಲ್ಪಟ್ಟವರು "ಇಲ್ಲಪ್ಪ ಇಲ್ಲ... ಇಲ್ಲ" ಎಂದಿರುತ್ತಾರೆ. ಮೈಸೂರಿನಲ್ಲಿ ಸಂಬಂಧಿಯೊಬ್ಬನ ಮನೆಯ ಲಗ್ನದ ಸಮಾರಂಭದಲ್ಲಿ ಭಾಗವಹಿಸಿದ್ದೆ. ನನ್ನ ಪಕ್ಕದಲ್ಲಿ ಕುಳಿತಿದ್ದ ಸುಮಾರು ನಲವತ್ತರವ ಮೊಬೈಲ್‌ನಲ್ಲಿ ಮಾತನಾಡುತ್ತಿದ್ದ. "ಹಲೋ, ನಾನೀಗ ತುರ್ತು ಕೆಲಸದ ಕಾರಣ ಬೆಂಗಳೂರಿನಲ್ಲಿದ್ದೇನೆ. ಮದುವೆ ಕಾರ್ಯಕ್ಕೆ ಕೂಡ ನಾನು ಬರಕ್ಕಾಗಿಲ್ಲ ಮಾರಾಯ. ನಿಂಗೆ ಕೊಡಬೇಕಾದ ಸಾವಿರ ರೂಪಾಯಿಗಳನ್ನು ಖಂಡಿತ ಮುಂದಿನ ವಾರ ವಾಪಸ್ಸು ಮಾಡೇ ತೀರ್ತೀನಿ ಕಣಪ್ಪ... ಪ್ಲೀಸ್, ತಪ್ಪು ತಿಳೀಬೇಡ..." ಹೀಗೆ ಸಾಗಿತ್ತು ಆತನ ಮಾತು. ಅಚ್ಚರಿಯೋ ಅಚ್ಚರಿ. ಆತ ಯಾರಿಗೆ ಫೋನಾಯಿಸುತ್ತಿದ್ದನೋ ಆ ಆಸಾಮಿ ಅದೇ ಮದುವೆ ಛತ್ರದಲ್ಲೇ ಇದ್ದ! ಇವನಿಗೆ ಅದು ಗೊತ್ತೇ ಇಲ್ಲ. ಬಂದೇ ಬಂದ ಆ ಮಹಾನುಭಾವ ಇವನತ್ತ ಧಾವಿಸಿ. ಮುಂದಿನದನ್ನು ನೀವೇ ಊಹಿಸಿಕೊಳ್ಳಿ. ಹಾಸಿಗೆ ಇದ್ದಷ್ಟು ಕಾಲು ಚಾಚಬೇಕಂತೆ. ಇದೇ ಜಾಣತನ. ಸಾಲ ಸೋಲಕ್ಕೆ ಸಿಲುಕುವುದೂ ಒಂದೇ, ನದಿಯಲ್ಲಿ ಸುಳಿಗೆ ಸಿಲುಕುವುದೂ ಒಂದೇ. ಈ ನಿಟ್ಟಿನಲ್ಲಿ ಖ್ಯಾತ ಪ್ರಬಂಧಕಾರ ಎ. ಎನ್. ಮೂರ್ತಿರಾಯರು ಹೇಳುತ್ತಿದ್ದರು: "ಜಗತ್ತಿನಲ್ಲಿ ಬಡವ, ಶ್ರೀಮಂತ ಎಂಬುದೇ ಇಲ್ಲ. ತಮಗೆ ಬೇಕಾದ್ದು ಕೊಳ್ಳಲು ಯಾರಿಗೆ ಇರುವ ಹಣ ಸಾಲದೋ ಅವರೇ ಬಡವರು. ಯಾರಿಗೆ ತಮಗೆ ಬೇಕಾದ್ದು ಕೊಳ್ಳಲು ಹಣ ಸಾಕೋ ಅವರೇ ಶ್ರೀಮಂತರು."

ಬಿಂಡಿಗನವಿಲೆ ಭಗವಾನ್
೩೬ಬಿ, ೯ನೇ ಮುಖ್ಯರಸ್ತೆ, ಬನಶಂಕರಿ ೧ನೇ ಸ್ಟೇಜ್
೨ನೇ ಬ್ಲಾಕ್, ಬೆಂಗಳೂರು - ೫೬೦ ೦೫೦

# ಆರೋಹಣ

## ೧. ಬಿಗಿ ಭಟ್ರು

ಎಲ್ಲೂರಿನ ಸುಬ್ರಾಯ ಭಟ್ರನ್ನು ಒಂದು ಕಾಲದಲ್ಲಿ ಎಲ್ರೂ ಬಿಗಿ ಭಟ್ರು ಅಂತಲೇ ಕರೀತಾ ಇದ್ದದ್ದು. ಎಂತಕ್ಕೆ ಅಂದ್ರೆ ಅವ್ರು ಹೇಳ್ತಿದ್ದ ಜ್ಯೋತಿಷ್ಯವೂ ಬಿಗಿ, ಕೇಳ್ತಿದ್ದ ದಕ್ಷಿಣೆಯೂ ಬಿಗಿ. ಸುಬ್ರಾಯ ಭಟ್ರು ಎಲ್ಲೂರಿನ ಲಕ್ಷ್ಮೀನರಸಿಂಹ ದೇವಸ್ಥಾನದ ಪೂಜೆಯ ಭಟ್ರು. ಮಾಪೂಜೆ ಮುಗ್ದಾದ ಮೇಲೆ ಅವ್ರು ನಿಮಿತ್ತ ಹೇಳ್ಳಿಕ್ಕೆ ಕೂತ್ಕೊಳ್ತಿದ್ರು. ಯಾರಾದ್ರೂ ಎಂತಾದ್ರೂ ಕೇಳಿದ್ರೆ ಸಾಕು, ಕವಡೆ ಹಾಕಿ ಒಂದೆರ್ಡು ಮಿನಿಟು ಮಣಮಣ ಹೇಳಿ, ಕರೆಕ್ಟಾಗಿ ನಿಮಿತ್ತ ಹೇಳ್ತಿದ್ರು. ''ಅವ್ರು ಹೇಳುದೂ ಒಂದೇ ಗುಂಡು ಹೊಡಿಯುದೂ ಒಂದೇ'' ಅಂತ ಎಲ್ರೂ ಮಾತಾಡಿಕೊಳ್ತಿದ್ರು. ಸುಬ್ರಾಯ ಭಟ್ರು ಒಂಥರಾ ಮೂಡಿ ಮನುಷ್ಯ. ಮನಸ್ಸಾದ್ರೆ ಮಾತ್ರ ನಿಮಿತ್ತ ಹೇಳ್ತಿದ್ರು. ಮನಸ್ಸಾಗದಿದ್ರೆ ಎದುರಿಗಿದ್ದವ ಮುಖ್ಯಮಂತ್ರಿಯೇ ಆಗಿದ್ರೂ ಹೇಳ್ತಿರ್ಲಿಲ್ಲ. ಕೆಲವು ಸರ್ತಿ ನಿಮಿತ್ತ ಕೇಳ್ಳಿಕ್ಕೆ ಬಂದವ್ರು ತಮ್ಮ ಕಷ್ಟ ಇಂಥದ್ದು ಅಂತ ಹೇಳುವ ಮೊದ್ಲೇ ಅವ್ರ ಮುಖ ನೋಡಿ, ''ನಿನ್ನ ಮಗ್ಳಿಗೆ ಮದ್ವೆ ಯಾವಾಗ ಆಗ್ತದೇಂತ ಅಲ್ವಾ ನೀನು ಕೇಳ್ಳಿಕ್ಕೆ ಬಂದದ್ದು? ಇನ್ನು ಎರ್ಡು ವರ್ಷ ಆಗೂದಿಲ್ಲ'' ಅಂತ್ಲೋ ''ನೀವು ಬಿಸಿನೆಸ್ ಯಾವಾಗ ಇಂಪ್ರೂ ಆಗ್ತದೇಂತಾ ಕೇಳ್ಳಿಕ್ಕೆ ಬಂದಿದ್ದೀರಿ ಅಲ್ವಾ? ಇನ್ನು ಹದ್ನೈದು ದಿನಗಳಲ್ಲಿ ನಿಮ್ಗೆ ಧನಲಕ್ಷ್ಮೀ ಯೋಗ ಉಂಟು'' ಅಂತ್ಲೋ ಹೇಳಿಬಿಡ್ತಿದ್ರು. ಬಂದವ್ರು, ''ನಾವು ಎಂತದೂ ಹೇಳದೆ ಇವ್ರಿಗೆ ಹೇಗೆ ಗೊತ್ತಾಯ್ತಪ್ಪ?'' ಅಂತ ಎಣಿಸ್ತಿದ್ರು. ಸುತ್ತ ಇದ್ದವ್ರಿಗೆ ಅದ್ರಿಂದಾಗಿ ಭಟ್ರ ಮೇಲೆ ಗೌರವ ಹೆಚ್ಚಾಗ್ತಿತ್ತು. ಕೆಲವ್ರಿಗಂತೂ, ಕೇಳಿದ್ದು ಆಗೂದಿಲ್ಲಾಂತಂದ್ರೆ ಡೈರೆಕ್ಟಾಗಿ ಹೇಳಿಯೇ ಬಿಡ್ತಿದ್ರು.

''ಅಲ್ಲ ಭಟ್ರೇ ಅದಕ್ಕೆ ಎಂತಾದ್ರೂ ಶಾಂತಿ-ಗೀಂತಿ ಹೋಮ ಇದ್ರೆ ಹೇಳಿ. ನಿಮ್ಮ ಪುರೋಹಿತಿಕೆಯಲ್ಲೇ ಮಾಡ್ಸುವಾ. ಎಷ್ಟು ಬೇಕಾದ್ರೂ ಖರ್ಚಾಗ್ಲಿ'' ಅಂತ ಪಾರ್ಟಿಯವ್ರು ಹೇಳಿದ್ರೆ ಸಾಕು ಭಟ್ರಿಗೆ ಕಂಡಾಬಟ್ಟೆ ಗರ್ವ ಬರ್ತಿತ್ತು. ''ಶಾಂತಿ ಮಾಡಿ ಅದೃಷ್ಟ ತಕ್ಕೊಳ್ಳಿಕ್ಕೆ ಬರೋದಿಲ್ಲ ಆಯ್ತಾ?... ಎಂತಾಂತ ತಿಳ್ಕೊಂಡಿದ್ದೀರಿ ನನ್ನನ್ನು? ನೀವು ಲಾಗ ಹಾಕಿದ್ರೂ ಈ ಜಾತಕದ ಪ್ರಕಾರ ನೀವು ಎಣಿಸುವ ಹಾಗೆ ನಿಮ್ಗೆ ಬದುಕ್ಲಿಕ್ಕೆ ಆಗೋದಿಲ್ಲ. ಇದು ಈಗ ಅಲ್ಲ. ಇನ್ನು ಹತ್ತು ವರ್ಷ ಬಿಟ್ಟು ಬಂದು ಕೇಳಿದ್ರೂ ನಾನು ಇದನ್ನೇ ಹೇಳುದು... ಹೋಗಿ ಇಲ್ಲಿಂದ! ಶಾಂತಿಯಂತೆ ಶಾಂತಿ!...'' ಅಂತ ಹೇಳ್ತಿದ್ರು. ಬಂದವ್ರು ಮಂಡೆ ಬೆಚ್ಚ ಮಾಡಿಕೊಂಡು ಹೋಗುವ ಮೊದ್ಲು, ''ನನ್ನ ದಕ್ಷಿಣೆ ಐದು ಸಾವಿರದ ಒಂದು ಇಟ್ಟು ಹೋಗಿ!'' ಅಂತ ಹೇಳ್ತಿದ್ರು. ಸುಬ್ರಾಯ ಭಟ್ಟರ ವ್ಯವಹಾರವೇ ಹಾಗಿತ್ತು. ನೋಡ್ಲಿಕ್ಕೂ ಒಂದು ರೀತಿ ಮಂತ್ರವಾದಿಯ ಹಾಗೇ ಕಾಣ್ತಿದ್ರು. ಹೆಗಲಿನವರೆಗೆ ಕೂದ್ಲು ಬಿಟ್ಟಿದ್ರು. ರೇಶ್ಮೆ ಪಟ್ಟೆದ್ದು ಪಟ್ಟೆ ಕಚ್ಚೆ. ಮೈಮೇಲೆ ರೇಷ್ಮೆ ಶಾಲು. ಕಪ್ಪು ಮೈಯಲ್ಲಿ ಗೋಪೀನಾಮ - ಮುದ್ರೆ. ಕುತ್ತಿಗೆಯಲ್ಲಿ ಎರ್ಡು ಮೂರು ತುಳ್ಸೀಮಣಿ ಸರಗಳು ಬಂಗಾರದಲ್ಲಿ ಕಟ್ಟಿಸಿದ್ದು. ಕೈಯಲ್ಲಿ ಬಂಗಾರದ್ದು ಕಡಗ. ಇಷ್ಟೆಲ್ಲ ಇದ್ರೂ ಎಪ್ಪತ್ತೈದರ ಸುಬ್ರಾಯ ಭಟ್ರು ನೆಗಾಡಿದ್ದನ್ನು ಯಾರೂ ನೋಡಿದವ್ರಿಲ್ಲ. ಸ್ವಂತ ಅವ್ರ ಹೆಂಡ್ತಿ ನಾಗವೇಣಿ, ಮಕ್ಳು ಯಾರೂ! ಆದ್ರಿಂದ ಸುಬ್ರಾಯ ಭಟ್ರು ಮನೆಯಲ್ಲಿ ಊರಲ್ಲಿ 'ಬಿಗಿ ಭಟ್ರೇ' ಆಗಿದ್ರು.

## ೨. ಸ್ಟೈಲ್ ಭಟ್ರು

ಸುಬ್ರಾಯ ಭಟ್ರಿಗೆ ಕರೆಕ್ಟ್ ಆಪೋಸಿಟ್ ಎಲ್ಲೂರಿನ ವ್ಯಾಸ ಭಟ್ರು. ಸುಬ್ರಾಯ ಭಟ್ರು ವ್ಯಾಸ ಭಟ್ರು ಅಣ್ಣ ತಮ್ಮಂದಿರ ಮಕ್ಳು. ಎಲ್ಲೂರಿನ ಲಕ್ಷ್ಮೀನರಸಿಂಹ ದೇವಸ್ಥಾನದ ಎದುರಿನ ಸಾಲಿನಲ್ಲಿ ಒಂದು ಕಡೆ ಸುಬ್ರಾಯ ಭಟ್ರದ್ದು ಮತ್ತೊಂದು ಕಡೆ ವ್ಯಾಸ ಭಟ್ರ ಮನೆ. ಎದ್ರುಬದ್ರು ಇದ್ರೂ ಎರ್ಡೂ ಮನೆಯವ್ರಿಗೆ ಕೋಪ. ಮಾತು ಕತೆ ಇಲ್ಲ. ಅದಕ್ಕೆ ಕಾರಣ ಸುಬ್ರಾಯ ಭಟ್ರ ಅಪ್ಪ ಗೋವಿಂದ ಭಟ್ರು ವ್ಯಾಸ ಭಟ್ರ ಅಪ್ಪನಾದ ಕೇಶವ ಭಟ್ರ ವಿರುದ್ಧ ಕೋರ್ಟ್‌ನಲ್ಲಿ ಕೇಸ್ ಹಾಕಿದ್ರು– ಪೂಜೆಯ ವಿಷಯಕ್ಕೆ ಸಂಬಂಧಿಸಿದ ಹಾಗೆ. ಅದು ಇನ್ನೇನು ತಮ್ಮ ವಿರುದ್ಧ ಆಗ್ಬೇಕು ಆದಾಗ ಗೋವಿಂದ ಭಟ್ರು ಕೇಶವ ಭಟ್ರಿಗೆ ದೇವಸ್ಥಾನದ ಒಳಗೆ ಮಣೆ ತಕೊಂಡು ಹೊಡ್ದಿದ್ರು. ಏನೋ ನರಸಿಂಹ ದೇವರ ಅನುಗ್ರಹ ಚೆನ್ನಾಗಿತ್ತು ಕೇಶವ ಭಟ್ರು ಬದುಕಿ ಉಳ್ದ್ರು. ಅವರ್ಮೇಲೆ ಹಾಕಿದ ಕೇಸ್ ವರ್ಷಗಟ್ಲೆ ಎಳ್ಕೊಂಡು ಹೋಯ್ತು. ಕೊನೆಗೂ ಸಾಯುವ ಹೊತ್ತು ಇಬ್ರೂ ತಮ್ಮ ಮಕ್ಳ ಹತ್ರ, ''ಏನೇ ಆಗ್ಲಿ ನೀವು ಒಬ್ರು ಇನ್ನೊಬ್ರ ಹತ್ರ ಮಾತಾಡುದು, ಅನ್ನ ನೀರು ಮುಟ್ಟುದು ಮಾಡ್ಬಾರ್ದು'' ಅಂತ ಆಣೆ ತಕೊಂಡಿದ್ರು. ಹಾಗಾಗಿ ಸುಬ್ರಾಯ ಭಟ್ರು ವ್ಯಾಸ ಭಟ್ರ ಮಧ್ಯೆ ಪಿತ್ರಾರ್ಜಿತವಾದ ದ್ವೇಷ ಕಂಟಿನ್ಯೂ ಆಗಿತ್ತು.

ಇರ್ಲಿ, ಈಗ ವ್ಯಾಸ ಭಟ್ರ ವಿಷಯಕ್ಕೆ ಬರ್ತೇನೆ. ಎಪ್ಪತ್ತರ ಆಸುಪಾಸಿನ ವ್ಯಾಸ ಭಟ್ರಿದ್ದು ಹೆಂಗಸರನ್ನು ಕಂಡ್ರೆ ಪುರ್ಲು ಪುರ್ಲು ಮಾತಾಡುವ ಅಭ್ಯಾಸ. ಕೈ ತೋರಿಸ್ಲಿಕ್ಕೆ ಹೆಂಗಸು ಬಂದ್ರೆ ಗಂಟೆಗಟ್ಲೆ ಬಿಡ್ತಾ ಇರ್ಲಿಲ್ಲ. ಅವ್ರಿಗೆ ಬೇಕಾದ ಹಾಗೆ ನಿಮಿತ್ತ ಹೇಳ್ತಿದ್ರು. ಮಂಗ್ಳೂರು, ಉಡುಪಿ ಹೀಗೆ ಸುಮಾರು ಕಡೆಗಳಿಂದ ದೊಡ್ಡ ದೊಡ್ಡ ಮನೆಗಳ ಹೆಂಗಸ್ರು ನಿಮಿತ್ತ ಕೇಳ್ಳಿಕ್ಕೆ ಬರ್ತಿದ್ರು. ಬಂದ ಕೂಡ್ಲೆ ''ಹ್ಹೆ... ಹ್ಹೆ...ಹ್ಹೆ...ಬನ್ನಿ... ಎಂತ ತಗೊಳ್ತೀರಿ?'' ಅಂತ ಸುರು ಆಡಿ ಅವ್ರು ಕೇಳುವ ಮೊದ್ಲೇ ಕೈ ಹಿಡ್ಕೊಳ್ತಿದ್ರು. ಅವ್ರು ಕೇಳಿದ್ದು ಯಾವ್ದೂ ಆಗುದಿಲ್ಲಾಂತ ವ್ಯಾಸ ಭಟ್ರು ಹೇಳ್ತಿರ್ಲಿಲ್ಲ. ಬಿಳೀ ಮೈಯನ್ನು ಎಷ್ಟು ಸಾಧ್ಯವೋ ಅಷ್ಟು ತೋರಿಸ್ಕೊಂಡೇ ತಿರ್ಗಾಡ್ತಿದ್ರು. ಡೈಲಿ ಶೇವ್ ಮಾಡಿಕೊಳ್ತಿದ್ರು. ನೆಪಕ್ಕೆ ಮಾತ್ರ ಶೆಂಡಿ ಬಿಟ್ಟಿದ್ರು. ಅಕ್ಷತೆ ಅಂಗಾರಕ ಎಲ್ಲದ್ರ ಒಟ್ಟಿಗೆ ಪೌಡರ್, ಸ್ನೋ, ಸೆಂಟು ಎಲ್ಲ ಹಾಕ್ಕೊಳ್ತಿದ್ರು. ಸುಬ್ರಾಯ ಭಟ್ರ ಹಾಗೆ ಎಷ್ಟು ಸಾಧ್ಯವೋ ಅಷ್ಟು ಬಂಗಾರದ ಆಭರಣಗಳನ್ನು ಮೈಮೇಲೆ ಹಾಕ್ಕೊಳ್ತಿದ್ರು. ಮನೆ ಮುಂದೆ 'ಶ್ರೀ ಲಕ್ಷ್ಮೀ ನರಸಿಂಹ ಜ್ಯೋತಿಷಾಲಯ' ಅಂತ ಬೋರ್ಡ್ ಹಾಕಿ ಅದ್ರ ಕೆಳಗೆ 'ಇಲ್ಲಿ ಎಲ್ಲ ಗ್ರಹಚಾರ ದೋಷಗಳಿಗೂ ಪರಿಹಾರ ಮಾಡಿಕೊಡಲಾಗುವುದು' ಅಂತ ಬರ್ದಿದ್ರು. ಅದ್ರ ಕೆಳಗೆ ವೇ.ಮೂ.ಜ್ಯೋ.ವಿ. ಜ್ಯೋ.ಶಿ. ಸಂಸ್ಕೃತ ರತ್ನಾಕರ, ವಾದ ಮಾರ್ತಾಂಡ ಅಗ್ನಿಹೋತ್ರಿ ವ್ಯಾಸ ಭಟ್ಟ, ಎಲ್ಲೂರು, ಅಂತ ದಪ್ಪದಲ್ಲಿ ಬರ್ದಿದ್ರು. ಮನೆ ಒಳಗೆ ಚಾವಡಿಯಲ್ಲಿ ಸುಮಾರು ಹದಿನೈದಿಪ್ಪತ್ತು ಫೋಟೋಗಳನ್ನು ಗೋಡೆಯಲ್ಲಿ ಇಟ್ಟಿದ್ರು. ಹೆಚ್ಚಿನದ್ರಲ್ಲಿ ಸಿನಿಮಾ ನಟಿಯರು ಅಥವಾ



ಮಹಿಳಾ ರಾಜಕಾರಣಿಗಳು. ಅವ್ರ ಹೆಗಲ ಮೇಲೆ ವ್ಯಾಸ ಭಟ್ರ ಕೈ. ದಕ್ಷಿಣೆಯೂ ಅಷ್ಟೆ. ಅಷ್ಟೇ ಕೊಡಿ ಇಷ್ಟೇ ಕೊಡಿ ಅಂತ ಕೇಳ್ತಿರ್ಲಿಲ್ಲ. ಬದ್ಲಿಗೆ, ''ನೀವು ಅಂದ್ರೆ ಸಾಧಾರಣವಾ? ಎಲ್ಲಿ ಹೋದ್ರೂ ಸಾವಿರಕ್ಕಿಂತ ಕಡಿಮೆ ಕೊಡುವವ್ರೇ ಅಲ್ಲ. ಮಾತ್ರ ಅಲ್ಲ, ನಿಮ್ಮ ಹೆಸ್ರಲ್ಲಿ ಶಾಂತಿ ಮಾಡ್ತಿದ್ದೇನೆ. ಇದು ಎಂತ ಆದ್ರೂ ನಿಮ್ಮನ್ನ ಇನ್ನು ಮುಂದೆ ಗ್ರಾಚಾರ ಕಾಡುದಿಲ್ಲ. ನೀವು ಮಂಡೆ ಬಿಸಿ ಮಾಡಿಕೊಳ್ಳುದೇ ಬೇಡ... ನಾನಿದ್ದೇನೆ ಅದಕ್ಕೆ ಗ್ಯಾರಂಟಿ...'' ಅಂತೆಲ್ಲ ಹೇಳ್ತಿದ್ರು. ಬಂದವ್ರು ಮರ್ಲಾಗಿ ಸಾವಿರಗಟ್ಲೆ ಕೊಟ್ಟು ಹೋಗ್ತಿದ್ರು. ಹೀಗೆ ಎಲ್ಲವನ್ನೂ ಸ್ಟೈಲಾಗಿಯೇ ಮಾಡ್ತಿದ್ದ ವ್ಯಾಸ ಭಟ್ರನ್ನ ಊರಲ್ಲಿ ಎಲ್ರೂ 'ಸ್ಟೈಲ್ ಭಟ್ರು' ಅಂತ್ಲೇ ಕರೀತಾ ಇದ್ರು. ಇಂಥಾ ಸ್ಟೈಲ್ ಭಟ್ರ ಮುಖ ದುಮುದುಮುಗುಡ್ತಾ ಇದ್ದದ್ದು ಯಾವಾಗ ಅಂದ್ರೆ ಸುಬ್ರಾಯ ಭಟ್ರ ಹೆಸ್ರು ಹೇಳಿದಾಗ. ಅವ್ರ ಹೆಸ್ರು ಹೇಳಿದ್ರೆ ಸಾಕು, ''ಆ ದಂಡೇಮುಗ್ಗಿಗೆ ಎಂತ ಜ್ಯೋತಿಷ್ಯ ಗೊತ್ತುಂಟು? [illegible]

ಪಿ. ಬಿ. ಪ್ರಸನ್ನ

ಹೋಗಿ ಕಲ್ತು ಬಂದದ್ದು ನಾನು ಗೊತ್ತಾಯ್ತಾ? ನೀವು ಅವ್ನತ್ರ ಕೇಳಿ ಇಲ್ಲಿಗೆ ಬರೊದಾದ್ರೆ ಬರ್ಲೇ ಬೇಡಿ ಹೋಗಿ!'' ಅಂತ ಸುಬ್ರಾಯ ಭಟ್ರಿಗೆ ಅಥವಾ ಅವ್ರ ಮನೆಯವ್ರಿಗೆ ಕೇಳುವ ಹಾಗೆ ಹೇಳ್ತಿದ್ರು. ಸುಬ್ರಾಯ ಭಟ್ರು ಕೇಳಿದ್ರೂ ಕೇಳದವ್ರ ಹಾಗೆ ಇರ್ತಿದ್ರು.

ದೇವಸ್ಥಾನದ ಪೂಜೆಯ ಹಕ್ಕು ಒಂದು ವರ್ಷ ಸುಬ್ರಾಯ ಭಟ್ರಿಗೆ, ಮತ್ತೊಂದು ವರ್ಷ ವ್ಯಾಸ ಭಟ್ರಿಗೆ. ಸುಬ್ರಾಯ ಭಟ್ರು ಪೂಜೆ ಮಾಡುವಾಗ ಭಾರೀ ಮಡಿ-ಗಿಡಿ ಲೆಕ್ಕಾಚಾರ ಹಾಕ್ತಿದ್ರು. ಪೂಜೆ ಆದ್ಮೇಲೆ ಭಕ್ತರಿಗೆ ಊಟವೂ ಹಾಗೆ ಭಾರೀ ಲೆಕ್ಕಾಚಾರದ್ದು. ಮೊದ್ಲು ಬ್ರಾಮಣ್ರಿಗೆ. ನಂತ್ರ ಶೆಟ್ರಿಗೆ, ಮರಕಾಲ್ರಿಗೆ. ಕಡೆಯಲ್ಲಿ ಉಳ್ದದ್ದು ಕೊರಗರಿಗೆ. ತೇರಿನ ದಿವ್ಸವೂ ಹಾಗೆ ಎಲ್ಲ ಕಟ್ಟುಕಟ್ಳೆ ಪ್ರಕಾರ ಆಗ್ಬೇಕು. ಸಾಂಸ್ಕೃತಿಕ ಕಾರ್ಯಕ್ರಮ ಅಂದ್ರೆ ಯಕ್ಷಗಾನ, ಹರಿಕತೆ, ಹೆಚ್ಚು ಅಂದ್ರೆ ಪೌರಾಣಿಕ ನಾಟಕ. ಆದ್ರೆ ವ್ಯಾಸ ಭಟ್ರದ್ದು ಹಾಗಲ್ಲ. ಬಂದ ಭಕ್ತಾದಿಗಳಿಗೆಲ್ಲ ಸಾ ಪಂಕ್ತಿ ಊಟ. ಎರಡೆರಡು ಭಕ್ಷ್ಯ. ತೇರಿನ ದಿವ್ಸವೂ ಸಾ ಪಂಕ್ತಿ. ನಾಲ್ಕು- ಐದು ಭಕ್ಷ್ಯಗಳು! ಎಲ್ಲ ಜಾತಿಯವ್ರಿಗೂ ಅಷ್ಟೂ ಊಟ! ಬ್ರಾಮಣ್ರೆಲ್ಲ ಒಳಗೊಳಗೇ, ''ಈ ವ್ಯಾಸನದ್ದು ಎಲ್ಲ ಸರಿ. ಆದ್ರೆ ಸಾ ಪಂಕ್ತಿ ಊಟ ಹಾಕ್ತಾನೆ. ನಮ್ಮ ಜಾತಿ ಕೆಡಿಸ್ತಾನೆ ಸಾಯ್ಲಿಕೆ!'' ಅಂತೆಲ್ಲ ಬೈತಿದ್ರು. ಕಡೆಗೆ ಊಟ ಬಿಡ್ಲಿಕ್ಕೆ ಮನಸ್ಸಾಗದೆ, ''ಸಾ ಪಂಕ್ತಿಯಾದ್ರೆ ಸಾ ಪಂಕ್ತಿ, ಮೊದ್ಲು ಊಟ ಮಾಡುವ. ಆಮೇಲೆ ಪಂಚಗವ್ಯ ತಕೊಂಡ್ರೆ ಆಯ್ತು'' ಅಂತ ಸಮಾಧಾನ ಮಾಡಿಕೊಳ್ತಿದ್ರು. ತೇರಿನ ದಿವ್ಸ ಸಾಂಸ್ಕೃತಿಕ ಕಾರ್ಯಕ್ರಮ ಅಂದ್ರೆ ಭಕ್ತಿಗೀತೆ, ಆರ್ಕೆಸ್ಟ್ರಾ ಸಿನಿಮಾ ನಟಿಯರಿಂದ. ಹೀಗೆ ವ್ಯಾಸ ಭಟ್ರು ಎಂತ ಮಾಡಿದ್ರೂ ಸುಬ್ರಾಯ ಭಟ್ರಿಗಿಂತ ಶ್ಟೈಲಾಗಿ ಮಾಡ್ತಿದ್ರು. ಹಾಗಾಗಿ ಅವ್ರನ್ನು-ದೇವ್ರನ್ನು ನೋಡ್ಲಿಕ್ಕೆ ತುಂಬ ಜನ ಬರ್ತಿದ್ರು.

### ೩. ಬಿಗಿ ಭಟ್ರಿಗೆ ಬಿಂಗ್ರಿ ಹಿಡ್ದ ಕತೆ

ಒಂದು ದಿನ ಸುಬ್ರಾಯ ಭಟ್ರ ಮಗ ಬೆಂಗ್ಳೂರಿನಿಂದ ಬಂದ. ಅವ ಬೆಂಗ್ಳೂರಲ್ಲಿ ಕಂಪೂಟರ್ ಇಂಜಿನಿಯರ್ ಆಗಿದ್ದ. ಬಂದವ್ನೆ, ''ಅಪ್ಪಿಯ್ಯ ನಿಮ್ಮನ್ನು ಅಮ್ಮನನ್ನು ಕಾಶಿ-ಬದ್ರಿಗೆ ಕರ್ಕೊಂಡು ಹೋಗ್ಲಿಕ್ಕೆ ನಾನು ಬಂದದ್ದು. ಒಂದು ತಿಂಗ್ಳು ರಜೆ ಹಾಕಿದ್ದೇನೆ. ಟಿಕೇಟು ಎಲ್ಲ ರೆಡಿ ಮಾಡ್ಸಿದ್ದೇನೆ. ಎಲ್ಲ ವಿಮಾನದಲ್ಲೇ ಹೋಗುದು. ಡೆಲ್ಲಿಯಿಂದ ಆಚೆಗೆ ಟ್ಯಾಕ್ಸಿ ಮಾಡ್ಸಿಕೊಂಡು ಹೋಗುವ. ಹೆಚ್ಚು ದಿನ ಇಲ್ಲ. ಇನ್ನು ಮೂರು ದಿನ ಬಿಟ್ಟು ಹೊರಡುವ'' ಅಂದ. ಸುಬ್ರಾಯ ಭಟ್ರಿಗೆ ಎಂತ ಹೇಳದು ಅಂತ ಗೊತ್ತಾಗ್ಲಿಲ್ಲ. ಸಂತೋಷ, ಹೆಚ್ಚಾಗಿ ಮಾತು ಹೊರಡ್ಲಿಲ್ಲ. ನಾಗವೇಣಮ್ಮ ಊರು- ನೆಂಟರಿಷ್ಟರ ಮನೆ ಬಿಟ್ಟು ಬೇರೆ ಎಲ್ಲೂ ಹೋದವ್ರಲ್ಲ. ಅವ್ರಿಗಂತೂ ಮಗ ಬಂದು ಹೀಗೆ ಹೇಳುವಾಗ ಸ್ವರ್ಗವೇ ಕೈಗೆ ಸಿಕ್ಕಿದ ಹಾಗೆ ಆಯ್ತು. ಕಣ್ಣೀರು ತಡೀಲಿಕ್ಕಾಗದೆ ಓಡಿ ಹೋಗಿ ದೇವ್ರಿಗೆ ದೀಪ ಹಚ್ಚಿದ್ರು. ಸುಬ್ರಾಯ ಭಟ್ರು ಘಾರದ ಫಸ್ಟ್ ಟ್ಯಾಂ ಅನ್ನುವ ಹಾಗೆ ಮಗ ಅನಿರುದ್ಧನನ್ನು ನೋಡಿ ನಕ್ರು. ''ಆಗ್ಲಿ ಮಗಾ... ತಿಂಗ್ಳಿಗೆ ಸಾವಿರಾರು ರೂಪಾಯಿ ದುಡಿಯುವ ಮಕ್ಳು ತಾವು ಮದ್ವೆ ಆಗ್ಬೇಕು, ಮನೆ ಕಟ್ಟಿಸ್ಬೇಕು, ಕಾರ್ ತಗೊಳ್ಬೇಕು ಅಂತೆಲ್ಲ ಕನ್ಸು ಕಾಣ್ತಾರೆ. ಅಪ್ಪ-ಅಮ್ಮನನ್ನು ತೀರ್ಥಯಾತ್ರೆಗೆ ಕರ್ಕೊಂಡೋಗ್ಬೇಕು ಅಂತ ಹೇಳುವವ್ರು ಲಕ್ಷಕ್ಕೆ ಒಬ್ರೂ ಸಿಗೂದಿಲ್ಲ. ಈಗ್ಲೇ ತಯಾರಿ ಸುರುಮಾಡ್ತೇನೆ'' ಅಂತ ಹೇಳಿದ್ರು.

ಹೊರಡುವ ದಿವ್ಸ, ''ಏ...ವ್ಯಾಸಾ...ಕಾಶಿ ಬದ್ರಿಗೆ ಹೊರಡ್ತಾ ಇದ್ದೇನೆ. ಕರ್ಕೊಂಡು ಹೋಗ್ತಾ ಇರುವವ ನನ್ನ ಮಗ... ಗೊತ್ತಾಯ್ತಾ... ಮಕ್ಳು ಇದ್ರೆ ಇಂಥವ್ರು ಇರ್ಬೇಕು. ಎಷ್ಟು ಇದ್ರೇನು ನಿಂಗೆ ಇಂಥ ಯೋಗ ಉಂಟನಾ...'' ಇನ್ನು ಎಂತೆಂತ ಹೇಳ್ಲಿಕ್ಕಿದ್ರೋ ಏನೋ ಅಷ್ಟು ಹೊತ್ತಿಗೆ ಮಗ, ''ಅಪಿಯ... ಯಾತ್ರೆಗೆ ಹೊರಡುವಾಗ ಎಂತಕ್ಕೆ ಪಾಪ ಕಟ್ಟಿಕೊಳ್ತೀರಿ ?'' ಅಂತ ಹೇಳಿದ್ರಿಂದ ಸುಮ್ಮನೆ ಆದ್ರು. ವ್ಯಾಸ ಭಟ್ರಿಗೆ ಸುಬ್ರಾಯನ ಮಾತು ಕೇಳಿ ಕುಂಡೆಗೆ ಮೆಣ್ಸು ನುರ್ದ ಹಾಗಾಯ್ತು. ಆದ್ರೆ ಅವ್ರಿಗೆ ಎಂತ ಹೇಳ್ಲಿಕ್ಕೂ ಉಪಾಯ ಇರ್ಲಿಲ್ಲ. ಅವ್ರಿಗೆ ನಾಲ್ಕು ಮಕ್ಳು. ಎರ್ಡು ಹೆಣ್ಣು ಎರ್ಡು ಗಂಡು. ಗಂಡು ಮಕ್ಳಲ್ಲಿ ಒಬ್ಬ ಪೆದ್ದ ಮತ್ತೊಬ್ಬ ಮೂಗ. ಹೆಣ್ಣು ಮಕ್ಳಲ್ಲಿ ಒಬ್ಳು ಮದ್ವೆ ಆಗಿ ಗಂಡ ಸಮ ಇಲ್ಲ ಅಂತ ಓಡಿ ಬಂದವ್ಳು. ಮತ್ತೊಬ್ಳಿಗೆ ಮದ್ವೆಯೇ ಆಗಿರ್ಲಿಲ್ಲ. ಹೆಂಡತಿಗೆ ಯಾವಾಗ್ಲೂ ಸೀಕು. ಸುಬ್ರಾಯ ಭಟ್ರಿಗೆ ಹಾಗಲ್ಲ. ಒಂದು ಗಂಡು. ಅವ ಇಂಜಿನಿಯರ್. ಅವ್ನಿಗಿಂತ ಸಣ್ಣವ್ಳು ಶಿವಮೊಗ್ಗಕ್ಕೆ ಮದ್ವೆ ಆಗಿ ಹೋಗಿದ್ದಾಳೆ. ಇಬ್ರು ಮಕ್ಳ ಚಿಂತೆ ಇರ್ಲಿಲ್ಲ. ವ್ಯಾಸ ಭಟ್ರು ಯಾತ್ರೆಗೆ ಹೊರ್ಟವ್ರನ್ನು ನೋಡಿ ತಣ್ಣಗೆ ಕೂತ್ರು.

ನರಸಿಂಹ ದೇವ್ರ ಅನುಗ್ರಹದಿಂದ ಕಾಶಿ ಯಾತ್ರೆ ಎಲ್ಲ ಸರಿಯಾಗಿ ಆಯ್ತು. ಬದ್ರಿಗೂ ಬಂದ್ರು. ''ಅನಿರುದ್ಧಾ ಬದ್ರಿಯಲ್ಲಿ ತಂದೆಗೆ ಶ್ರಾದ್ಧ ಹಾಕ್ಬೇಕು ಮಗಾ. ಇಲ್ಲಿ ಹಾಕಿದ್ರೆ ಅದ್ರಷ್ಟು ಪುಣ್ಯ ಮತ್ತೆಲ್ಲೂ ಸಿಗುದಿಲ್ಲಂತೆ'' ಅಂತ ಹೇಳಿದ ಸುಬ್ರಾಯ ಭಟ್ರು ಬದ್ರಿಯಲ್ಲಿ ಪಿತೃಕರ್ಮ ಮಾಡಿದ್ರು. ಪಿಂಡ ಹಾಕಿದ್ದನ್ನು ಕಡೆಯಲ್ಲಿ ನದಿಗೆ ಬಿಡ್ಲಿಕ್ಕೆ ಹೋಗುವಾಗ ಕಾಲು ಜಾರಿತು.

''ಅಪಿಯಾ ಜಾಗ್ರತೆ!'' ಅಂತ ಬೊಬ್ಬೆ ಹೊಡೀತಾ ಬಂದ ಅನಿರುದ್ಧ ಸುಬ್ರಾಯ ಭಟ್ರ ಕೈ ಹಿಡ್ದು ಮೇಲೆ ಎಳ್ದ, ಆದ್ರೆ ಅವ್ನ ಕಾಲು ಜಾರಿತು. ಕೈ ಸಡ್ಲಾಯ್ತು. ಅಲಕನಂದೆಯ ಪ್ರವಾಹ ಎಂತ ಹೇಳುದು ? ''ಮಗ!... ಅನಿರುದ್ಧಾ!!... ಅನಿರುದ್ಧಾ!!!...'' ಅಂತ ಬೊಬ್ಬೆ ಹೊಡೀತಾ ಇರುವಾಗ್ಲೇ ತೇಲಿ ಮುಳುಗಿ ತೇಲಿ ಮುಳುಗಿ ಅವ ದೂರ ದೂರ ದೂರ ಹೋಗ್ತಾ ಇದ್ದ.

ಒಂದು ದಿನ, ಎರ್ಡು ದಿನ, ಮೂರು ದಿನ ಕಾದ್ರು. ಊಹುಂ ಯಾರು ಒಳ್ಳೇ ಸುದ್ದಿ ಕೊಡ್ಲಿಲ್ಲ. ''ಅವ್ನ ಸತ್ತಿರುದು ಗ್ಯಾರಂಟಿ. ನಾವು ಎಲ್ಲ ಕಡೆ ಹುಡ್ಕಿ ಆಯ್ತು. ಏನೂ ಪ್ರಯೋಜನ ಇಲ್ಲ'' ಅಂದ್ರು ಪೊಲೀಸ್ರು. ಒಂದು ಕಡೆಯಲ್ಲಿ ಗಂಟೆ ಗಂಟೆಗೆ ಬೋಧ ತಪ್ಪಿ ಬೀಳ್ತಿದ್ದ ಹೆಂಡತಿ. ಇನ್ನೊಂದು ಕಡೆಯಲ್ಲಿ ಆಘಾತ. ಸುಬ್ರಾಯ ಭಟ್ರು ಊರಿಗೆ ವಾಪಾಸ್ ಬರುವಾಗ ಕಂಗಾಲಾಗಿ ಹೋಗಿದ್ರು.

ಊರಿಗೆ ಬಂದ ಮರು ದಿವ್ಸದಿಂದ ಡೈಲಿ ಬೇರೆ ಬೇರೆ ಊರುಗಳಿಂದ ಜನ ಬರ್ಲಿಕ್ಕೆ ಸುರುವಾಯ್ತು. ''ಪಾಪ... ಭಟ್ರಿಗೆ ಹೀಗೆ ಆಗ್ಬಾರ್ದಿತ್ತು.'' ''ಹೋದವ ಎಂಥಾ ಪುಣ್ಯಾತ್ಮ ಮಾರ್ರೆ! ಬದ್ರಿ ನಾರಾಯ್ಣನ ಸನ್ನಿಧಿಯಲ್ಲಿ ಪ್ರಾಣ ಹೋಗುದು ಅಂದ್ರೆ ಸಾಮಾನ್ಯವಾ ?'' ''ಅಲ್ಲ ಮಾರ್ರೆ ಸತ್ತಿದ್ದಾನೇಂತಾ ಯೆಂತ ಗ್ಯಾರಂಟಿ ? ಬದುಕಿ ಬಂದ್ರೂ ಬರ್ಬೌದು.'' ''ಅಲ್ಲ ಭಟ್ರೆ ನೀವು ಮಿಲ್ಟ್ರಿಯವ್ರಿಗೆ ಹೇಳ್ಲಿಲ್ವಾ ? ಹೇಳಿದ್ರೆ ಅವ್ರು ಹೆಲಿಕಾಪ್ಟರಿನಲ್ಲಿ ತಿರ್‍ಗಾಡಿ ನಿಮ್ಮ ಮಗ ಎಲ್ಲಿದ್ದಾನೇಂತ ಹುಡುಕ್ತಿದ್ರು... ನೀವೆಂತ ಹಾಗೇ ವಾಪಾಸ್ ಬಂದದ್ದು?'' ಹೀಗೆ ಬಂದವ್ರು ಪುಕುಳಿ ಬಾಯಿ ಇಲ್ಲದೆ ಮಾತಾಡ್ತಿದ್ರು. ಅಷ್ಟು ಹೊತ್ತಿಗೆ ಉಳ್ಳೂರು ನಾರಾಯ್ಣ ಉಡುಪ್ರು ಬಂದ್ರು. ಪ್ರಾಯದಲ್ಲಿ ಸುಬ್ರಾಯ ಭಟ್ರಿಗಿಂತ್ಲೂ ದೊಡ್ಡವ್ರು. ಉಡುಪಿಯ ಮಠಗಳ



ಸ್ವಾಮಿಗಳಿಗೆ ಪಾಠ ಹೇಳಿದವ್ರು. ಅವ್ರು ಬಂದದ್ದು ನೋಡಿ ಎಲ್ಲ ಸೈಲೆಂಟಾದ್ರು. ಉಡುಪ್ರು ಬಂದವ್ರೆ, ''ಸುಬ್ರಾಯ ಭಟ್ರೆ... ಆದದ್ದು ಕೇಳಿ ತುಂಬ ಬೇಜಾರಾಯ್ತು... ಯಾರಿಗೇ ಆಗ್ಲಿ ಇಂಥಾ ಕಷ್ಟ ಬರ್ಬಾರ್ದು. 'ಪುತ್ರ ಶೋಕಂ ನಿರಂತರಂ' ಅಂತ ಮಾತೇ ಉಂಟು. ಈಗ ಆದದ್ದು ಆಯ್ತು. ಅವ್ನಿಗೊಂದು ಗತಿ ಕಾಣಿಸುದು ಮುಖ್ಯ...'' ಅಂತ ಪೀಠಿಕೆ ಹಾಕಿದ್ರು.

''ಎಂತ ಉಡುಪ್ರೇ ನಿಮ್ಮ ಮಾತಿನ ಅರ್ಥ ?'' ಸುಬ್ರಾಯ ಭಟ್ರ ಪ್ರಶ್ನೆ. ''ಎಂತದೂ ಅಂದ್ರೆ... ನೋಡಿ, ಅವ ಹೋಗಿ ಎಷ್ಟು ದಿನ ಆಯ್ತು? ಒಂದು ವಾರ ಆಗ್ತಾ ಬಂತು ಅಲ್ವಾ ? ಅವ್ನ ಪ್ರೇತ ಅನಾಥವಾಗಿ ತಿರುಗ್ತಾ ಉಂಟು...''

''ಉಡುಪ್ರೇ!... ಮಗ ಅನಿರುದ್ಧ ಸತ್ತಿದ್ದಾನೇಂತ ಯಾವ ಬೋಳೀಮಗ ಹೇಳಿದ್ದು ನಿಮ್ಗೆ ? !''

ಉಡುಪ್ರು , ಅಲ್ಲಿದ್ದವ್ರು ಎಲ್ರೂ ಒಂದು ಸರ್ತಿ ಸ್ಟನ್ ಆದ್ರು. ಸುಬ್ರಾಯ ಭಟ್ರ ಬಾಯಲ್ಲಿ ಯಾವತ್ತೂ ಇಂಥ ಅಪದ್ಧ ಶಬ್ದ ಬಂದದ್ದೇ ಇಲ್ಲ. ಈಗ 'ಬೋಳೀಮಗ' ಎಂಬ ಶಬ್ದ! ಆದ್ರು ಉಡುಪ್ರು ಧೈರ್ಯ ತಂದುಕೊಂಡು, ''ನೋಡಿ ಭಟ್ರೆ... ಮಗನನ್ನು ಕಳ್ಕೊಂಡ ದುಃಖ ಎಂಥದ್ದು ಅಂತ ಇನ್ನೊಬ್ರಿಗೆ ಹೇಳಿದ್ರೆ ಅರ್ಥ ಆಗೊದಿಲ್ಲ. ಅವ್ನ ಬದುಕಿ

ಬರ್ಬೌದು ಅನ್ನುವ ಆಸೆ ನಿಮ್ಗೆ, ನಿಮ್ಮ ಹೆಣ್ತಿಗೆ ಇದ್ರೆ ಅದು ತಪ್ಪಲ್ಲ. ಆದ್ರೆ ನೀವೇ ಆಲೋಚನೆ ಮಾಡಿ. ನೀರಿನ ವ್ಯೊಲು ಜೋರಿತ್ತು ಅಂತ ನೀವೇ ಹೇಳ್ತೀರಿ. ಈಜ್ಲಿಕ್ಕ ಗೊತ್ತಿರ್ಲಿಲ್ಲ ಅವ್ನಿಗೆ ಅಂತ ಹೇಳ್ತೀರಿ. ರಕ್ತ ಗಟ್ಟಿಕಟ್ಟುವಷ್ಟು ತಂಪು ನೀರಲ್ಲಿ ವ್ಯೊಲಿಗ ಸಿಕ್ಕಿದವ ಬದುಕ್ಲಿಕ್ಕುಂಟಾ ? ಬರುವಾಗ ಸ್ವಾಮಿಗಳ ಹತ್ರ ಮಾತಾಡಿಕೊಂಡೇ ಬಂದಿದ್ದೇನೆ. ಅವ್ರಿಗೂ ತುಂಬ ಬೇಜಾರಾಗಿದೆ. ಆದ್ರೆ ಕ್ರಿಯೆ ಮಾಡದೆ ಬಿಡ್ಬಾರ್ದು ಅಂತ ಅವ್ರೂ ಹೇಳಿ ಕಳ್ಸಿದ್ದಾರೆ. ನೀವು ಹೂಂ ಅಂತ ಹೇಳಿ. ನಾನೇ ಮಠದಿಂದ ಪುರೋಹಿತ್ರನ್ನ ಕರ್ಸಿ ಒಂದು ಚೂರೂ ಲೋಪ ಬರ್ದ ಹಾಗೆ ಎಲ್ಲ ನಡ್ಸಿಕೊಡ್ತೇನೆ. ಇಷ್ಟು ತಿಳ್ಕೊಂಡವ್ರು ನೀವು. ಇನ್ನು ನಿಮ್ಗೆ ಬಿಟ್ಟದ್ದು'' ಅಂತ ಹೇಳಿದ್ರು. ಅಷ್ಟು ಹೊತ್ತಿಗೆ ನಾಗವೇಣಿಯಕ್ಕ ಹೊರಗೆ ಬಂದು, ''ಹೌದಾ... ನಂದೊಂದು ಮಾತುಂಟು... ಉಡುಪ್ರು ಹೇಳಿದ್ರಲ್ಲಿ ಎಂತ ತಪ್ಪೂ ಇಲ್ಲ. ಮದ್ವೆ ಆಗಿ ಇಷ್ಟು ವರ್ಷ ನಾನು ನಿಮ್ಹತ್ರ ಇಂಥದ್ದು ಮಾಡಿಕೊಡಿ ಅಂತ ಕೇಳ್ಳಿಲ್ಲ. ಸತ್ಯ ಹೇಳುದಾದ್ರೆ ಅವ್ನಿಗೆ ಹುಡ್ಗಿ ಹುಡ್ಕಿ ಮದ್ವೆ ಮಾಡ್ಬೇಕಾಗಿತ್ತು ಈಗ. ಅದು ಆಗ್ಲಿಲ್ಲ. ಅವ್ನ ಕ್ರಿಯೆ ಮಾಡಿಕೊಡ್ತೀರಾ ? ಇದೊಂದೇ ನಾನು ಕೇಳ್ತಾ ಇರುದು'' ಅಂತ ಹೇಳಿದವ್ರೇ ಓ ಅಂತ ಕೂಗಿದ್ರು. ಅಲ್ಲಿದ್ದವ್ರೆಲ್ಲ ಕಣ್ಣು ಒರ್ಸಿಕೊಂಡ್ರು. ಸುಬ್ರಾಯ ಭಟ್ರು ಕಷ್ಟದಿಂದ ಹೂಂ ಅಂದ್ರು.

ಉಡುಪ್ರ ನೇತೃತ್ವದಲ್ಲಿ ಅನಿರುದ್ಧನ ಧರ್ಮೋದಕ, ಸಪಿಂಡೀಕರಣ, ವೈಕುಂಠ ಸಮಾರಾಧನೆ ಎಲ್ಲ ಮಾಡ್ಸುದು ಅಂತ ನಿರ್ಣಯ ಆಯ್ತು. ಸುದ್ದಿ ಗೊತ್ತಾಗಿ ಭಟ್ರ ಮಗ್ಳು ಅರ್ಚನಾ, ಗಂಡ ಮಗುವಿನೊಟ್ಟಿಗೆ ಶಿವಮೊಗ್ಗದಿಂದ ಅಪ್ಪನ ಮನೆಗೆ ಬಂದ್ಲು. ಬಂದವ್ಳೆ, ''ಅಪಿಯ... ಅಣಿಯ ಹೋದ್ನಲ್ಲ ಅಪಿಯ... ಹೀಗೆ ಯಾಕೆ ಆಯ್ತು ಅಪಿಯ...'' ಅಂತ ಭಟ್ರನ್ನು ಕಂಡಾಗೆಲ್ಲ ಬೊಬ್ಬೆ ಹೊಡೀತಾ ಇರ್ತಿದ್ಲು. ಅವ್ಳ ಗಂಡ ನಾಗ್ರಾಜ ಶಿವಮೊಗ್ಗಾದಲ್ಲಿ ಒಂದು ಹೋಟ್ಲಿಟ್ಟಿದ್ದ. ವ್ಯಾಪಾರ ಚೆಂದ ಇತ್ತು. ಆದ್ರೆ ಎಂತ ಮಾಡುದು ? ನಾಗ್ರಾಜನಿಗೆ ಇಸ್ಪೀಟು, ಓ.ಸಿ. ಸಿಂಗಲ್ ನಂಬರ್ ಲಾಟ್ರಿ ಅಂತೆಲ್ಲ ಮೈತುಂಬ ಚಟ. ಹಾಗಾಗಿ ಎಲ್ಲ ನುಂಗಿಹಾಕಿ ಕವುಚಿ ಮಲಗಿದ್ದ. ಭಟ್ರಿಗೆ ದೇವಸ್ಥಾನದ ಹಿಂದೆ ಎರ್ಡು ಎಕ್ರೆ ತೆಂಗಿನ ತೋಟ, ನಾಲ್ಕು ಎಕ್ರೆ ಬೈಲು ಗದ್ದೆ ಎಲ್ಲ ಇತ್ತು. ಹೇಗೂ ಅಣಿಯ ಸತ್ತ. ಇನ್ನು ಇದೆಲ್ಲ ನಂಗೇ ಅಂತ ಅವ್ಳು ಲೆಕ್ಕ ಹಾಕಿದ್ಲು. ಗಂಡನಿಗೂ ಅದನ್ನೇ ಹೇಳಿಕೊಟ್ಳು. ಅದಕ್ಕೆ ಸರಿಯಾಗಿ ಬೊಜ್ಜದ ಹಿಂದಿನ ದಿನ ಅನಿರುದ್ಧ ಕೆಲ್ಸ ಮಾಡ್ತಿದ್ದ ಕಂಪೆನಿಯ ಪರವಾಗಿ ಒಬ್ರು ಬಂದು, ''ಅನಿರುದ್ಧನಿಗೆ ನಾವು ಒಂದು ವರ್ಷದ ಬೋನಸ್ ಕೊಡ್ಬೇಕಿತ್ತು. ಈಗ ಬೇಡ. ನೆಕ್ಸ್ಟ್ ಇಯರ್ ಮ್ಯಾರೇಜ್ ಆಗ್ತೇನೆ. ಆಗ ಡ್ರಾ ಮಾಡ್ಕೊಳ್ತೇನೆ ಅಂದಿದ್ದ. ಆದ್ರೆ ಈಗ ಹೀಗಾಗಿದೆ. ಸೋ ಸ್ಯಾಡ್. ತಗೊಳ್ಳಿ ಸಿಕ್ಸ್ಟೀ ಫೈವ್ ಥೌಸಂಡ್ ಕ್ಯಾಶ್ ಇದೆ'' ಅಂತ ಭಟ್ರತ್ರ ಕೊಡ್ಲಿಕ್ಕೆ ಬಂದ್ರು. ಆಗ ಅರ್ಚನಾ ಕೂಡ್ಲೆ ''ಅಯ್ಯೋ... ಅಪಿಯನಿಗೆ ಈಗ ಮಂಡೆ ಪೂರ ಬಿಂಗ್ರಿ ಆಗಿದೆ. ಅಣಿಯ ಹೋದ್ಮೇಲೆ ಕೂತ್ರೆ ನಿತ್ರೆ ಎಂತೆಂತದೋ ಮಾತಾಡ್ತಾರೆ. ನಿಮ್ಮ ದುಡ್ಡು ಅವ್ರಿಗೆ ಬೇಡ್ವೇ ಬೇಡ. ಬರೇ ಅವ್ನದ್ದೇ ಚಿಂತೆ'' ಅಂತ ಹೇಳಿದವ್ಳೆ ರಪಕ್ಕಂತ ಆ ಹಣ ತಕೊಂಡು ''ತಗೊಳ್ಳಿ ಇದನ್ನು ಜಾಗ್ರತೆಯಲ್ಲಿಡಿ'' ಅಂತ ಗಂಡನ ಕೈಗೆ ಕೊಟ್ಟು ಕಣ್ಣು ಹಾರ್ಸಿದ್ಲು. ಸುಬ್ರಾಯ ಭಟ್ರಿಗೆ ಮಗ್ಳು ಅಳಿಯನ ವಿಲೇವಾರಿ ಗೊತ್ತಾಯ್ತು. ಎಂತದೂ ಮಾತಾಡ್ಲಿಲ್ಲ.

ಮರುದಿವ್ಸ ಬೊಜ್ಜ. ಬಂದ ನೂರಿನ್ನೂರು ಜನ ಸೈಲೆಂಟಾಗಿ ಊಟ ಮಾಡ್ತಿದ್ರೆ ಅರ್ಚನಾ ಮಾತ್ರ ಸುಮ್ಮನೆ ಇರ್ಲಿಲ್ಲ. ''ಅಯ್ಯೋ ಅಣಿಯ ಇರ್ತಿದ್ರೆ ಈ ಕ್ಯಾ ಹೋಳಿಗೆ ಕಂಡ್ರೆ ಎಷ್ಟು ಖುಷಿ ಪಡ್ತಿದ್ದಾ? ಈ ಬಜ್ಜಿ ಅಂಬಡೆ ಎಷ್ಟು ಲ್ಯಾಕ್ಕಾಗಿದೆ... ಅವ್ನಿಗಿಷ್ಟ ಅಂತ ನಾನೇ ಹೇಳಿ ಮಾಡ್ಸಿದ್ದು... ಎಷ್ಟು ಲ್ಯಾಕ್ಕಾಗಿದೆ ಅಲ್ವಾ ? ಅಣಿಯನಿಗೆ ಶಾಂತಿ ಆಗಿರ್ಬೇಕು'' ಅಂತ ಆಚೆ ಈಚೆ ಕೂತ ಹೆಂಗಸ್ರತ್ರ ಹೇಳ್ತಾ ನಾಲ್ಕು ಹೋಳಿಗೆ ತಿಂದ್ಲು. ಊಟ ಎಲ್ಲ ಆಗಿ ಕೈ ತೊಳೀಲಿಕ್ಕೆ ಬ್ರಾಮಣ್ರು ಹೊರ್ಗೆ ಬಂದ್ರು. ಆಗ ವ್ಯಾಸ ಭಟ್ರು ಉಡುಪ್ರ ಹತ್ರ, ''ಏನು ಉಡುಪ್ರೇ... ಮುಗೀತಾ ಎಲ್ಲ? ನೋಡಿ ಸುಬ್ರಾಯನ ಗ್ರಾಚಾರ...ಯಾತ್ರೆ ಹೊರಡುವಾಗ ನನ್ನ ಹೊಟ್ಟೆ ಉರ್ಸಿ ಹೋದ. ಈಗ ನೋಡಿ ಹೇಗಾಯ್ತು ಅಂತ. ಶಾಪ ಉಡುಪ್ರೇ ಅದು !... ಮತ್ತೆಂತದೂ ಅಲ್ಲ ನರ್ಸಿಮ್ಮ ದೇವ್ರದ್ದೇ ಶಾಪ! ಅಲ್ಲ... ಊರಿನವ್ರಿಗೆಲ್ಲ ಭಾರೀ ಖಡಕ ಆಗಿ ಜ್ಯೋತಿಷ್ಯ ಹೇಳ್ತಿದ್ದ... ತನ್ನ ಮಗನಿಗೆ ಹೀಗೆ ಒಂದು ಕಂಟಕ ಉಂಟು... ಹೀಗೆ ಸಾಯ್ತಾನೆ ಅಂತ ಅವ್ನಿಗೆ ಗೊತ್ತಾಗ್ಲಿಲ್ವಾ ? ಉಡುಪ್ರೇ... ನಾನಂತೂ ಅವ್ನ ಹತ್ರ ಮಾತಾಡುದಿಲ್ಲ... ನೀವೇ ಕೇಳಿ ನನ್ನ ಪರವಾಗಿ... ಆಯ್ತಾ'' ಅಂತ ಗಟ್ಟಿಯಾಗಿ ಕೇಳಿ 'ಕ್ಕಕ್ಕಕ್ಕ' ಅಂತ ನೆಗಾಡಿದ್ರು. ಉಡುಪ್ರು ಒಂದು ಸರ್ತಿ ವ್ಯಾಸಭಟ್ರನ್ನು ಕೆಕ್ಕರಿಸಿ ನೋಡಿ ಗಡಾ ಒಳ್ಗೆ ಹೋದ್ರು. ಸುಬ್ರಾಯ ಭಟ್ರಿಗೆ ಎಲ್ಲ ಕೇಳಿತು. ಬಿರುಗಾಳಿ ಬಂದ ಹಾಗೆ ಮಾಳಿಗೆಯಿಂದ ಕೆಳ್ಗೆ ಇಳ್ದು ಬಂದ್ರು. ಕೈಯಲ್ಲಿ ಜ್ಯೋತಿಷ್ಯದ ಪುಸ್ತಕಗಳು, ಕವಡೆ, ಶ್ರೀಚಕ್ರದ ಚಿತ್ರ ಎಲ್ಲ ಇತ್ತು. ಮನೆಯಿಂದ ಹೊರ್ಗೆ ಬಂದು ಎಲ್ಲ ರಸ್ತೆಗೆ ಬಿಸಾಡಿದ್ರು. ಆಮೇಲೆ ''ಏ ವ್ಯಾಸ !...ಇಗಾ ಇವತ್ತಿಂದ...ಜ್ಯೋತಿಷ್ಯ ಹೇಳುದು ಬಿಟ್ಟೆ.. ನೀನೆ ಉದ್ಧಾರ ಆಗು ಅಯ್ಯಾ... ಅವತ್ತು ನಿಂಗೆ ನಾನು ಹೇಳ್ದೆ. ಇವತ್ತು ನೀನು ಮಾಡಿದ್ದೀ. ಒಂದು ದಿವ್ಸ ಎಲ್ರ ಎದ್ರಿಗೆ ನಾನು ನಿಂಗೆ ಬುದ್ಧಿ ಕಲಿಸ್ತೇನೆ !...'' ಅಂತ ಗರ್ಜಿಸಿದ್ರು. ವ್ಯಾಸ ಭಟ್ರು ಕೋಮಣ ಸರಿ ಮಾಡಿಕೊಂಡು ಒಳಗೆ ಓಡಿ ಹೋದ್ರೆ ಉಳ್ದವ್ರಿಗೆ ಸುಬ್ರಾಯ ಭಟ್ರನ್ನ [illegible] ಮಾಡುವ ಧೈರ್ಯ ಇರ್ಲಿಲ್ಲ. ಊಟಕ್ಕೆ ಬಂದ ಕೆಲವ್ರು, ''ಸುಬ್ರಾಯ ಭಟ್ರಿಗೆ ಏನು ಸುರುವಾಯ್ತಾ ? ಎಂತ ಕತೆ ?'' ಅಂತ ಮಾತಾಡಿಕೊಂಡ್ರು ಪಿಸಪಿಸ ಅಂತ.

ಇದೆಲ್ಲ ಆಗಿ ಒಂದು ವಾರದಲ್ಲಿ ನರ್ಸಿಮ್ಮ ದೇವ್ರ ತೇರು. ಎಲ್ಲೂರು ಮತ್ತು ಸುತ್ತಮುತ್ತದ ಊರಿನವ್ರು ಸುಬ್ರಾಯ ಭಟ್ರ ವಿಷಯ ಮರ್ತು ತೇರಿಗೆ ರೆಡಿಯಾಗ್ಲಿಕ್ಕೆ ಸುರುವಾದ್ರು. ಸುಬ್ರಾಯ ಭಟ್ರು ಮಾತ್ರ ಬೊಜ್ಜದ ದಿವ್ಸದಿಂದ ಮನೆಯಿಂದ ಹೊರ್ಗೆ ಬರ್ಲೇ ಇಲ್ಲ. ತೇರಿಗೆ ನಾಲ್ಕು ದಿನ ಉಂಟು ಅನ್ನುವಾಗ ದೇವ್ರನ್ನ ಮನೆ ಮನೆಗೆ ಕಟ್ಟೆ ಪೂಜೆಗೆ ತರ್ತಾರೆ. ಹಾಗೆಯೇ ಫಸ್ಟ್ ದಿವ್ಸ ದೇವಸ್ಥಾನದ ಮುಂದಿನ ರಸ್ತೆಯಲ್ಲಿ ನರ್ಸಿಮ್ಮ ದೇವ್ರನ್ನು ಹೊತ್ಕೊಂಡು ವ್ಯಾಸ ಭಟ್ರು ಹೊರಟ್ರು. ವಾದ್ಯದವ್ರು, ನಾಲ್ಕೈದು ಭಟ್ರುಗಳು, ದೊಂದಿ, ಗ್ಯಾಸ್‌ಲೈಟು ಹಿಡ್ಕೊಂಡವ್ರು- ಹೀಗೆ ಒಟ್ರಾಶಿ ಹತ್ತು ಹದ್ನೈದು ಜನ ಇದ್ರು. ಮನೆ ಮುಂದೆ ದೇವ್ರು ಬಂದಾಗ ನೈವೇದ್ಯ ಮಾಡ್ಸಿ ಆರತಿ ಮಾಡಿಸ್ಬೇಕು ಮನೆಯ ಯಜಮಾನ್ರು. ಇದು ಪದ್ಧತಿ. ನಾಲ್ಕೈದು ಮನೆ ದಾಟಿದ್ಮೇಲೆ ಸುಬ್ರಾಯ ಭಟ್ರ ಮನೆ. ಅವ್ರ ಮನೆಯಲ್ಲಿ ಎಂತ ಸುದ್ದಿಯೂ ಇಲ್ಲ. ಬಾಗಿಲು ಓಪನ್ ಮಾಡ್ಲಿಲ್ಲ. ರಂಗೋಲಿ ಹಾಕ್ಲಿಲ್ಲ ಎಂತದೂ ಇಲ್ಲ. ದೇವ್ರನ್ನು ಹೊತ್ತು ತಂದ ಟೀಂನಲ್ಲಿ ಇದ್ದವ್ರು, ''ಸುಬ್ರಾಯ ಭಟ್ರೇ !... ಸುಬ್ರಾಯ ಭಟ್ರೇ !...'' ಅಂತ ಕರ್ದ್ರು. ಸುದ್ದಿ ಇಲ್ಲ. ಕಡೆಗೆ ಒಬ್ಬ ಬಾಗ್ಲು ಬಡ್ದ. ಅಷ್ಟು ಹೊತ್ತಿಗೆ ಸುಬ್ರಾಯ ಭಟ್ರು ಬಂದು ಬಾಗ್ಲು ತೆರ್ದ್ರು. ಪ್ಯಾಂಟ್ ಶರ್ಟು, ಕೈಯಲ್ಲಿ ಸಿಗ್ರೇಟು ! ನರ್ಸಿಮ್ಮ ದೇವ್ರ ಸೈತ ಅಲ್ಲಿದ್ದ ಎಲ್ರೂ ಸುಬ್ರಾಯ ಭಟ್ರನ್ನು ನೋಡಿ ಒಮ್ಮೆ ಸ್ಟನ್ ಆದ್ರು. ''ಎಂತದು... ಯಾರು ಕರ್ದದ್ದು? ಹೇಳಿ... ನಂಗೆ ಟೈಮಿಲ್ಲ.''

''ಅಲ್ಲ... ಕಟ್ಟೆ ಪೂಜೆಗೆ ದೇವ್ರು ಬಂದಿದ್ದಾರೆ... ಪೂಜೆಗೆ ವ್ಯವಸ್ಥೆ...'' ಒಬ್ಬ ಎಂಜಲು ನುಂಗಿಕೊಂಡು ಕೇಳಿದ. ಭಟ್ರು ಒಂದು ದಮ್ಮು ಸಿಗ್ರೇಟು ಎಳ್ದ್ರು. ವ್ಯಾಸ ಭಟ್ರ ಹತ್ರ ಹೋದ್ರು. ಪುಸುಕ್ಕಂತ ಅವ್ರ ಮುಖದ ಮೇಲೆ ಹೊಗೆ ಬಿಟ್ರು. ''ತಗೊಳ್ಳಿ ಇದು ಧೂಪ !'' ಅಂದ್ರು. ''ಸುಬ್ರಾಯ ಭಟ್ರೆ !... ನಿಮ್ಗೆ ಮಂಡೆ ಸರಿಯೇ ಇಲ್ವಾ... ಮನೆ ಬಾಗ್ಲಿಗೆ ಬಂದ ದೇವ್ರಿಗೆ ಇನ್ಸಲ್ಟ್ ಮಾಡ್ತೀರಿ... ರೌರವ ನರಕಕ್ಕೆ ಹೋಗ್ತೀರಿ !'' ಅಲ್ಲಿದ್ದವ್ರು ಒಂದಿಬ್ರು ಗರ್ಜಿಸಿದ್ರು. ಭಟ್ರು ಕಿಟಿಕಿಟಿ ಅಂತ ನಕ್ರು. ''ನಡೀರಿ... ಈ ಪಿರ್ಕಿ ಭಟ್ರತ್ರ ಎಂತ ಮಾತು ?'' ಮತ್ತೊಬ್ಬ ಹೇಳಿದ. ''ಹೌದು... ನಾನು ಪಿರ್ಕಿ...ದೊಡ್ಡ ಪಿರ್ಕಿ...ಹೋಗಿ ನೀವೂ ಬೇಡ... ನಿಮ್ಮ ದೇವ್ರೂ ಬೇಡ... ಆದ್ರೆ ಈ ದೇವ್ರನ್ನು ಹೊತ್ತವ ಇದ್ದಾನಲ್ಲಾ? ವ್ಯಾಸ ಅವ್ನಿಗೆ ಇವತ್ತು ನನ್ನ ಪೂಜೆ ಸ್ಟಾರ್ಟ್ ಆಗಿದೆ. ಮಾಪೂಜೆ ನಾಡ್ದು ತೇರಿನ ದಿವ್ಸ ಮಾಡ್ತೇನೆ'' ಅಂದ್ರು.

ಈ ಸುದ್ದಿಗೆ ಕೈಕಾಲು ಕೂಡಿತು. ''ಸುಬ್ರಾಯ ಭಟ್ರು ಬಿಂಗ್ರಿ ಆಗಿದ್ದಾರಂತೆ'' ಅಂತ ಎಲ್ರೂ ಮಾತಾಡ್ತಾ ಮಾತಾಡ್ತಾ ತಿಂಡಿ ತಿಂದ್ರು, ಊಟ ಮಾಡಿದ್ರು, ಮಲ್ಗಿದ್ರು. ಹೀಗೆ ಎಲ್ಲ ಆಯ್ತು. ತೇರಿನ ದಿನ ಬಂತು.

### ೪. ಮೆಟ್ಟಿಲುಗಳ ಏರಿ ಎಲ್ಲ ಬಂಧ ಹರಿದು

''ಅಪಿಯ... ಬೊಜ್ಜ ಕಳ್ದು ಒಂದು ವಾರ ಆಯ್ತು... ಎಂತ ನಿಮ್ಮ ವೇಷ ಇದು ?... ನಂಗೆ ಊರಲ್ಲಿ ಮಂಡೆ ಎತ್ತಿ ತಿರ್ಗಾಡ್ಲಿಕ್ಕೆ ಆಗುದಿಲ್ಲ ಗೊತ್ತುಂಟಾ ? ಎಲ್ರೂ ನಿಮ್ಮನ್ನು ಬಿಂಗ್ರಿ ಭಟ್ರು ಅಂತ ಕರೀತಾ ಇದ್ದಾರೆ. ಇಲ್ಲಿರುದು ಎಲ್ಲ ಮಾರಿ ಶಿವಮೊಗ್ಗಕ್ಕೆ ಬನ್ನಿ ಅಂದ್ರೆ ಅದೂ ಕೇಳುದಿಲ್ಲ... ಅಮ್ಮ ನೋಡಿದ್ರೆ ಹಾಸಿಗೆ ಬಿಟ್ಟು ಇಳಿಯದೇ ಇಲ್ಲ... ಎಂತಕ್ಕೆ ಅಪಿಯ... ಇಷ್ಟು ಹಟ ಮಾಡ್ತೀರಿ ? ಅಣಿಯ ಹೋದ್ಮೇಲೆ ನಿಮ್ಗೆ ನಾನೇ ಅಲ್ವಾ ದಿಕ್ಕು ? ಎಲ್ಲ ಆಸ್ತಿ ಇವ್ರ ಹೆಸ್ರಿಗೆ ಬರ್ದಿಡಿ... ನಿಮ್ಗೆ ಬಿಂಗ್ರಿ ಅಂತ ಗೊತ್ತಾಗೆ ನಾಳೆ ಇನ್ನೆಂತದಾದ್ರೂ ರಾಮಾಯ್ಣ ಆದೀತು... ಇವ್ರ ಹೆಸ್ರಿಗೆ ಬೇಡಾಂತಾದ್ರೆ ನನ್ನ ಹೆಸ್ರಿಗೆ ಅದೂ ಬೇಡಾಂತಾದ್ರೆ ನನ್ನ ಮಗ್ನ ಹೆಸ್ರಿಗಾದ್ರೂ ಬರ್ದಿಡಿ. ಇಲ್ಲಾಂತಾದ್ರೆ ಮಾರಿ ಹಣವನ್ನು ನನ್ನ ನಿಮ್ಮ ಜೋಯಿಂಟ ಅಕೌಂಟಲ್ಲಾದ್ರು ಇಡುವಾ.'' ಅರ್ಚನಾ ಹೇಳ್ತಾನೇ ಇದ್ಲು. ಭಟ್ರು ಚಾವಡಿಯಲ್ಲಿ ಕೂತ್ಕೊಂಡು ಸಿಗ್ರೇಟು ಎಳೀತಾನೇ ಇದ್ರು.

''ಹೌದು ಮಾವ... ಇವ್ಳು ಹೇಳುದು ಸರಿ... ನಂಗೂ ಬಿಸಿನೆಸ್ ಇಂಪ್ರೂವ್ ಮಾಡ್ಲಿಕ್ಕೆ ಸಾಯ ಆಗ್ತಿತ್ತು...'' ನಾಗ್ರಾಜ ಹಲ್ಲು ತೋರ್ಸಿದ.

''ನಿಮ್ಗೆ ಯಾಕೆ ಕೊಡ್ಬೇಕು ? ನೀನು ನನ್ನ ಮಗ್ಳೇ ಅಲ್ಲ!''

''ಎಂತದೂ... ನಾನು ನಿಮ್ಮ ಮಗ್ಳಲ್ವಾ ? ಅಯ್ಯೋ ಎಂತ ಆಗಿದೆ ಅಪಿಯ ನಿಮ್ಗೆ... ಅಯ್ಯೋ ?''

''ಹೌದು... ನೀನು ಯಾವತ್ತು ಬೊಜ್ಜದ ದಿವ್ಸ ನಾಲ್ಕು ಕ್ಯಾ ಹೋಳಿಗೆ ತಿಂದ್ಯೋ ಅವತ್ತೇ ಗೊತ್ತಾಯ್ತು ನೀನು ರಾಕ್ಷಸ ಜಾತಿಯವ್ಳು ಅಂತ... ಏ ನಾಗ್ರಾಜ... ಸರಿಯಾಗಿ ನಾಲ್ಕು ಪಾವಣೆ ಇಟ್ಕೊಳ್ಳಿಕ್ಕೆ ಗೊತ್ತಿಲ್ಲದವ ನೀನು... ನಿಂಗೆಂತದಾ ಆಸ್ತಿ ಕೊಡುದು ನಾನು... ಕೊಟ್ರೇ ಎರ್ಡೇ ಘಳಿಗೆಯಲ್ಲಿ ಇಸ್ಪೀಟಿಗೆ ಹಾಕ್ತಿ... ನಿನ್ನ ಸುದ್ದಿ ಗೊತ್ತಿಲ್ಲಾಂತ ತಿಳೀಬೇಡ ಆಯ್ತಾ.''

''ಅಪಿಯಾ !... ನೀವು ಆಸ್ತಿ ನನ್ನ ಹೆಸ್ರಿಗೆ ಬರೀಲೇ ಬೇಕು.''

''ಬರಿಯೂದಿಲ್ಲ, ಎಂತ ಮಾಡ್ತೀ ?''

''ಎಂತ ಮಾಡುದಾ ?... ಓಯ್ ತನ್ನಿ ಆ ಕಾಗದ ಪತ್ರ. ನೀವು ಕೈಗಟ್ಟಿ ಹಿಡ್ಕೊಳ್ಳಿ ನಾನು ಸೈನ್ ಮಾಡಿಸ್ತೇನೆ... ಸಾಯ್ಲಿಕ್ಕೆ ಬಿದ್ದ ಮುದುಕನಿಗೂ ಎಷ್ಟು ಹಾಂಕಾರಾಂತ !'' ಅಂತ ಅರ್ಚನಾ ಹೇಳೂದ್ರೊಳಗೆ ನಾಗ್ರಾಜ ಭಟ್ರನ್ನು ಗಟ್ಟಿ ಹಿಡ್ಕೊಂಡಿದ್ದ.

''ಏ... ಬೋಳೀಮಗ... ಬಿಡಾ !... ಬಿಡಾ... ಬ್ಯಾವರ್ಷಿ !'' ಅಂತ ಕೈ ಕೊಡವಿ ಭಟ್ರು ಬಾಗಿಲು ತೆಗ್ದು ಬೀದಿಗೆ ಬಂದ್ರು. ಬೆನ್ನಿಗೆ ಪೇಪರ್. ಪೆನ್ನು ಹಿಡ್ಕೊಂಡು ಮಗ್ಳು ಅಳಿಯ ಬಂದ್ರು. ''ಅಪಿಯಾ ನಿಲ್ಲಿ, ಮಾವ ನಿಲ್ಲಿ'' ಅಂತ ಅವ್ರು ಕರೀತಾ ಇದ್ರು.

ಇಷ್ಟೆಲ್ಲ ಆಗುವಾಗ ಮಧ್ಯಾಹ್ನ ಹನ್ನೆರಡೂವರೆ ಆಗಿತ್ತು. ತೇರಿನ ಬೀದಿಯಲ್ಲಿ ಕಂಡಾಬಟ್ಟೆ ಜನ. ನರ್ಸಿಮ್ಮದೇವ್ರ ರಥಾರ್ಣೆ ನೋಡ್ಳಿಕ್ಕೆ ಜನ ನಿಂತಿದ್ರು. ವ್ಯಾಸ ಭಟ್ರು ದೇವ್ರನ್ನು ಹೊತ್ಕೊಂಡು ತೇರಿನ ಮುಂದೆ ಹಿಂದೆ ಓಡ್ತಾ ಇದ್ರು. ಬ್ಯಾಂಡು, ವಾದ್ಯ, ಗರ್ನಾಲು ಗಲಾಟೆಯೋ ಗಲಾಟೆ. ''ಲಕ್ಷ್ಮೀನರಸಿಮ್ಮ ದೇವರ ಪಾದಾರವಿಂದಕ್ಕೆ ಗೋವಿಂದಾ !'' ''ನರಸಿಮ್ಮ ದೇವ್ರ ಪಾದಕ್ಕೆ ಗೋವಿಂದಾನಿ ಗೋವಿಂದ !'' ಮೈಕಿನಲ್ಲಿ ಘೋಷಣೆ ಬರ್ತಿದ್ದ ಹಾಗೆ ಸೇರಿದ್ದವ್ರೆಲ್ಲ ಹಾಗೇ ಬೊಬ್ಬೆ ಹೊಡೀತಿದ್ರು. ವ್ಯಾಸ ಭಟ್ರು ಒಂದು ಮೆಟ್ಲು ಹತ್ತುದು ವಾಪಸ್ ಹೋಗುದು ಎರ್ಡು ಮೆಟ್ಲು ಹತ್ತುದು ವಾಪಾಸ್ ಹೋಗುದು ಮಾಡ್ತಿದ್ರು. ಈ ಗಲಾಟೆಯ ಮಧ್ಯೆ ಸುಬ್ರಾಯ ಭಟ್ರು ಕ್ರಾಪು ತಲೆ ಪ್ಯಾಂಟ್ ಶರ್ಟಲ್ಲಿ ಬರುದನ್ನು ನೋಡಿದ ಕೆಲವ್ರಿಗೆ ಫ್ರೀ ಎಂಟ್ರಟೈನ್‌ಮೆಂಟ್ ಸಿಕ್ಕಿತು. ಎಲ್ರೂ, ''ಬಿಂಗ್ರಿ ಭಟ್ರು ಬಿಂಗ್ರಿ ಭಟ್ರು'' ಅಂತ ತೋರಿಸ್ಲಿಕ್ಕೆ ಸುರು ಮಾಡಿದ್ರು. ''ಪಾಪ... ಮಗ್ಳು ಅಳಿಯನ ಕಂಟ್ರೋಲಿಗೂ ಸಿಗ್ತಾ ಇಲ್ಲ'' ಅಂತ ಹಿಂದೆ ಬರ್ತಿದ್ದ ಮಗ್ಳು ಅಳಿಯನನ್ನು ನೋಡಿ ಕೆಲವ್ರು ಹೇಳ್ತಿದ್ರು. ಕೆಲವ್ರಿಗೆ ಸುಬ್ರಾಯ ಭಟ್ರು ಎಲ್ಲಿ ಹೋಗ್ತಾರೆ ಅಂತ ನೋಡುವ ಕುತೂಹಲ. ಭಟ್ರು ಬೀಸ ಬೀಸ ನಡೀತಾ ಕೊರಗರು ಡೋಲು ಬಡೀತಾ ಇದ್ದ ಜಾಗಕ್ಕೆ ಹೋದ್ರು. ''ಇಸ್ಸಿ!... ಭಟ್ರು ಕೊರಗ್ರ ಹತ್ರ ಎಂತಕ್ಕೆ ಹೋದದ್ದು ?...'' ''ಬಿಂಗ್ರಿ ಅಂದ್ರೆ ಶತ ಬಿಂಗ್ರಿಯೇ ಮಾರ್ರೆ ಇದು.''

ಕೊರಗ್ರಿಗೆ ಭಟ್ರನ್ನು ಕಂಡು ಗಾಬ್ರಿಯಾಯ್ತು. ''ಚನಿಯಾ... ನಿನ್ನ ಮಗ ಎಲ್ಲಿ?'' ಅಂತ ಕೇಳಿದ್ರು. ''ಓ... ಅಲ್ಲಿ... ಯಾಕೆ ಭಟ್ರೆ ?'' ಚನಿಯ ಗಾಬ್ರಿಯಿಂದ ಕೇಳಿದ. ''ಬೇಕು... ಕೆಲ್ಸ ಉಂಟು'' ಅಂತ ಹೇಳಿದವ್ರೆ ಕೊಳಲು ಊದುತ್ತಾ ನಿಂತಿದ್ದ ಎಂಟು ವರ್ಷದ ಕರಿಯನ ಕೈ ಹಿಡ್ಕೊಂಡು ಬೀಸ ಬೀಸ ರಥದ ಹತ್ರ ಹೋದ್ರು. ಕರಿಯ ಕಂಗಾಲಾಗಿ ಕೂಗ್ಲಿಕ್ಕೆ ಸುರು ಮಾಡಿದ. ''ಅಪಿಯಾ... ಎಂತದಿದು ಮರ್ರ್ಲ... ಕೊರಗನ ಕೈ ಹಿಡ್ಕೊಂಡು... ಬಿಡಿ... ಬಿಡಿ... ಇಶ್ಶಿ !... ಮೈಲಿಗೆ ಮೈಲಿಗೆ !'' ಅಂತ ಮಗ್ಳು, ''ಮಾವ... ಆ ಕೊರಗನ ಕೈ ಬಿಡ್ತೀರಾ ? ನಿಮ್ಮ ಕೈ ಕತ್ತರಿಸ್ಬೇಕಾ ? !'' ಅಂತ ಅಳಿಯ ಬೊಬ್ಬೆ ಹೊಡೀತಿದ್ರು.

''ಭಟ್ರೇ... ಭಟ್ರೇ... ಜಾತಿ ಕೆಡಿಸ್ಬೇಡಿ... ನೀವೂ ಕೆಡ್ಬೇಡಿ... ದಮ್ಮಯ್ಯ...'' ಅಂತ ಚನಿಯ ಗಾಬ್ರಿಯಿಂದ ಹೇಳಿದ. ಆದ್ರೂ ಭಟ್ರು ಕ್ಯಾರೆ ಮಾಡ್ಲಿಲ್ಲ. ''ಚನಿಯಾ... ನಾನು ಯಾತ್ರೆಗೆ ಹೊರ್ಡುವ ಮೊದ್ಲು ನನ್ನ ಹತ್ರ ಬಂದು ಮಗ್ನನ್ನು ಓದಿಸ್ಲಿಕ್ಕೆ ಸಾಯ ಮಾಡಿ ಅಂತ ಕೇಳಿದ್ದಿ ಅಲ್ವಾ ? ಬಾ ಈಗ ತೋರಿಸ್ತೇನೆ'' ಅಂತ ಹೇಳಿದವ್ರೆ ರಥದ ಎದ್ರಿಗೆ ಕರಿಯನ ಕೈ ಹಿಡ್ಕೊಂಡು ಬೀಸ ಬೀಸ ಹೋದ್ರು.

ನರ್ಸಿಮ್ಮ ದೇವ್ರ ರಥಾರ್ಣೆ ಜೋರಲ್ಲಿ ನಡೀತಿತ್ತು. ವ್ಯಾಸ ಭಟ್ರು ಮೆಟ್ಲು ಹತ್ತಿ ಇಳ್ದು ಕುಣೀತಾ ಇದ್ರು. ''ಗೋವಿಂದಾನಿ... ಗೋವಿಂದಾ... ನರ್ಸಿಮ್ಮ ದೇವ್ರ ಪಾದಕ್ಕೆ ಗೋವಿಂದಾ'' ಎಲ್ಲ ಬೊಬ್ಬೆ ಹೊಡೀತಿದ್ರು. ಇನ್ನೇನು ರಥಾರ್ಣೆ ಆಗ್ತದೆ ಅನ್ನುವ ಸಂಕೇತವಾಗಿ ಕದೋಣಿ ಸಿಡಿಸಿದ್ರು. ನರ್ಸಿಮ್ಮದೇವ್ರು ದೂರದಿಂದ ಓಡಿ ಬಂದ್ರು. ಬರ್ತಾ ಇರುವಾಗ್ಲೆ ಸುಬ್ರಾಯ ಭಟ್ರು ದೇವ್ರನ್ನ ಓವರ್‌ಟೇಕ್ ಮಾಡಿ ಕರಿಯನ ಕೈ ಹಿಡ್ಕೊಂಡು ರಥ ಹತ್ತಿ ಒಳಗೆ ಹೋದ್ರು ! ಒಂದು ಸರ್ತಿ ಎಲ್ಲ 'ಹೋ !' ಅಂದ್ರು. ''ಗೋವಿಂದಾ !'' ಅಂತ ಹೇಳ್ಳಿಕ್ಕೆ ಬಾಯಿ ತೆರ್ದವ್ರು ಹಾಗೆಯೇ ನಿಂತುಬಿಟ್ರು. ಬ್ಯಾಂಡು ವಾದ್ಯ ಎಲ್ಲ ಕೈದಾಯ್ತು. ದೇವ್ರೂ ಕಂಗಾಲಾಗಿ ನಿಂತುಬಿಟ್ರು.

ಸುಬ್ರಾಯ ಭಟ್ರು, ''ಏ... ವ್ಯಾಸಾ ಹೇಗೆ ಬುದ್ಧಿ ಕಲ್ಸಿದೆ ನಿಂಗೆ ? ಈಗಾದ್ರೂ ಗೊತ್ತಾಯ್ತಾ ? ಏ... ರಂಡೇ... ನಿಂಗೆ ಆಸ್ತಿ ಬೇಕಾ... ನಾನು ಈ ಕರಿಯನ ಹೆಸ್ರಿಗೆ ಬರೀತೇನೆ... ಹೋಗಿ... ನೀವೆಲ್ಲಾ ಹಾಳಾಗಿ ಹೋಗಿ... ಇವತ್ತಿಂದ ಇವ್ನೇ ನನ್ನ ಮಗ...'' ಅಂತ ಹೇಳಿದವ್ರೆ ಕರಿಯನನ್ನು ಹೆಗ್ಲ ಮೇಲೆ ಕೂತ್ಕೊಳ್ಳಿಸಿ ರಥದ ಒಳಗೆ ಕುಣೀಲಿಕ್ಕೆ ಸುರು ಮಾಡಿದ್ರು.

ವ್ಯಾಸ ಭಟ್ರು ಪೊಲೀಸ್ ಕಂಪ್ಲೇಂಟ್ ಕೊಡುದಾ, ಬ್ರಮ್ಮ ಕಲಶ ಮಾಡಿಸುದಾ, ಅಂತ ಯೋಚನೆ ಮಾಡ್ಲಿಕ್ಕೆ ಸುರು ಮಾಡಿದ್ರು !


ಪಿ. ಬಿ. ಪ್ರಸನ್ನ
ಕನ್ನಡ ಹಿರಿಯ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಪದವಿ ಕಾಲೇಜು, ಶಿರಸಿ, ಉತ್ತರ ಕನ್ನಡ - ೫೮೧ ೪೦೧

ಡಾ॥ ಡಿ. ಎಂ. ನಂಜುಂಡಪ್ಪ ಸಮಿತಿ ಪ್ರಾದೇಶಿಕ ಅಸಮಾನತೆ ಕುರಿತು ಸಲ್ಲಿಸಿದ್ದ ವರದಿಯಲ್ಲಿನ ಶಿಫಾರಸುಗಳು ಏನಾಗಿವೆ ? ಈ ಕುರಿತು ಸರಕಾರಗಳು ಹಾಗೂ ಮಂತ್ರಿ ಮಹೋದಯರು ಈವರೆಗೂ ಚಕಾರವೆತ್ತಿಲ್ಲ. ಸರಕಾರಗಳು ಪ್ರಾದೇಶಿಕ ಅಸಮಾನತೆಯನ್ನು ಗಂಭೀರವಾಗಿ ಪರಿಗಣಿಸಿಲ್ಲ ಎಂಬುದಕ್ಕೆ ಇದು ಸಾಕ್ಷಿ ಎನ್ನಬಹುದೆ ? ಸಮಿತಿ ವರದಿ ಸಲ್ಲಿಸಿ ವರ್ಷಗಳು ಕಳೆದರೂ ಪ್ರಾದೇಶಿಕ ಅಭಿವೃದ್ಧಿ ನೀತಿಯೊಂದನ್ನು ರೂಪಿಸಲು ಸರ್ಕಾರಕ್ಕೆ ಸಾಧ್ಯವಾಗದಿರುವುದು ಏನನ್ನು ಸೂಚಿಸುತ್ತದೆ ?

# ಪ್ರಾದೇಶಿಕ ಅಸಮಾನತೆ ಮತ್ತು ಡಾ॥ ಡಿ. ಎಂ. ನಂಜುಂಡಪ್ಪ ಸಮಿತಿ ವರದಿ

**■ ಡಾ॥ ಟಿ. ಆರ್. ಚಂದ್ರಶೇಖರ**

### ಪ್ರಸ್ತಾವನೆ

ಕರ್ನಾಟಕ ರಾಜ್ಯದಲ್ಲಿ ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆಯು ತೀವ್ರವಾಗಿರುವುದನ್ನು ಅನೇಕ ಅಧ್ಯಯನಗಳು ಹಾಗೂ ವರದಿಗಳು ದೃಢಪಡಿಸಿವೆ. ಈ ದಿಸೆಯಲ್ಲಿ ಸರ್ಕಾರವು ೨೦೦೦ದಲ್ಲಿ ನೇಮಿಸಿದ್ದ ಡಾ॥ ಡಿ. ಎಮ್. ನಂಜುಂಡಪ್ಪ ಸಮಿತಿ ವರದಿಯು ವಿಸ್ತೃತ ರೂಪದಲ್ಲಿ ಪ್ರಾದೇಶಿಕ ಅಸಮಾನತೆಯನ್ನು ಮಾಪನಮಾಡಿ ಅದರ ತೀವ್ರತೆಯನ್ನು ತೋರಿಸಿಕೊಟ್ಟಿತು. ಅದಕ್ಕಾಗಿ ಸಮಿತಿಯು ಐದು ವಲಯಗಳಿಗೆ ಸಂಬಂಧಿಸಿದ ೩೫ ಸೂಚಿಗಳನ್ನು ಒಳಗೊಂಡ 'ಸಂಯುಕ್ತ ಸಮಗ್ರ ಅಭಿವೃದ್ಧಿ ಸೂಚ್ಯಂಕ'ವೆಂಬ ಮಾಪನವನ್ನು ಬಳಸಿತು. ಅದು ಗುರುತಿಸಿದ್ದ ೧೧೪ ಹಿಂದುಳಿದ ತಾಲ್ಲೂಕುಗಳ ಅಭಿವೃದ್ಧಿಗಾಗಿ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯೊಂದನ್ನು ಶಿಫಾರಸ್ಸು ಮಾಡಿತ್ತು. ಇದರ ಜೊತೆಗೆ ಅದು ಅನೇಕ ಇತರೆ ಶಿಫಾರಸ್ಸುಗಳನ್ನು ಮಾಡಿತ್ತು. ಆದರೆ, ಸರ್ಕಾರಗಳು ಡಾ॥ ಡಿ.ಎಮ್.ನಂಜುಂಡಪ್ಪ ಸಮಿತಿ ವರದಿಯನ್ನು ಕೇವಲ ೮ ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಗೆ ಮೊಟಕು ಗೊಳಿಸಿ ಅದರ ಉಳಿದ ಶಿಫಾರಸ್ಸುಗಳನ್ನು ಮೂಲೆಗುಂಪು ಮಾಡಿವೆ. ಉದಾಹರಣೆಗೆ, ಸರ್ಕಾರವು ಮೊದಲು ತನ್ನ ಪ್ರಾದೇಶಿಕ ಅಭಿವೃದ್ಧಿ ನೀತಿಯನ್ನು ಪ್ರಕಟಿಸಬೇಕೆಂದು ಸಮಿತಿಯು ಶಿಫಾರಸ್ಸು ಮಾಡಿತ್ತು. ಇದರ ಬಗ್ಗೆ ಯಾವ ಸರ್ಕಾರವಾಗಲಿ ಅಥವಾ ಮಂತ್ರಿ ಮಹೋದಯರಾಗಲಿ ಇದುವರೆವಿಗೂ ಚಕಾರವೆತ್ತಿಲ್ಲ. ಅಂತಹ ನೀತಿಯೊಂದರ ಅಗತ್ಯವನ್ನು ಸರ್ಕಾರಗಳು ಮನಗಂಡಿಲ್ಲವೆಂಬುದು ಅವುಗಳು ಪ್ರಾದೇಶಿಕ ಅಸಮಾನತೆಯನ್ನು ಗಂಭೀರವಾಗಿ ಪರಿಗಣಿಸಿಲ್ಲವೆಂಬುದಕ್ಕೆ ಅಪ್ಪಟ ಸಾಕ್ಷಿಯಾಗಿದೆ. ಸಮಿತಿಯು ತನ್ನ ವರದಿಯನ್ನು ಸಲ್ಲಿಸಿ ಆರು ವರ್ಷಗಳು ಕಳೆದರೂ ಸರ್ಕಾರಕ್ಕೆ ಪ್ರಾದೇಶಿಕ ಅಭಿವೃದ್ಧಿ ನೀತಿಯೊಂದನ್ನು ಪ್ರಕಟಿಸಬೇಕೆಂಬ ಅರಿವು ಉಂಟಾಗಿಲ್ಲ.

ಈ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯನ್ನು ಸರ್ಕಾರವು ೨೦೦೭-೦೮ನೇ ಸಾಲಿನಲ್ಲಿ ಜಾರಿಗೊಳಿಸಿತು. ಅದಕ್ಕಾಗಿ ಮೊದಲ ವರ್ಷದ ಬಾಬ್ತು ರೂ. ೧೫೭೧.೫ಕೋಟಿಯನ್ನು ಮೀಸಲಿಟ್ಟಿತ್ತು. ಅದರ ಎರಡನೆಯ ವರ್ಷದ ಬಾಬ್ತು ರೂ ೨೫೪೭ಕೋಟಿಯನ್ನು ತೆಗೆದಿರಿಸಿದೆ. ಈಗ ಪ್ರಸ್ತುತ ಸರ್ಕಾರವು ಡಾ॥ ಡಿ.ಎಮ್. ನಂಜುಂಡಪ್ಪ ಸಮಿತಿ ವರದಿಯ ಅನುಷ್ಠಾನದ ನಿರ್ವಹಣೆಗಾಗಿ ವಿಶೇಷ ಸಮಿತಿಯೊಂದನ್ನು ಶ್ರೀ ಸುಶೀಲ್ ನಮೋಶಿ ಅವರ ಅಧ್ಯಕ್ಷತೆಯಲ್ಲಿ ರಚಿಸಿದೆ. ಈಗ ಏಳುವ ಪ್ರಶ್ನೆಯೆಂದರೆ ಈ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯೆಂಬುದು ಎಲ್ಲಿದೆ ? ಅದಕ್ಕೆ ನೀಡಿರುವ ಅನುದಾನವು ಹೆಚ್ಚುವರಿಯಾದುದೋ ಅಥವಾ ರಾಜ್ಯ ಯೋಜನಾ ವೆಚ್ಚದ ಭಾಗವಾಗಿದೆಯೋ ? ಡಾ॥ ಡಿ. ಎಮ್. ನಂಜುಂಡಪ್ಪ ಸಮಿತಿ ವರದಿಯ ಶಿಫಾರಸ್ಸಿನಂತೆ ವಿಶೇಷ ಯೋಜನೆಯನ್ನು ಸರ್ಕಾರವು ಅನುಷ್ಠಾನಗೊಳಿಸುತ್ತಿದೆಯೇ ? ಯೋಜನೆಯ ಅಸ್ತಿತ್ವವೇ ಪ್ರಶ್ನೆಗೊಳಗಾಗಿರುವಾಗ ಮತ್ತು ಅದಕ್ಕೆ ಹೆಚ್ಚುವರಿಯಾಗಿ ಅನುದಾನವೇ ಇಲ್ಲದಿರುವಾಗ ವಿಶೇಷ ಸಮಿತಿಯು ಯಾವುದರ ನಿರ್ವಹಣೆ ಮಾಡುತ್ತದೆ? ಪ್ರಾದೇಶಿಕ ಅಸಮಾನತೆ ಬಗ್ಗೆ ಸರ್ಕಾರಕ್ಕೆ ಕಾಳಜಿ ಇರುವುದರ ಬಗ್ಗೆ ಅನುಮಾನವುಂಟಾಗುತ್ತದೆ. ಅದನ್ನು ಸರ್ಕಾರಕ್ಕೆ ಮತ್ತು ಅಧಿಕಾರಿ ವರ್ಗಕ್ಕೆ ಸರಿಯಾಗಿ ಪರಿಭಾವಿಸಿಕೊಳ್ಳಲು ಸಾಧ್ಯವಾಗಿರುವಂತೆ ಕಾಣುವುದಿಲ್ಲ. ಪ್ರಸ್ತುತ ಪ್ರಬಂಧದಲ್ಲಿ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆ ಕುರಿತಂತೆ ಕೆಲವು ಸಂಗತಿಗಳನ್ನು ಚರ್ಚಿಸಲಾಗಿದೆ.

### ೧. ಡಾ॥ಡಿ. ಎಮ್. ನಂಜುಂಡಪ್ಪ ಸಮಿತಿ ವರದಿಯ ವಿವರ

ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆಯ ನಿವಾರಣೆ ಮಾಡಲು ಕ್ರಮಗಳನ್ನು ಸೂಚಿಸುವಂತೆ ಡಾ॥ ಡಿ. ಎಮ್. ನಂಜುಂಡಪ್ಪ ಅವರ ಅಧ್ಯಕ್ಷತೆಯಲ್ಲಿ ಉನ್ನತಾಧಿಕಾರ ಸಮಿತಿಯೊಂದನ್ನು ಸರ್ಕಾರವು ೨೦೦೦ರಲ್ಲಿ ನೇಮಿಸಿತು. ಸಮಸ್ಯೆಯನ್ನು ವಿವರವಾಗಿ ಪರಿಶೀಲಿಸಿ ೨೦೦೨ರಲ್ಲಿ ತನ್ನ ಸಾವಿರ ಪುಟಗಳನ್ನು ಮೀರಿದ ಬೃಹತ್ ವರದಿಯನ್ನು ಅದು ಸರ್ಕಾರಕ್ಕೆ ಸಲ್ಲಿಸಿತು. ರಾಜ್ಯದಲ್ಲಿ ಅಭಿವೃದ್ಧಿಗೆ ಸಂಬಂಧಿಸಿದಂತೆ ಪ್ರಾದೇಶಿಕ ಅಸಮಾನತೆ ಯನ್ನು ಮಾಪನ ಮಾಡಲು ಸಮಿತಿಯು ರೂಪಿಸಿದ್ದ ಐದು ವಲಯಗಳನ್ನು ಒಳಗೊಂಡ ೩೫ ಸೂಚಿಗಳ 'ಸಂಯುಕ್ತ ಸಮಗ್ರ ಅಭಿವೃದ್ಧಿ ಸೂಚ್ಯಂಕ'ವೆಂಬ ಮಾಪನವನ್ನು ಬಳಸಿಕೊಂಡು ಅದು ರಾಜ್ಯದಲ್ಲಿರುವ ೧೭೫ ತಾಲ್ಲೂಕುಗಳ ಪೈಕಿ ೧೧೪ ತಾಲ್ಲೂಕುಗಳು ಹಿಂದುಳಿದಿದ್ದಾವೆಂದು ಗುರುತಿಸಿತು. ಅವುಗಳಲ್ಲಿ ೩೯ ಅತ್ಯಂತ ಹಿಂದುಳಿದಿದ್ದಾವೆಂದು, ೪೦ ಅತಿ ಹಿಂದುಳಿದಿದ್ದಾವೆ ಎಂದು ಮತ್ತು ೩೫ ಹಿಂದುಳಿದಿದ್ದಾವೆಂದು ವರ್ಗೀಕರಿಸಿತು. ಈ ೧೧೪ರಲ್ಲಿ ೫೫ ದಕ್ಷಿಣ ಕರ್ನಾಟಕ ಪ್ರದೇಶಕ್ಕೆ ಸೇರಿದ್ದರೆ ೫೯ ಉತ್ತರ ಕರ್ನಾಟಕಕ್ಕೆ ಸೇರಿದ್ದವು. ಆದರೆ ವರ್ಗೀಕರಿಸಿದ ತಾಲ್ಲೂಕುಗಳ ನೆಲೆಯಿಂದ ಪ್ರಾದೇಶಿಕ ಅಸಮಾನತೆಯನ್ನು ನೋಡಿದರೆ ಕರ್ನಾಟಕದಲ್ಲಿ ಅದು ಎಷ್ಟೊಂದು ಗಂಭೀರವಾಗಿದೆಯೆಂಬುದು ತಿಳಿಯುತ್ತದೆ. ಬಹಳ ವಿಶಿಷ್ಟವಾದ ಸಂಗತಿಯೆಂದರೆ ಸಮಿತಿಯು ರಾಜ್ಯದಲ್ಲಿ ಪ್ರಾದೇಶಿಕ ಅಸಮಾನತೆಯು ಗುಲ್ಬರ್ಗಾ ವಿಭಾಗದ ಜಿಲ್ಲೆಗಳಲ್ಲಿ ಮಡುಗಟ್ಟಿಕೊಂಡಿರುವುದನ್ನು ದೃಢಪಡಿಸಿದೆ.

* ರಾಜ್ಯದ ಒಟ್ಟು ೩೯ ಅತ್ಯಂತ ಹಿಂದುಳಿದ ತಾಲ್ಲೂಕುಗಳ ಪೈಕಿ ೨೧, ಅಂದರೆ ಶೇ ೫೪ರಷ್ಟು ಗುಲ್ಬರ್ಗಾ ವಿಭಾಗಕ್ಕೆ ಸೇರಿವೆ.
* ರಾಜ್ಯದ ೬೧ ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ತಾಲ್ಲೂಕುಗಳಲ್ಲಿ ಗುಲ್ಬರ್ಗಾ ವಿಭಾಗಕ್ಕೆ ಸೇರಿದ ತಾಲ್ಲೂಕುಗಳ ಸಂಖ್ಯೆ ಕೇವಲ ಮೂರು (ಶೇ. ೪.೯೨).
* ಗುಲ್ಬರ್ಗಾ ವಿಭಾಗಕ್ಕೆ ಸೇರಿದ ಗುಲ್ಬರ್ಗಾ, ಕೊಪ್ಪಳ ಮತ್ತು ರಾಯಚೂರು ಜಿಲ್ಲೆಗಳಲ್ಲಿನ ಎಲ್ಲ ತಾಲ್ಲೂಕುಗಳು ಹಿಂದುಳಿದಿದ್ದಾವೆ. ಈ ವಿಭಾಗದಲ್ಲಿನ ಒಟ್ಟು ೩೧ ತಾಲ್ಲೂಕುಗಳ ಪೈಕಿ ೨೮ ಹಿಂದುಳಿದ ತಾಲ್ಲೂಕುಗಳಾಗಿವೆ. ಅಂದರೆ ಈ ವಿಭಾಗದಲ್ಲಿನ ಒಟ್ಟು ತಾಲ್ಲೂಕುಗಳಲ್ಲಿ ಶೇ. ೯೦.೩೨ ತಾಲ್ಲೂಕುಗಳು ಹಿಂದುಳಿದಿದ್ದಾವೆ. ಇದಕ್ಕೆ ಪ್ರತಿಯಾಗಿ ಮೈಸೂರು ವಿಭಾಗದಲ್ಲಿನ ಒಟ್ಟು ತಾಲ್ಲೂಕುಗಳಲ್ಲಿ ಹಿಂದುಳಿದ ತಾಲ್ಲೂಕುಗಳ ಪ್ರಮಾಣ ಕೇವಲ ಶೇ. ೩೦ (೨೨ ತಾಲ್ಲೂಕುಗಳು).
* ಉಡುಪಿ, ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳಲ್ಲಿನ ಎಲ್ಲ ತಾಲ್ಲೂಕುಗಳು ಸಾಪೇಕ್ಷವಾಗಿ ಮುಂದುವರಿದ ಸ್ಥಿತಿಯಲ್ಲಿವೆ.
* ಅಭಿವೃದ್ಧಿಯು ದಕ್ಷಿಣ ಕರ್ನಾಟಕ ಪ್ರದೇಶದಲ್ಲಿ ನೆಲೆಗೊಂಡಿದ್ದರೆ ದುಃಸ್ಥಿತಿಯು ಉತ್ತರ ಕರ್ನಾಟಕದಲ್ಲಿ ಮಡುಗಟ್ಟಿಕೊಂಡಿರುವುದನ್ನು ವರದಿಯು ಅತ್ಯಂತ ಸ್ಪಷ್ಟವಾಗಿ ತೋರಿಸಿಕೊಟ್ಟಿದೆ. ಅದರ ಜೊತೆಗೆ ಬೆಳಗಾವಿ ವಿಭಾಗದ ವಿಜಾಪುರ ಜಿಲ್ಲೆಯು ಕೂಡ ಅತ್ಯಂತ ಹಿಂದುಳಿದ ಜಿಲ್ಲೆಯೆಂಬುದನ್ನು ಅದು ದೃಢಪಡಿಸಿದೆ. ಏಕೆಂದರೆ ಅದರ ಎಲ್ಲ ಐದು ತಾಲ್ಲೂಕುಗಳು ಹಿಂದುಳಿದ ಸ್ಥಿತಿಯಲ್ಲಿವೆ.

### ೨. ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆ

ಡಾ॥ ಡಿ. ಎಮ್. ನಂಜುಂಡಪ್ಪ ಸಮಿತಿ ವರದಿಯ ಬಹು ಮುಖ್ಯ ಶಿಫಾರಸ್ಸೆಂದರೆ ರಾಜ್ಯದ ೧೧೪ ಹಿಂದುಳಿದ ತಾಲ್ಲೂಕುಗಳನ್ನು ಅಭಿವೃದ್ಧಿಯಲ್ಲಿ ರಾಜ್ಯಮಟ್ಟದ ಸರಾಸರಿಗೆ ಒಯ್ಯುವ ಗುರಿ ಹೊಂದಿರುವ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯಾಗಿದೆ. ಈ ಯೋಜನೆ ಪ್ರಕಾರ ಸರ್ಕಾರವು ಒಟ್ಟು ರೂ. ೩೨,೦೦೦ಕೋಟಿಯನ್ನು ೧೧೪ ತಾಲ್ಲೂಕುಗಳ ಮೇಲೆ ವಿನಿಯೋಗಿಸಬೇಕಾಗುತ್ತದೆ. ಒಟ್ಟು ಯೋಜನಾ ಮೊತ್ತದಲ್ಲಿ ರೂ. ೧೫,೦೦೦ ಕೋಟಿಯು ತಾಲ್ಲೂಕುಗಳಿಗೆ ವಾರ್ಷಿಕ ಯೋಜನೆಯ ಬಾಬ್ತು ನಿಯಮಿತವಾಗಿ ಹರಿದುಬರುತ್ತದೆ. ಆದ್ದರಿಂದ ಉಳಿದ ರೂ. ೧೬,೦೦೦ ಕೋಟಿಯನ್ನು ಸರ್ಕಾರವು ಹೆಚ್ಚುವರಿಯಾಗಿ ಹಿಂದುಳಿದ ೧೧೪ ತಾಲ್ಲೂಕುಗಳ ಅಭಿವೃದ್ಧಿಗಾಗಿ ಎಂಟು ವರ್ಷಗಳ ಕಾಲಾವಧಿಯಲ್ಲಿ ವಿನಿಯೋಗಿಸಬೇಕೆಂದು ಅದು ಸಲಹೆ ನೀಡಿತ್ತು. ಈ ಅನುದಾನವನ್ನು ಹಂಚಲು ಅದು ಸಂಚಯಿತ ದುಃಸ್ಥಿತಿ ಸೂಚ್ಯಂಕವೆಂಬ ಮಾಪನವನ್ನು ರೂಪಿಸಿತ್ತು. ಈ ಸೂತ್ರದ ಮೂಲಧಾತುವೇನೆಂದರೆ ಅನುದಾನವನ್ನು ತಾಲ್ಲೂಕುಗಳ ಹಿಂದುಳಿದಿರುವಿಕೆಗೆ ಅನುಗುಣವಾಗಿ ಹಂಚಬೇಕು ಎಂಬುದಾಗಿದೆ. ಇಲ್ಲಿ ಅತ್ಯಂತ ಹಿಂದುಳಿದ ತಾಲ್ಲೂಕು ಅತ್ಯಂತ ಅಧಿಕ ಅನುದಾನವನ್ನು ಮತ್ತು ಹಿಂದುಳಿದ ತಾಲ್ಲೂಕು ಕಡಿಮೆ ಅನುದಾನವನ್ನು ಪಡೆಯುತ್ತವೆ. ಸಾಪೇಕ್ಷವಾಗಿ ಮುಂದುವರಿದ ತಾಲ್ಲೂಕುಗಳಿಗೆ ಅನುದಾನದ ಅವಶ್ಯಕತೆ ಇರುವುದಿಲ್ಲ. ಸಮಿತಿಯು ಅನುದಾನ ಹಂಚಲು ಅನುಕೂಲವಾಗುವಂತೆ ದುಃಸ್ಥಿತಿ ಸೂಚ್ಯಂಕವನ್ನು ಎಲ್ಲ ಜಿಲ್ಲೆಗಳಿಗೂ ಲೆಕ್ಕಹಾಕಿಕೊಟ್ಟಿತು. ಅದರ ವಿಭಾಗವಾರು ಅನುದಾನ ಹಂಚಿಕೆ ಸ್ವರೂಪ ಹೀಗಿತ್ತು. ರಾಜ್ಯದ ಒಟ್ಟು ಹಿಂದುಳಿದಿರುವಿಕೆಯ ಪ್ರಮಾಣ ೨೦.೨೬. ಇದರಲ್ಲಿ ಗುಲ್ಬರ್ಗಾ ವಿಭಾಗದ ಪಾಲು ಶೇ.೪೦ ಮತ್ತು ಬೆಳಗಾವಿ ವಿಭಾಗದ ಮೊತ್ತ ಶೇ.೨೦. ಅದರಂತೆ ಬೆಂಗಳೂರು ವಿಭಾಗದ ಪಾಲು ಶೇ.೨೫ ಹಾಗೂ ಮೈಸೂರು ವಿಭಾಗದ ಮೊತ್ತ ಶೇ.೧೫. ಈ ಪ್ರಮಾಣದಲ್ಲಿ ಅನುದಾನವನ್ನು ಹಂಚಲು ಸಮಿತಿಯು ಶಿಫಾರಸ್ಸು ನೀಡಿತು. ಸಮಿತಿಯು ವಿಭಾಗವಾರು ಹಂಚಿಕೆಯ ಸೂತ್ರದ ಜೊತೆಗೆ ಜಿಲ್ಲಾವಾರು ಮತ್ತು ತಾಲ್ಲೂಕುವಾರು ಹಂಚಿಕೆಗೂ ಸೂತ್ರವನ್ನು ನೀಡಿದೆ. ಅವರು ರೂಪಿಸಿದ್ದ ಸೂತ್ರವು ಶುದ್ಧ ಪ್ರಾದೇಶಿಕವಾದುದಾಗಿತ್ತು. ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯ ಹೆಚ್ಚುವರಿ ಅನುದಾನವಾದ ರೂ. ೧೬,೦೦೦ ಕೋಟಿಯನ್ನು ಸಮಿತಿಯ ಸೂತ್ರದ ಪ್ರಕಾರ ಹಂಚಿದರೆ ಆಗ ಗುಲ್ಬರ್ಗಾ ವಿಭಾಗಕ್ಕೆ ರೂ. ೬,೪೦೦ ಕೋಟಿ, ಬೆಳಗಾವಿ ವಿಭಾಗಕ್ಕೆ ರೂ.೩,೬೦೦ ಕೋಟಿ, ಮೈಸೂರು ವಿಭಾಗಕ್ಕೆ ರೂ. ೨,೪೦೦ ಕೋಟಿ ಮತ್ತು ಬೆಂಗಳೂರು ವಿಭಾಗಕ್ಕೆ ರೂ. ೪೦೦೦ಕೋಟಿ ಅನುದಾನ ದೊರೆಯುತ್ತದೆ.

### ೩. ವಿಶೇಷ ಅಭಿವೃದ್ಧಿ ಯೋಜನೆಯ ಅನುಷ್ಠಾನ

ಡಾ॥ ಡಿ. ಎಮ್. ನಂಜುಂಡಪ್ಪ ಸಮಿತಿ ವರದಿಯನ್ನು ಸರ್ಕಾರವು ೨೦೦೭-೦೮ರಲ್ಲಿ ಜಾರಿಗೊಳಿಸಿ ಅದರ ಬಾಬ್ತು ಮೊದಲ ವರ್ಷಕ್ಕೆ ರೂ. ೧೫೭೧.೫೦ ಕೋಟಿ ಅನುದಾನ ಒದಗಿಸಿತು. ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆ ಬಗ್ಗೆ ಸರ್ಕಾರವು ವಿಶೇಷ ಹೊತ್ತಿಗೆಯೊಂದನ್ನು ೨೦೦೭-೦೮ರ ಬಜೆಟ್ಟಿನ ಭಾಗವಾಗಿ ಪ್ರಕಟಿಸಿದೆ. ಅದಕ್ಕೆ ಸಂಬಂಧಿಸಿದಂತೆ ಅದು ಮಾರ್ಗಸೂಚಿಗಳನ್ನು ಬಿಡುಗಡೆಗೊಳಿಸಿದೆ. ಈ ಯೋಜನೆಗಾಗಿ ೨೦೦೮-೦೯ನೆಯ ಸಾಲಿಗಾಗಿ ರೂ. ೨,೫೪೭ ಕೋಟಿ ಮೀಸಲಿರಿಸಿದೆ. ಈ ಯೋಜನೆಯನ್ನು ಅನುಷ್ಠಾನಗೊಳಿಸುವಾಗ ಸರ್ಕಾರವು ೨೦೦೭-೦೮ನೆಯ ಸಾಲಿನ ಅನುದಾನ ಹಂಚಿಕೆಗೆ ಸಮಿತಿಯು ರೂಪಿಸಿದ್ದ ಸೂತ್ರವನ್ನು ಬಿಟ್ಟು ಸರ್ಕಾರವು ತನ್ನದೆ ಸೂತ್ರವನ್ನು ಅನುದಾನ ಹಂಚಿಕೆಗೆ ಜಾರಿಗೊಳಿಸಿತು. ಅದರ ಪ್ರಕಾರ ಅತ್ಯಂತ ಹಿಂದುಳಿದ ೩೯ ತಾಲ್ಲೂಕುಗಳಿಗೆ ಶೇ. ೫೦, ಅತಿ ಹಿಂದುಳಿದ ೪೦ ತಾಲ್ಲೂಕುಗಳಿಗೆ ಶೇ. ೩೦ ಮತ್ತು ಹಿಂದುಳಿದ ೩೫ ತಾಲ್ಲೂಕುಗಳಿಗೆ ಶೇ. ೨೦ರಂತೆ ಅನುದಾನ ದೊರೆಯುತ್ತದೆ. ಈ ಸೂತ್ರದ ಬದಲಾವಣೆಯಿಂದ ಅತ್ಯಂತ ಹಿಂದುಳಿದ ತಾಲ್ಲೂಕುಗಳಿಗೆ ಹೆಚ್ಚಿನ ಅನುದಾನ ದೊರೆಯುತ್ತದೆಯೆಂಬುದು ಸರ್ಕಾರದ ನಂಬಿಕೆಯಾಗಿತ್ತು. ಆದರೆ ವಾಸ್ತವಿಕವಾಗಿ ಎರಡೂ ಸೂತ್ರಗಳ ಪ್ರಕಾರ ಅನುದಾನ ಹಂಚಿಕೆಯನ್ನು ತುಲನೆ ಮಾಡಿದರೆ ಸರ್ಕಾರಿ ಸೂತ್ರದ ಪ್ರಕಾರ ರಾಜ್ಯದ ಅತ್ಯಂತ ಹಿಂದುಳಿದ ಗುಲ್ಬರ್ಗಾ ವಿಭಾಗಕ್ಕೆ ಸಮಿತಿ ಸೂತ್ರದ ಪ್ರಕಾರ ಎಷ್ಟು ದೊರೆಯುತ್ತಿತ್ತೋ ಅದಕ್ಕಿಂತ ಕಡಿಮೆ ಸರ್ಕಾರದ ಸೂತ್ರದ ಪ್ರಕಾರ ಅನುದಾನ ಹಂಚಿದರೆ ದೊರೆಯುತ್ತದೆ. ಸರ್ಕಾರಿ ಸೂತ್ರದಲ್ಲಿ ೨೦೦೭-೦೮ರಲ್ಲಿ ಗುಲ್ಬರ್ಗಾ ವಿಭಾಗಕ್ಕೆ ದೊರೆಯುತ್ತಿದ್ದ ಮೊತ್ತ ರೂ. ೪೯೯.೯೮ ಕೋಟಿ. ಆದರೆ ಸಮಿತಿಯ ಸೂತ್ರವನ್ನು ಪಾಲಿಸಿದರೆ ಅದಕ್ಕೆ ದೊರೆಯುವ ಮೊತ್ತ ರೂ. ೬೨೮.೫೨ ಕೋಟಿ. ಸೂತ್ರದ ಬದಲಾವಣೆಯಿಂದ ಗುಲ್ಬರ್ಗಾ ವಿಭಾಗಕ್ಕೆ ಅನುಕೂಲವಾಗುವುದಕ್ಕೆ ಪ್ರತಿಯಾಗಿ ಅದು ಮೊದಲ ವರ್ಷವೇ ರೂ. ೧೨೮.೬೨ ಕೋಟಿ ಹಾನಿ ಅನುಭವಿಸಬೇಕಾಯಿತು. ಸರ್ಕಾರಿ ಸೂತ್ರದ ಪ್ರಕಾರ ಅನುದಾನವನ್ನು ಹಂಚಿದರೆ



## ಬಯಲು, ಜಂಗಮ, ದೇಗುಲ

ಪ್ರಭುವೇ ...,
ಬಯಲೇ ಬೆಳವುದೆಂಬ
ಮಹದಾಸೆಯಿಂದ ನೀ
ಬಿತ್ತಿದೆ ಬಯಲನ್ನೇ.
ಆದರೆ, ಮೊಳೆತುದು
ಬಯಲಲ್ಲ...
ವಿಕೃತ ಮುಳ್ಳ ಗೊಂಬೆಗಳು
ರಂಗು ರಂಗಿನ ಪತಾಕೆಗಳು !!
ಪಾರ್ಥೇನಿಯಂನಂತೆ,
ಅಣಬೆಯಂತೆ ತಲೆಯೆತ್ತಿ
ಬೆಳೆದು ಮುಚ್ಚಿ ಮುಸುಕಿವೆ,
'ಬಯಲ' ಕಲ್ಪನೆಯೇ
ದಕ್ಕದ ಹಾಗೆ !!
ಅಣ್ಣಾ ...
ಜಂಗಮವೇ ಉಳಿವುದೆಂದು
ಕಾಲು ದಣಿದರೂ ನೀ ನಡೆದೆ
ಇದ್ದ ಬಿದ್ದ ಸ್ಥಾವರಗಳ ಕೆಡವುತ್ತ ;
ಜಗವು ಜಡವಾಗಿ, ಜಡವು ಕಲ್ಲಾಗಿ,
ಕಲ್ಲು ಗೋಡೆಯಾಗಿ, ಗೋಡೆಗಳು
ಮಂದಿರ ಮಸೀದಿ ಚರ್ಚುಗಳಾಗಿ,
ನೋಡು ನೋಡುತ್ತಲೇ
ಭೂಮ್ಯಾಕಾಶಗಳನು ವ್ಯಾಪಿಸಿ
ನಿನ್ನನೂ ಸ್ಥಾವರವಾಗಿಸಿ
ನಗುತ್ತಿವೆ ಗಹಗಹಿಸಿ,
'ಜಂಗಮ' ದ ಕಲ್ಪನೆಯೂ
ದಕ್ಕದ ಹಾಗೆ !!
ಅಕ್ಕಾ...
ಹಸಿವೆಗೆ ಭಿಕ್ಷೆ, ತೃಷೆಗೆ
ಕೆರೆ, ಬಾವಿ; ಶಯನಕೆ
ಹಾಳು ದೇಗುಲವೆಂದೆ.
ನೀಡಿದ ಭಿಕ್ಷೆ, ಕೆರೆ ಬಾವಿಗಳ
ಉದಕಗಳೆರಡೂ ನಂಜು,
ಹಾಳು ದೇಗುಲಗಳೆದ್ದು
ತನ್ನ ಪೌಳಿಯಲಿ ಎದ್ದ
ಹೊಸ ಕಸದ ರಾಶಿಯಲಿ
ನಡೆವ ಹಾದರಗಳ ನೋಡಲಾಗದೆ
ಕಣ್ಮುಚ್ಚಿ ಅಳುತಿವೆ,
ದೇಗುಲದ ಕಲ್ಪನೆಯೂ
ದಕ್ಕದ ಹಾಗೆ !!

ಮಾರುತಿ ದಾಸಣ್ಣವರ
ಕನ್ನಡ ಅಧ್ಯಾಪಕರು, ಜವಾಹರ ನವೋದಯ ವಿದ್ಯಾಲಯ,
ಗಾಳಿಬೀಡು, ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆ - ೫೭೧೨೦೧

ಎಂಟು ವರ್ಷಗಳ ಅಭಿವೃದ್ಧಿ ಯೋಜನೆಯ ಒಟ್ಟು ಅನುದಾನ ರೂ. ೧೬.೦೦೦ ಕೋಟಿಯಲ್ಲಿ ಗುಲ್ಬರ್ಗಾ ವಿಭಾಗಕ್ಕೆ ದೊರೆಯುವ ಮೊತ್ತ ರೂ. ೫೦೯೦.೫೫ ಕೋಟಿಯಾದರೆ ಬೆಳಗಾವಿ ವಿಭಾಗಕ್ಕೆ ದೊರೆಯುವ ಮೊತ್ತ ರೂ. ೩,೭೪೫.೬೬ ಕೋಟಿ. ಅದರಂತೆ ಮೈಸೂರು ವಿಭಾಗಕ್ಕೆ ಅದರಲ್ಲಿ ದೊರೆಯುವ ಪ್ರಮಾಣ ರೂ.೨,೫೨೪.೫೬ ಕೋಟಿಯಾದರೆ ಬೆಂಗಳೂರು ವಿಭಾಗಕ್ಕೆ ದೊರೆಯುವ ಮೊತ್ತ ರೂ. ೪,೬೩೯.೨೮ ಕೋಟಿ. ಆದರೆ ಸಮಿತಿಯ ಸೂತ್ರ ಅನುಸರಿಸಿದರೆ ರೂ. ೧೬,೦೦೦ಕೋಟಿಯಲ್ಲಿ ಎಂಟು ವರ್ಷಗಳಲ್ಲಿ ಗುಲ್ಬರ್ಗಾ ವಿಭಾಗಕ್ಕೆ ದೊರೆಯುವ ಮೊತ್ತ ರೂ. ೬,೪೦೦ ಕೋಟಿ. ಇಲ್ಲಿ ಗುಲ್ಬರ್ಗಾ ವಿಭಾಗಕ್ಕೆ ಎಂಟು ವರ್ಷಗಳ ಅವಧಿಯಲ್ಲಿ ಉಂಟಾಗುವ ನಷ್ಟ ರೂ.೧೩೦೯.೪೫ಕೋಟಿ. ಇಷ್ಟು ಮೊತ್ತ ಉಳಿದ ವಿಭಾಗಗಳಿಗೆ ಸೇರಿಬಿಡುತ್ತದೆ. ಸಮಿತಿ ಸೂತ್ರದ ಪ್ರಕಾರ ಗುಲ್ಬರ್ಗಾ ವಿಭಾಗಕ್ಕೆ ದೊರೆಯುವ ಪ್ರಮಾಣ ಶೇ. ೪೦. ಆದರೆ, ಸರ್ಕಾರದ ಸೂತ್ರದ ಪ್ರಕಾರ ಅನುದಾನವನ್ನು ಹಂಚಿದರೆ ಅದಕ್ಕೆ ಸಿಗುವ ಪ್ರಮಾಣ ಶೇ. ೩೧.೮೧ ಮಾತ್ರ.




ಇಲ್ಲಿ ನಮ್ಮೆದುರು ನಿಲ್ಲುವ ಎರಡು ಪ್ರಶ್ನೆಗಳೆಂದರೆ ಸರ್ಕಾರವು ಸಮಿತಿಯ ಸೂತ್ರವನ್ನು ಕೈಬಿಟ್ಟು ತನ್ನದೇ ಸೂತ್ರವನ್ನು ಯಾಕೆ ಅಳವಡಿಸಿತು? ಎರಡನೆಯದು, ಸಮಿತಿಯು ತಾಲ್ಲೂಕುಗಳನ್ನು ಅಭಿವೃದ್ಧಿಯ ಮೂಲ ಘಟಕವನ್ನಾಗಿ ಮಾಡಿಕೊಳ್ಳುವ ಸಲಹೆ ನೀಡಿತ್ತು ಮತ್ತು ಅನುದಾನವನ್ನು ತಾಲ್ಲೂಕುವಾರು ದುಃಸ್ಥಿತಿ ಸೂಚ್ಯಂಕಕ್ಕೆ ಅನುಗುಣವಾಗಿ ಹಂಚಬೇಕೆಂಬ ನಿಯಮ ಮಾಡಿತ್ತು. ಈ ನಿಯಮವನ್ನು ಸರ್ಕಾರವು ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯನ್ನು ಅನುಷ್ಠಾನಗೊಳಿಸುವಾಗ ಪಾಲಿಸಲಿಲ್ಲ, ಏಕೆ?

ಇದು ಬಹಳ ಮುಖ್ಯವಾದ ಸಂಗತಿಯಾಗಿದೆ. ಉದಾಹರಣೆಗೆ, ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕು ಮತ್ತು ಬೆಂಗಳೂರು ವಿಭಾಗದ ಕನಕಪುರ ತಾಲ್ಲೂಕು ಎರಡು 'ಅತ್ಯಂತ ಹಿಂದುಳಿದ ತಾಲ್ಲೂಕುಗಳ' ಗುಂಪಿಗೆ ಸೇರುತ್ತವೆ. ಆದರೆ ದೇವದುರ್ಗ ತಾಲ್ಲೂಕಿನ ದುಃಸ್ಥಿತಿ ಸೂಚ್ಯಂಕ ೦.೪೭ರಷ್ಟಾದರೆ ಕನಕಪುರ ತಾಲ್ಲೂಕಿನ ದುಃಸ್ಥಿತಿ ಸೂಚ್ಯಂಕ ೦.೨೬. ಅನುದಾನ ಹಂಚಿಕೆ ಬಗೆಗಿನ ಸಮಿತಿ ಸೂತ್ರವನ್ನು ಚಾಚೂ ಉಲ್ಲಂಘಿಸದೆ ಪಾಲಿಸಿದ್ದರೆ ೨೦೦೭-೦೮ನೆಯ ಸಾಲಿನಲ್ಲಿ ವಿಶೇಷ ಅಭಿವೃದ್ಧಿ ಯೋಜನೆಯ ಬಾಬ್ತು ಅನುದಾನದಲ್ಲಿ ದೇವದುರ್ಗ ತಾಲ್ಲೂಕಿಗೆ ರೂ. ೩೬.೪೬ ಕೋಟಿ ಮತ್ತು ಕನಕಪುರ ತಾಲ್ಲೂಕಿಗೆ ರೂ.೨೦.೧೨ ಕೋಟಿ ಅನುದಾನ ದೊರೆಯ ಬೇಕಾಗಿತ್ತು. ಆದರೆ ಸರ್ಕಾರವು ಇಂತಹ ಯಾವುದೇ ಕ್ರಮವನ್ನು ತೆಗೆದುಕೊಂಡಿಲ್ಲ. ಎರಡೂ ತಾಲ್ಲೂಕುಗಳಿಗೂ ಅನುದಾನ ಸಮವಾಗಿದ್ದರೆ ಅದು ನ್ಯಾಯಯುತವಾದುದಾಗುವುದಿಲ್ಲ. ಸಮಿತಿಯ ಸೂತ್ರದಲ್ಲಿ ಹೆಚ್ಚು ಹಿಂದುಳಿದ ತಾಲ್ಲೂಕಿಗೆ, ಅಂದರೆ, ಇಲ್ಲಿ ದೇವದುರ್ಗ ತಾಲ್ಲೂಕಿಗೆ, ಹೆಚ್ಚು ಅನುದಾನ ಮತ್ತು ಕಡಿಮೆ ಹಿಂದುಳಿದ ತಾಲ್ಲೂಕಿಗೆ, ಅಂದರೆ, ಕನಕಪುರ ತಾಲ್ಲೂಕಿಗೆ, ಕಡಿಮೆ ಅನುದಾನ ದೊರೆಯುತ್ತದೆ. ಸರ್ಕಾರವು ರೂಪಿಸಿದ್ದ ಸೂತ್ರದಲ್ಲಿ ಅನುದಾನವನ್ನು ಎಲ್ಲ ತಾಲ್ಲೂಕುಗಳಿಗೆ ಸಮಾನವಾಗಿ ಹಂಚಬೇಕಾಗುತ್ತದೆ. ಇದರಿಂದ ಹಿಂದುಳಿದ ಪ್ರದೇಶಗಳಿಗೆ, ಹಿಂದುಳಿದ ಜಿಲ್ಲೆ ಮತ್ತು ತಾಲ್ಲೂಕುಗಳಿಗೆ ಅನ್ಯಾಯವಾಗುತ್ತದೆ. ಸರ್ಕಾರವು ತಾನು ರೂಪಿಸಿದ್ದ ಸೂತ್ರಕ್ಕೆ ಯಾವುದೇ ಸಮರ್ಥನೆಯನ್ನು ಇದುವರೆವಿಗೂ ನೀಡಿಲ್ಲ.

ಈ ಬಗೆಯ ತಾರತಮ್ಯ ಮತ್ತು ಗುಲ್ಬರ್ಗಾ ವಿಭಾಗಕ್ಕೆ ಉಂಟಾಗುತ್ತಿದ್ದ ಅನುದಾನದಲ್ಲಿ ಕಡಿತದ ಬಗ್ಗೆ ನಾನು ಮತ್ತು ಡಾ॥ ಡಿ. ಎಮ್. ನಂಜುಂಡಪ್ಪ ಸಮಿತಿಯ ಸದಸ್ಯರಲ್ಲಿ ಒಬ್ಬರಾದ ಡಾ॥ ಜಿ. ಶೇಷಾದ್ರಿ ಕೂಡಿ ಯೋಜನಾ ಇಲಾಖೆಯ ಗಮನಕ್ಕೆ ತಂದೆವು. ಆ ಬಗ್ಗೆ ಗುಲ್ಬರ್ಗಾದಲ್ಲಿ ಒಂದು ವಿಚಾರ ಸಂಕಿರಣವನ್ನು ಅಲ್ಲಿನ ವಾಣಿಜ್ಯೋದ್ಯಮ ಸಂಘದ ಸಹಯೋಗದೊಂದಿಗೆ ನಡೆಸಿದೆವು. ಬೆಂಗಳೂರಿನಲ್ಲಿ ಶಾಸಕರ ಭವನದಲ್ಲಿ ಗುಲ್ಬರ್ಗಾ ವಿಭಾಗದ ಶಾಸಕರ ಸಭೆಯೊಂದನ್ನು ಉದ್ದೇಶಿಸಿ ನಾನು ಮತ್ತು ಸಮಿತಿಯ ಮತ್ತೊಬ್ಬ ಸದಸ್ಯರಾದ ಡಾ॥ ಅಬ್ದುಲ್ ಅಜೀಜ್ ಕೂಡಿ ಸೂತ್ರದ ಬದಲಾವಣೆಯಿಂದ ಗುಲ್ಬರ್ಗಾ ವಿಭಾಗಕ್ಕೆ ಉಂಟಾಗುವ ಹಾನಿಯನ್ನು ಮನವರಿಕೆ ಮಾಡಿಕೊಟ್ಟೆವು. ಯೋಜನಾ ಮಂಡಳಿಯು ನಮ್ಮನ್ನು ಆಹ್ವಾನಿಸಿ ಚರ್ಚೆ ನಡೆಸಿ ಅನುದಾನ ಹಂಚಿಕೆ ಸೂತ್ರದ ಸಮಸ್ಯೆಯನ್ನು ತಿಳಿದುಕೊಳ್ಳಲು ಪ್ರಯತ್ನಿಸಿತು. ಈ ಎಲ್ಲ ಪ್ರಯತ್ನಗಳ ಫಲವಾಗಿ ಸರ್ಕಾರವು ಈಗ ತನ್ನ ಸೂತ್ರವನ್ನು ಕೈಬಿಟ್ಟು ಸಮಿತಿಯ ಸೂತ್ರವನ್ನೇ ಅಳವಡಿಸಿಕೊಳ್ಳಲು ತೀರ್ಮಾನಿಸಿದೆ. ಇದೊಂದು ಅಭಿನಂದನೀಯ ಸಂಗತಿಯಾಗಿದೆ.

### ೪. ಅನುದಾನ ಹೆಚ್ಚುವರಿಯಾದುದಲ್ಲ!

ಆದರೆ ಈಗ ಸಮಸ್ಯೆ ಅದಲ್ಲ. ಅದು ಬೇರೆಯೇ ಆಗಿದೆ. ಇತ್ತೀಚೆಗೆ ಸರ್ಕಾರದ ಯೋಜನಾ ಇಲಾಖೆಯು ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಗೆ ನೀಡಿದ ಅನುದಾನ ಹೆಚ್ಚುವರಿಯಲ್ಲವೆಂಬುದನ್ನು ಅಪ್ರತ್ಯಕ್ಷವಾಗಿ ಒಪ್ಪಿಕೊಂಡಿದೆ. ವಿಶೇಷ ಅಭಿವೃದ್ಧಿ ಯೋಜನೆಗೆ ನೀಡುತ್ತಿರುವ ಅನುದಾನವು ರಾಜ್ಯದ ಒಟ್ಟು ಯೋಜನಾ ವೆಚ್ಚದ ಅವಿಭಾಜ್ಯ ಭಾಗವಾಗಿದೆ. ಅಂದರೆ ೨೦೦೭-೦೮ನೆಯ ಸಾಲಿನ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯ ಅನುದಾನ ರೂ. ೧,೫೭೧.೫೦ ಕೋಟಿಯು ಸದರಿ ವರ್ಷದ ರಾಜ್ಯ ಯೋಜನಾ ವೆಚ್ಚವಾದ ರೂ. ೧,೭೧೮೩ ಕೋಟಿಯೊಳಗಿನ ಭಾಗವಾಗಿದೆ. ಅದರಂತೆ ೨೦೦೮-೦೯ನೆಯ ಸಾಲಿನ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯ ಅನುದಾನ ರೂ. ೨,೫೪೭ ಕೋಟಿಯೂ ಸಹ ಸದರಿ ವರ್ಷದ ರಾಜ್ಯ ಯೋಜನಾ ವೆಚ್ಚವಾದ ರೂ. ೨೫,೯೫೨.೮೪ ಕೋಟಿಯ ಭಾಗವಾಗಿದೆ. ಇದನ್ನು ಈಗ ಸರ್ಕಾರವೇ ಒಪ್ಪಿಕೊಂಡಿದೆ.

ಸರ್ಕಾರದ ಯೋಜನಾ ಇಲಾಖೆಯು ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆ ಬಾಬ್ತು ಕ್ರಿಯಾ ಯೋಜನೆ ರೂಪಿಸುವ ಜವಾಬ್ದಾರಿಯನ್ನು ರಾಜ್ಯಮಟ್ಟದ ಇಲಾಖೆಗಳಿಗೆ ವಹಿಸಿಕೊಟ್ಟಿದೆ. ಇದು ಡಾ॥ ಡಿ. ಎಮ್. ನಂಜುಂಡಪ್ಪ ಸಮಿತಿ ವರದಿಯ ಶಿಫಾರಸ್ಸಿಗೆ ತೀರ ವಿರುದ್ಧವಾದುದಾಗಿದೆ ಹಾಗೂ ವಿಕೇಂದ್ರೀಕರಣ ನೀತಿಗೆ ವಿರುದ್ಧವಾದುದಾಗಿದೆ. ಏಕೆಂದರೆ, ಸಮಿತಿಯು ಅನುದಾನವನ್ನು ತಾಲ್ಲೂಕುವಾರು ಹಂಚಲು ಮತ್ತು ವ್ಯಯಿಸಲು ಸೂಚನೆ ನೀಡಿದೆ. ಆದರೆ ಸರ್ಕಾರದ ಕ್ರಮವು ಸಮಿತಿ ಶಿಫಾರಸ್ಸಿಗೆ ವಿರುದ್ಧವಾದುದಾಗಿದೆ. ಸರ್ಕಾರದ ಕ್ರಮದಲ್ಲಿ ಅನುದಾನಕ್ಕೂ ತಾಲ್ಲೂಕಿಗೂ ಸಂಬಂಧವೇ ಇಲ್ಲದಂತಾಗಿದೆ. ವಾಸ್ತವದಲ್ಲಿ ಜಿಲ್ಲೆಗಳಿಗೆ ಅಂದರೆ ಜಿಲ್ಲಾ ಪಂಚಾಯಿತಿಗಳಿಗೆ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆ ಬಗ್ಗೆ ಮತ್ತು ಅನುದಾನದ ಬಗ್ಗೆ ಯಾವುದೇ ಮಾಹಿತಿಯಿಲ್ಲ. ಸರ್ಕಾರವು ೨೦೦೭-೦೮ರಲ್ಲಿ ಕೊಡಮಾಡಿದ ಅನುದಾನ ರೂ. ೧,೫೭೧.೫೦ ಕೋಟಿಯಲ್ಲಿ ಯಾವ ಜಿಲ್ಲೆಗೆ ಎಷ್ಟು ಹಂಚಿದೆ ಎಂಬುದರ ಬಗ್ಗೆ ಮಾಹಿತಿಯಿಲ್ಲ. ಈ ಸರ್ಕಾರವು ಒಪ್ಪಿಕೊಂಡಿರುವಂತೆ ೨೦೦೭-೦೮ನೆಯ ಸಾಲಿನಲ್ಲಿನ ಅನುದಾನವಾದ ರೂ. ೧೫೭೧.೫೦ ಕೋಟಿಯಲ್ಲಿ ಖರ್ಚು ಮಾಡಿರುವ ಮೊತ್ತ ರೂ. ೯೭೬.೩೨ ಕೋಟಿ ಮಾತ್ರ. ಆದರೆ ಇದನ್ನು ಯಾರು ಖರ್ಚು ಮಾಡಿದ್ದಾರೆಂಬುದಕ್ಕೆ ಮತ್ತು ಯಾವ ವಲಯಗಳ ಮೇಲೆ ಮಾಡಲಾಗಿದೆ ಎಂಬುದರ ಬಗ್ಗೆ ಎಲ್ಲಿಯೂ ಮಾಹಿತಿ ದೊರೆಯುತ್ತಿಲ್ಲ. ಈ ಬಗ್ಗೆ ಜಿಲ್ಲಾ ಪಂಚಾಯಿತಿಗಳಿಗೆ ಸರ್ಕಾರವು ಯಾವುದೇ ಮಾಹಿತಿ ನೀಡಿಲ್ಲ. ಎಲ್ಲವೂ ರಾಜ್ಯ ಮಟ್ಟದಲ್ಲೇ ತೀರ್ಮಾನವಾದಂತೆ ಕಾಣುತ್ತದೆ.

ಇಲ್ಲಿ ಏನನ್ನು ಹೇಳಲು ಪ್ರಯತ್ನಿಸಲಾಗಿದೆಯೆಂದರೆ, ಡಾ॥ ಡಿ. ಎಮ್. ನಂಜುಂಡಪ್ಪ ಸಮಿತಿ ವರದಿಯ ಶಿಫಾರಸ್ಸಿಗೂ ಮತ್ತು ಸರ್ಕಾರವು ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿರುವ ರೀತಿಗೂ ಯಾವುದೇ ಸಂಬಂಧವಿರುವಂತೆ ಕಾಣುತ್ತಿಲ್ಲ. ಕೇವಲ ಹೇಳಿಕೊಳ್ಳಲು ಮಾತ್ರ ಡಾ॥ ಡಿ. ಎಮ್. ನಂಜುಂಡಪ್ಪ ಸಮಿತಿ ವರದಿ. ಆದರೆ ಮಾಡುತ್ತಿರುವುದೆಲ್ಲ ಅದಕ್ಕೆ ವಿರುದ್ಧವಾದುದಾಗಿದೆ. ಈ ಕಾರಣದಿಂದಾಗಿ ಸರ್ಕಾರವು ವಿಶೇಷ ಅಭಿವೃದ್ಧಿ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿರುವ ರೀತಿಯನ್ನು ನೋಡಿದರೆ, ಅದರಿಂದ ಪ್ರಾದೇಶಿಕ ಅಸಮಾನತೆ ಇಲ್ಲವಾಗುವುದು ಅಥವಾ ಕಡಿಮೆಯಾಗುವುದು ಸಾಧ್ಯವಿಲ್ಲ. ಸಮಿತಿಯ ಶಿಫಾರಸ್ಸಿನಂತೆ ವಿಶೇಷ ಅಭಿವೃದ್ಧಿ ಯೋಜನೆಯು ಅನುಷ್ಠಾನಗೊಳ್ಳುತ್ತಿಲ್ಲ. ಅದಕ್ಕಿಂತ ಮುಖ್ಯವಾಗಿ ಈ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಗೆ ನೀಡುತ್ತಿರುವ ಅನುದಾನವು ಅದು ಹೇಳಿಕೊಳ್ಳುತ್ತಿರುವಂತೆ 'ಹೆಚ್ಚುವರಿ'ಯಾದುದಲ್ಲ. ಅದು ನಿಯಮಿತವಾದ ಇಲಾಖೆಗಳಿಗೆ ಹರಿಯುವ ವಾರ್ಷಿಕ ಅನುದಾನದ ಭಾಗವೇ ಆಗಿದೆ. ಅಂದಮೇಲೆ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆ ಇಲ್ಲವೆಂದಾಯಿತು. ಹಾಗಿದ್ದರೆ ಶ್ರೀ ಸುಶೀಲ ನಮೋಶಿ ಅವರ ಅಧ್ಯಕ್ಷತೆಯಲ್ಲಿ ಸರ್ಕಾರವು ನೇಮಿಸಿರುವ 'ಡಾ॥ ಡಿ. ಎಮ್. ನಂಜುಂಡಪ್ಪ ಸಮಿತಿ ವರದಿಯ ಅನುಷ್ಠಾನ ನಿರ್ವಹಣಾ ಸಮಿತಿ'ಯ ಕಾರ್ಯಭಾರವೇನು? ಅದು ಏನನ್ನು ನಿರ್ವಹಿಸುತ್ತದೆ? ಒಟ್ಟಾರೆ ಪ್ರಾದೇಶಿಕ ಅಸಮಾನತೆಯನ್ನು ಸರ್ಕಾರಗಳು ಗಂಭೀರವಾಗಿ ಪರಿಗಣಿಸಿಲ್ಲವೆಂಬುದು ಇದರಿಂದ ಸ್ಪಷ್ಟವಾಗುತ್ತಿದೆ. ಈಗಿರುವಂತೆ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯನ್ನು ಹೆಸರಿಗೆ ಮಾತ್ರ ಅನುಷ್ಠಾನಗೊಳಿಸಿದರೆ ಅದರಿಂದ ಪ್ರಾದೇಶಿಕ ಅಸಮಾನತೆಯು

ನಿವಾರಣೆಯಾಗುವುದಿರಲಿ, ಕಡಿಮೆಯಾಗುವುದು ಸಹ ಸಾಧ್ಯವಿಲ್ಲ. ಈ ಬಗ್ಗೆ ಗುಲ್ಬರ್ಗಾ ವಿಭಾಗದ ಜನರು ಮತ್ತು ಜನಪ್ರತಿನಿಧಿಗಳು ಜವಾಬ್ದಾರಿಯಿಂದ ಯೋಚಿಸಬೇಕು. ಡಾ|| ಡಿ. ಎಮ್. ನಂಜುಂಡಪ್ಪ ಸಮಿತಿ ವರದಿಯನ್ನು ಆದರ ಶಿಫಾರಸ್ಸುಗಳಿಗನು ಗುಣವಾಗಿ ಅನುಷ್ಠಾನಗೊಳಿಸಲು ಏನು ಮಾಡಬೇಕು ಎಂಬುದರ ಬಗ್ಗೆ ಚರ್ಚೆ ನಡೆಯಬೇಕು. ಸರ್ಕಾರವು ಇಲ್ಲಿ ಎತ್ತಿರುವ ಪ್ರಶ್ನೆಗಳನ್ನು ಪರಿಗಣಿಸಿ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳುತ್ತದೆಯೆಂದು ಮತ್ತು ಈ ಪ್ರಶ್ನೆಗಳಿಗೆ ಸಮಾಧಾನವನ್ನು ನೀಡುತ್ತದೆಯೆಂದು ನಾನು ಭಾವಿಸುತ್ತೇನೆ. ಅದು ನೀಡದಿದ್ದರೂ ಪರವಾಗಿಲ್ಲ. ಆದರೆ, ಅದು ಡಾ|| ಡಿ. ಎಮ್. ನಂಜುಂಡಪ್ಪ ಸಮಿತಿ ವರದಿಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸುವ ದಿಶೆಯಲ್ಲಿ ಕ್ರಮ ತೆಗೆದುಕೊಂಡರೆ ಅದು ನಮಗೆ ಸಾಕು. ಈ ಬಗ್ಗೆ ಜನರು ಮತ್ತು ಜನಪ್ರತಿನಿಧಿಗಳು ಸರ್ಕಾರದ ಮೇಲೆ ಒತ್ತಡ ತರಬೇಕಾಗುತ್ತದೆ. ಈ ವಿಷಯದಲ್ಲಿ ಪ್ರಸ್ತುತ ಪ್ರಬಂಧವು ಪ್ರೇರಣೆ ನೀಡುತ್ತದೆಯೆಂದು ನಾನು ತಿಳಿದಿದ್ದೇನೆ.

### ೫. ನಾವೇನು ಮಾಡಬಹುದು ?

ಮೊಟ್ಟಮೊದಲನೆಯದಾಗಿ ಡಾ|| ಡಿ. ಎಮ್. ನಂಜುಂಡಪ್ಪ ಸಮಿತಿ ವರದಿಯನ್ನು ವಿವರವಾಗಿ ಅಧ್ಯಯನ ಮಾಡಬೇಕಾಗಿದೆ. ಪ್ರಾದೇಶಿಕ ಅಸಮಾನತೆ ನಿವಾರಣೆಗೆ ಅದೇನೂ ಅಂತಿಮ ಪರಿಹಾರವಲ್ಲ. ಆದರೆ ಪ್ರಾದೇಶಿಕ ಅಸಮಾನತೆಯ ಆಳ-ಹರವುಗಳನ್ನು ಅರ್ಥ ಮಾಡಿಕೊಳ್ಳಲು ಇದರಿಂದ ಸಾಧ್ಯವಾಗುತ್ತದೆ. ಅದು ಮೊಟ್ಟಮೊದಲ ಬಾರಿಗೆ ರಾಜ್ಯದಲ್ಲಿನ ಪ್ರಾದೇಶಿಕ ಅಸಮಾನತೆಯ ವಿರಾಟ್ ಸ್ವರೂಪವನ್ನು ಜನರಿಗೆ ಮತ್ತು ಜನಪ್ರತಿನಿಧಿಗಳಿಗೆ ತೋರಿಸಿಕೊಟ್ಟಿತು.

ಎರಡನೆಯದಾಗಿ, ಸರ್ಕಾರವು ತಕ್ಷಣದಲ್ಲಿ ಸಮಿತಿಯ ಬಹು ಮುಖ್ಯ ಶಿಫಾರಸ್ಸಾದ ಪ್ರಾದೇಶಿಕ ಅಭಿವೃದ್ಧಿ ನೀತಿಯನ್ನು ಪ್ರಕಟಿಸುವ ನಿರ್ಣಯ ತೆಗೆದುಕೊಳ್ಳಬೇಕು. ಆದರಿಂದ ವಾರ್ಷಿಕವಾಗಿ ಪ್ರಾದೇಶಿಕ ಅಸಮಾನತೆಯ ನೆಲೆ-ಬೆಲೆಯನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಾಗುತ್ತದೆ.

ಮೂರನೆಯದಾಗಿ, ಸಂಪರ್ಕ-ಸಂವಹನದ ಎಲ್ಲ ಮಾಧ್ಯಮಗಳನ್ನು ಗುಲ್ಬರ್ಗಾ ವಿಭಾಗದ ಜನರು ಬಳಸಿಕೊಳ್ಳಬೇಕು. ಸರ್ಕಾರವು ಅನೇಕ ಹೊಸ ಕ್ರಮಗಳನ್ನು ಪ್ರಕಟಿಸುತ್ತಲೇ ಇರುತ್ತದೆ. ಉದಾಹರಣೆಗೆ, ಸಂಸ್ಕೃತ ವಿಶ್ವವಿದ್ಯಾಲಯ. ಅದನ್ನು ಗುಲ್ಬರ್ಗಾ ವಿಭಾಗದಲ್ಲಿ, ನಿರ್ದಿಷ್ಟವಾಗಿ ಯಾದಗೀರನಲ್ಲಿ ಸ್ಥಾಪಿಸಲು ಸುದ್ದಿ ಮಾಧ್ಯಮಗಳ ಮೂಲಕ ಸರ್ಕಾರದ ಮೇಲೆ ಒತ್ತಡ ತರಬೇಕು. ಅಲ್ಲದಿದ್ದರೆ ಅದು ಈಗಾಗಲೆ ಅಭಿವೃದ್ಧಿಯನ್ನು ಗುತ್ತಿಗೆ ಹಿಡಿದಿರುವ ಬೆಂಗಳೂರು-ಮೈಸೂರು ಗಳಲ್ಲಿ ಸ್ಥಾಪಿಸಿಬಿಡುತ್ತದೆ. ಅಲ್ಲಿ ಎಷ್ಟು ಸಂಸ್ಥೆಗಳನ್ನು ಸ್ಥಾಪಿಸುತ್ತೀರಿ ? ಅವುಗಳು ಬೆಳೆದಿದ್ದು ಸಾಕು. ಈಗಾಗಲೇ ಅವು ಜನರ, ಕಟ್ಟಡಗಳ ಮತ್ತು ವಾಹನಗಳ ಒತ್ತಡದಿಂದ ಸತ್ತುಹೋಗುತ್ತಿವೆ. ಈಗ ಯಾವುದೇ ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದಾದರೆ, ಯಾವುದೇ ಇಲಾಖೆಯನ್ನು ಆರಂಭಿಸುವುದಾದರೆ ಅಥವಾ ಉದ್ದಿಮೆ ಕಟ್ಟುವುದಾದರೂ ಅವುಗಳನ್ನು ಉತ್ತರ ಕರ್ನಾಟಕದಲ್ಲಿ, ಅದರಲ್ಲೂ ರಾಜ್ಯದ ಅತ್ಯಂತ ಹಿಂದುಳಿದ ಗುಲ್ಬರ್ಗಾ ವಿಭಾಗದ ಜಿಲ್ಲೆಗಳಲ್ಲಿ ಸ್ಥಾಪಿಸಬೇಕು. ಎಲ್ಲವನ್ನೂ ಗುಲ್ಬರ್ಗಾ ವಿಭಾಗಕ್ಕೆ ವರ್ಗಾಯಿಸಬೇಕು. ಅಂತಹ ಒತ್ತಡವನ್ನು ಜನರು ಸರ್ಕಾರದ ಮೇಲೆ ತರಬೇಕಾಗುತ್ತದೆ.

ಕೊನೆಯದಾಗಿ, ಗುಲ್ಬರ್ಗಾ ವಿಭಾಗದ ಜಿಲ್ಲೆಗಳ ಮುಖ್ಯ ಸಮಸ್ಯೆ ಬಂಡವಾಳದ್ದಲ್ಲ, ತಂತ್ರಜ್ಞಾನದ್ದಲ್ಲ, ವಿಮಾನ ನಿಲ್ದಾಣದ್ದಲ್ಲ. ಸಮಸ್ಯೆ ಇರುವುದು ಅಕ್ಷರ ಸಂಸ್ಕೃತಿಯದ್ದಾಗಿದೆ. ರಾಜ್ಯದಲ್ಲಿ ಸಾಕ್ಷರತೆ ಪ್ರಮಾಣ ಶೇ. ೬೬.೬೬ ರಷ್ಟಿದ್ದರೆ ಗುಲ್ಬರ್ಗಾ ಜಿಲ್ಲೆಯ ಯಾದಗೀರ್ ತಾಲ್ಲೂಕಿನ ಗ್ರಾಮೀಣ ಮಹಿಳೆಯರ ಸಾಕ್ಷರತೆ ಪ್ರಮಾಣ ಕೇವಲ ಶೇ. ೧೮.೭೪ (೨೦೦೧). ಇದು ಯಾರಿಗೂ ಶೋಭೆ ತರುವಂತಹ ಸಂಗತಿಯಲ್ಲ. ಈ ವಿಭಾಗದ ಜಿಲ್ಲೆಗಳಲ್ಲಿನ ಸಾಕ್ಷರತೆ ಪ್ರಮಾಣವನ್ನು ಉತ್ತಮಪಡಿಸದೆ, ಪ್ರಾಥಮಿಕ ಶಿಕ್ಷಣವನ್ನು ಬಲಪಡಿಸದೆ ಮತ್ತು ಅದನ್ನು ಸಮರ್ಪಕವಾಗಿ ಬೆಳೆಸದೆ ಪ್ರಾದೇಶಿಕ ಅಸಮಾನತೆಯನ್ನು ನಿವಾರಿಸುವುದು ಸಾಧ್ಯವಿಲ್ಲ.

**ಡಾ|| ಟಿ. ಆರ್. ಚಂದ್ರಶೇಖರ**
ಪ್ರಾಧ್ಯಾಪಕ, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ – ೫೮೩ ೨೭೬

# ಹೊಟ್ಟೆಯ ಕಿಚ್ಚಿಗೆ ತಣ್ಣೀರ ಸುರಿಸಿ

ಸ್ವರ್ಗಕ್ಕೆ ಕಿಚ್ಚು ಹಚ್ಚಿದ ಸರ್ವಜ್ಞನ ಕನಸಿನ ಸಂಸಾರವನ್ನು, ಇವತ್ತು ದೀಪ ಹಚ್ಚಿ ಹುಡಕಬೇಕು. ವಿಭಕ್ತ ಕುಟುಂಬಗಳು, ಹೊಟ್ಯಾಗ ಕಿಚ್ಚ ಇಟ್ಟುಕೊಂಡು ಬದಕಾಕತ್ಯಾವ. ಒಡಲೊಳಗಿನ ಬೆಂಕಿ ತನ್ನನ್ನಲ್ಲದೆ, ಪರರನ್ನು ಸುಡಲು ಸಾಧ್ಯವೇ ? ಒಲೆ ಹತ್ತಿ ಉರಿದರೆ ನಿಲಬಹುದು, ಒಡಲು ಹತ್ತಿ ಉರಿದರೆ ನಿಲಬಹುದೇ ?

ಕಾಳ್ಗಿಚ್ಚು ಕಾಡನ್ನು ಸರ್ವನಾಶ ಮಾಡಿದಂತೆ, ಮನದೊಳಗಿನ ಮತ್ಸರ ಮೌಲ್ಯಗಳನ್ನು ಮಣ್ಣುಪಾಲು ಮಾಡಿದೆ. ಕಿಚ್ಚಿನೊಂದಿಗೆ ಕೀಟಲೆ ಸರಿಯಲ್ಲ. ಅರಿತು ಮುಟ್ಟಿದರೆ ಹೂವು.

ಬೆಂಕಿ ಎಂದಾಕ್ಷಣ ಬರೀ ನಾಶದ ಸಂಕೇತವಲ್ಲ. ದೀಪ ತಮವನ್ನು ಕಳೆಯಬಲ್ಲದು. ಹಾಗಾಗಿ ಬೆಂಕಿ ನಮ್ಮಲ್ಲಿ ಭಯ ಮತ್ತು ಭಕ್ತಿಯನ್ನು ಹುಟ್ಟಿಸಿದೆ. ಈ ಭಾವನೆಗಳನ್ನು ಬಂಡವಾಳ ಮಾಡಿಕೊಂಡವರು ಪವಾಡಪುರುಷರಾಗಿದ್ದಾರೆ.

ಕೈ ಬಾಯಿಗಳಲ್ಲಿ ಕರ್ಪೂರ ಉರಿಸುವುದು, ಮೈ ಕೈಗೆ ಬೆಂಕಿ ಹಚ್ಚಿಕೊಳ್ಳುವುದು, ಅಗ್ನಿಕುಂಡ ಹಾಯುವುದು ಎಲ್ಲವನ್ನೂ ಕಂಡ ಜನ ಬೆಚ್ಚಿಬಿದ್ದರು. ಇವರೆದುರು ಅಡ್ಡ ಬಿದ್ದು, ಕಾಣಿಕೆ ಸಲ್ಲಿಸಿದ್ರು. ತಾಂತ್ರಿಕತೆಯಲ್ಲಿ ಸಾಧನೆ ಸಾಕಷ್ಟಿದ್ದರೂ ದೇವರ ಹೆಸರಿನಲ್ಲಿ ಶೋಷಣೆ ಹೆಚ್ಚುತ್ತಲೇ ಸಾಗಿದೆ.

ಬೆಂಕಿಯೊಡನೆ ಇವರಾಡುವ ಸರಸದ ಹಿಂದಿನ ವಿಜ್ಞಾನ ಸರಳ. ಅಗ್ನಿಕುಂಡ ತುಳಿಯುವ ಜನರನ್ನು ಗಮನಿಸಿರಬಹುದು. ಅವರು ಕೆಂಡದ ಮೇಲೆ ವೇಗವಾಗಿ ಓಡುತ್ತಾರೆ. ಬೆಂಕಿಯ ಮೇಲೆ ನಾವು ವೇಗವಾಗಿ ಚಲಿಸಿದರೆ ಅಥವಾ ಬೆಂಕಿಯ ಜ್ವಾಲೆ ವೇಗವಾಗಿ ನಮ್ಮ ಮೈ ಮೇಲೆ ಚಲಿಸಿದರೆ, ನಮ್ಮ ಚರ್ಮ ಸುಡೊದಿಲ್ಲ. ತೇವ ಭರಿತ ದೇಹದ ಮೇಲ್ಮೈ ಸುಡಲು, ಕೆಲವು ಸೆಕೆಂಡುಗಳ ಕಾಲ ಬೆಂಕಿಯ ಸಂಪರ್ಕದಲ್ಲಿರಬೇಕಾಗುತ್ತದೆ. ಇದನ್ನರಿತವರು ಜನರನ್ನು ವಂಚಿಸಲು ದೇವಮಾನವರಾದರು.

ಇತ್ತೀಚೆಗೆ ಬಹು ಚರ್ಚಿತವಾದ ವಿಷಯ ಭಾರತ - ಅಮೆರಿಕಾ ಅಣು ಒಪ್ಪಂದ. ಇಂದಿರಾ ಗಾಂಧಿ ಹಾಗೂ ವಾಜಪೇಯಿಯವರು ರಾಜಸ್ಥಾನದ ಪೋಖ್ರಾನಿನಲ್ಲಿ ಅಣುಬಾಂಬ್ ಸಿಡಿಸಿ 'ಬುದ್ಧ ನಕ್ಕಾಗ' ಎಂದು ಸಂಭ್ರಮಿಸಿದ್ದನ್ನು ಜನ ಮರೆತಿರಬಹುದು. ಆದರೆ ೧೯೪೫ರ ಆಗಸ್ಟ್ ೬ನ್ನು ಮರೆಯಲು ಸಾಧ್ಯವೇ ? ಅಂದು ಅಮೆರಿಕಾದ ಪೈಲಟ್ ಪಾಲ್ ಟಿಬಟ್ಸ್ ಸಾವಿರಾರು ಅಡಿಗಳ ಮೇಲಿಂದ 'ಹಿರೋಷಿಮಾ' ನಗರದ ಮೇಲೆ 'ಲಿಟಲ್ ಬಾಯ್'ನನ್ನು ಎಸೆದ. ಅರೆಕ್ಷಣದಲ್ಲಿ ಆಗಸಕ್ಕೆ ಕೆನ್ನಾಲಿಗೆ ಚಾಚಿದ ಪುಟ್ಟ ಬಾಂಬು ಒಂದೂವರೆ ಲಕ್ಷ ಜನರ ಪ್ರಾಣ ತೆಗೆದಿತ್ತು. ಸತ್ತ ಪ್ರಾಣಿ, ಪಕ್ಷಿ, ಕೀಟಗಳ ಲೆಕ್ಕ ಇಟ್ಟವರ್ಯಾರು ? ಬಾಂಬಿನೊಳಗಿನ ಕಿಚ್ಚಿನ ಕರಾಮತ್ತು ಜಗತ್ತಿಗೆ ತಿಳಿಯುವ ಮೊದಲೆ, ಮೂರು ದಿನದ ಅಂತರದಲ್ಲಿ 'ಫ್ಯಾಟ್ ಮ್ಯಾನ್' ನಾಗಾಸಾಕಿ ನಗರವನ್ನು ನುಂಗಿಹಾಕಿದ. ಆದರ ಪರಿಣಾಮ ಇಂದಿಗೂ ಮುಂದುವರಿದಿದೆ.

ಸತ್ಯ ಅಂಗೈ ಹುಣ್ಣಿನಷ್ಟೆ ಸ್ಪಷ್ಟ. ಆದರೂ ಕೆಲ ದೇಶಗಳು ಒಡಲೊಳಗೆ ಉರಿ ಕಟ್ಟಿಕೊಂಡ, ನೂರಾರು ಬಾರಿ ಭೂಮಿಯನ್ನು ಸುಟ್ಟುಹಾಕಬಲ್ಲ, ಅಣುಬಾಂಬುಗಳನ್ನು ಸಿದ್ಧಪಡಿಸಿಟ್ಟುಕೊಂಡ ಮಾನವ ಮಾನವನನ್ನು ಮಾತ್ರ ಸುಲಿಗೆ ಮಾಡಲಿಲ್ಲ. ನಿಸರ್ಗದ ಮೇಲೆ ದಬ್ಬಾಳಿಕೆ ನಡೆಸಿದ. ಇಂದು ಪ್ರತಿದಿನ ೫೫೦೦ಕ್ಕೂ ಹೆಚ್ಚು ತೈಲ ಕಂಪನಿಗಳು ಸೊಳ್ಳೆಯು ರಕ್ತ ಹೀರುವಂತೆ, ಭೂ ಒಡಲಿನಿಂದ ತೈಲವನ್ನು ದಿನವಿಡೀ ತೆಗೆಯುತ್ತಲಿವೆ. ಭೂಮಿ ಬಂಜರಾಗುತ್ತಿದೆ. ಬರಿದಾದ ತೈಲಬಾವಿಗಳು ಅಂತರಾಳದ ಬಿಸಿ ದ್ರವವನ್ನು ಹೊರಹಾಕುವ ಹೆದ್ದಾರಿಗಳಾದರೆ ? ಕಾಲ ಉತ್ತರಿಸಬೇಕು.

ಯಾವುದೂ ಶಾಶ್ವತವಲ್ಲ. ನಮ್ಮ ಶಕ್ತಿದಾತ, ಜೀವಪೋಷಕ ಸೂರ್ಯನಿಗೂ ಸಾವಿದೆ. ಮಿಲಿಯಾಂತರ ವರ್ಷಗಳಿಂದ ಬೆಳಕು ನೀಡಿದ ಸೂರ್ಯನೊಡಲೊಳಗಿನ ತಾಪವು ೧೫ ಮಿಲಿಯನ್ ಡಿಗ್ರಿ ಸೆಲ್ಸಿಯಸ್. ಮೇಲ್ಮೈನ ತಾಪ ೬೦೦೦ ಡಿಗ್ರಿ ಸೆಲ್ಸಿಯಸ್. ಪ್ರತಿ ಸೆಕೆಂಡಿಗೆ ೬೦೦ ಮಿಲಿಯನ್ ಟನ್ ಹೈಡ್ರೋಜನ್‌ಅನ್ನು ಹೀಲಿಯಂ ಆಗಿ ಪರಿವರ್ತಿಸಿ, ಸೂರ್ಯ ನಮಗೆಲ್ಲಾ ಪೋಷಿಸುತ್ತಿದ್ದಾನೆ. ಹೈಡ್ರೋಜನ್‌ನ ಖಜಾನೆ ಖಾಲಿಯಾದ ಮೇಲೆ ಕೆಂಪು ದೈತ್ಯನಾಗಿ, ನಂತರ ಶ್ವೇತ ಕುಬ್ಜನಾಗಿ ಸೂರ್ಯ ಸ್ಫೋಟಗೊಳ್ಳುತ್ತಾನೆ. ಇದನ್ನು ಸುಪರ್‌ನೋವಾ ಎನ್ನುವರು. ಆಗ ಸೂರ್ಯನ ಶವಪೆಟ್ಟಿಗೆಗೆ ಅಂತಿಮ ಮೊಳೆ ಜಡಿದಂತೆ. ಇಂತಹ ಒಂದು ಘಟನೆಯನ್ನು ಕಳೆದ ಜನವರಿಯಲ್ಲಿ ಖಗೋಳ ವಿಜ್ಞಾನಿಗಳು ಪತ್ತೆಹಚ್ಚಿದ್ದಾರೆ.

ಇನ್ನು ಅಮ್ಮಮ್ಮ ಅಂದ್ರೆ ಅರವತ್ತೋ, ಎಪ್ಪತ್ತೋ ವರ್ಷ ಬದಕುವ ನಾವ್ಯಾಕೆ, ಹೊಟ್ಯಾಗ ಕಿಚ್ಚಿಟ್ಕೋಬೇಕು, ನಮ್ಮ ವಿಲಾಸಿ ಜೀವನಕ್ಕೆ ಪ್ರಕೃತಿಯನ್ನು ವಿಕೃತಗೊಳಿಸಬೇಕು ? ಯಂತ್ರಗಳೊಡನೆಯೇ ಜೀವನ ಕಳೆಯುತ್ತಿರುವ, ಜೀವ ಕಳೆದುಕೊಳ್ಳುತ್ತಿರುವ ನಾವೆಲ್ಲಾ ನೆರೆಹೊರೆಯವರೊಡನೆ ಉತ್ತಮ ಸಂಬಂಧ ಸಾಧಿಸೋಣ. ನಾವು ಪರಿಸರ ಪ್ರಿಯರಾದರೆ, ಕೊರಡು ಕೊನರುವ ಕಾಲ ಬಂದೀತು.

**ರವಿ ಸೋ. ದೇವರಡ್ಡಿ**
'ನೆಮ್ಮದಿ ನೆರಳು', ಕೊಪ್ಪಳ ರಸ್ತೆ, ಮುಂಡರಗಿ, ಗದಗ ಜಿಲ್ಲೆ

# ಹೈದರಾಬಾದ್ ಸಂಸ್ಥಾನಕ್ಕೆ ಡಾ॥ ಬಿ. ಆರ್. ಅಂಬೇಡ್ಕರ್ ಅವರ ಪ್ರಥಮ ಭೇಟಿ

■ ಡಾ॥ ಲಿಂಗಣ್ಣ ಗೋನಾಲ

**ಹೈ**ದರಾಬಾದಿನಲ್ಲಿ ದಲಿತ ಪ್ರಜ್ಞೆ ಜಾಗೃತಗೊಳ್ಳುತ್ತಿದ್ದ ಕಾಲದಲ್ಲಿ, ಅಲ್ಲಿಯ ಕೆಲವು ದಲಿತ ಕಾರ್ಯಕರ್ತರು ದಲಿತರನ್ನು ಒಗ್ಗೂಡಿಸಿಕೊಂಡು ಸಂಘಟನೆಗಳನ್ನು ಹುಟ್ಟು ಹಾಕಿದರು. ಸಮಾಜದ ಅಸಮಾನತೆಯ ವಿರುದ್ಧ ಹೋರಾಡುವುದು, ಅಸ್ಪೃಶ್ಯತೆಯ ನಿರ್ಮೂಲನೆ, ಗುಲಾಮಗಿರಿ ರದ್ದತಿ, ದಲಿತರಿಗೆ ಶಿಕ್ಷಣ, ನೌಕರಿ, ಸರ್ಕಾರದ ಸವಲತ್ತುಗಳ ಬೇಡಿಕೆ ಹೀಗೆ ಈ ಒಂದು ದಿಕ್ಕಿನಲ್ಲಿ ಇಲ್ಲಿಯ ಚಳವಳಿಗಳು ಸಾಗಿದ್ದ ಸಮಯವದು. ಈ ಸಂದರ್ಭದಲ್ಲಿ ಡಾ॥ ಅಂಬೇಡ್ಕರ್ ಅವರು ದೇಶ ವಿದೇಶಗಳಲ್ಲಿ ಖ್ಯಾತಿಯನ್ನು ಹೊಂದಿದ್ದನ್ನು ತಿಳಿದು ಇಲ್ಲಿಯ ಕೆಲವು ನಾಯಕರು ಅವರ ನೇರ ಸಂಪರ್ಕದಿಂದ ತಮ್ಮ ಹೋರಾಟಕ್ಕೆ ಸ್ಫೂರ್ತಿ ಮತ್ತು ಹೊಸ ದಿಕ್ಕು ಗಳಿಸಿಕೊಳ್ಳಲು ಸಾಧ್ಯವೆಂದು ಅರಿತು ಅವರನ್ನು ಹೈದರಾಬಾದಿಗೆ ಕರೆತರುವ ಮನಸ್ಸು ಮಾಡುವರು. ಅವರನ್ನು ಸಂಪರ್ಕಿಸಿ ಕೇಳಿಕೊಳ್ಳುವರು. ಇಲ್ಲಿಯ ದಲಿತ ನಾಯಕ ಸುಬ್ಬಯ್ಯನವರ ಸತತ ಪ್ರಯತ್ನದ ಫಲವಾಗಿ ಸೆಪ್ಟೆಂಬರ್ ೧೯೪೪ರಲ್ಲಿ ಡಾ॥ ಅಂಬೇಡ್ಕರ್ ಅವರು ಮೊಟ್ಟಮೊದಲು ಹೈದರಾಬಾದಿಗೆ ಬರಲು ಒಪ್ಪಿಕೊಂಡರು. ಈ ಸುದ್ದಿ ಮುಂಚಿತವಾಗಿ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಡಾ॥ ಅಂಬೇಡ್ಕರ್ ಅವರು ಪೂರ್ವನಿರ್ಧಾರದಂತೆ ರೈಲ್ವೆಯ ಮೂಲಕ ಹೈದರಾಬಾದಿಗೆ ಪ್ರಯಾಣ ಬೆಳೆಸಿದರು. ಈ ಸುದ್ದಿ ತಿಳಿದ ಮೇಲೆ ಬಿ. ಎಸ್. ವೆಂಕಟರಾವ್ ಅವರೂ ಡಾ॥ ಅಂಬೇಡ್ಕರ್ ಅವರಿಗೆ ಆಹ್ವಾನಿಸುವರು. ಅದರಲ್ಲಿ ಅವರು ತಾವು ಹೂಗುಚ್ಛ ಸಮರ್ಪಿಸಿ, ಮನವಿಪತ್ರ ಸಲ್ಲಿಸಬಯಸುವುದಾಗಿ ಟೆಲಿಗ್ರಾಂ ಕಳಿಸುವರು.

ದಲಿತ ವರ್ಗದ ಸಂಘವು ತುಂಬ ಪ್ರಯತ್ನ ಪೂರ್ವಕವಾಗಿ ಕಾರ್ಯಕ್ರಮವನ್ನು ರೂಪಿಸುವ ಯೋಜನೆಯನ್ನು ಸಿದ್ಧಪಡಿಸಿತ್ತು. ರಾಜಪ್ರತಿನಿಧಿಗಳಲ್ಲಿ ತಮ್ಮ ಮನವಿಯನ್ನು ಸಲ್ಲಿಸಬೇಕು ಎಂದು ಅಂದುಕೊಂಡಿತು. ೨೦ನೆಯ ಸೆಪ್ಟೆಂಬರ್ ೧೯೪೪ರಂದು ಅವರು ನಿಜಾಂ ರಾಜಧಾನಿಗೆ ಬರುವವರಿದ್ದರು. ಅಂದೇ ಬೆಳಿಗ್ಗೆ ೯ ಗಂಟೆಗೆ ವಿಕ್ಟರಿ ಪ್ಲೇಗ್ರೌಂಡ್‌ನಲ್ಲಿ ಕಾರ್ಯಕ್ರಮ ಸಿದ್ಧಗೊಳಿಸಿದ್ದರು. ಪರಿಶಿಷ್ಟ ಜಾತಿಯ ಸಂಘಟನೆಯೂ ಕೂಡ ಡಾ॥ ಅಂಬೇಡ್ಕರ್ ಅವರಿಗೆ ಅದ್ದೂರಿಯ ಗೌರವದ ಕಾಣಿಕೆಗಳನ್ನು ಸಲ್ಲಿಸಿತು. ಸುಬ್ಬಯ್ಯ ಅವರು ತಮ್ಮ ಅಧ್ಯಕ್ಷತೆಯಲ್ಲಿ ಮನವಿಯನ್ನು ಸಲ್ಲಿಸಿದರು.

ಸುಬ್ಬಯ್ಯನವರು ಡಾ॥ ಅಂಬೇಡ್ಕರ್ ಅವರನ್ನು ಬೇಗಂಪೇಟ ರೇಲ್ವೆ ಸ್ಟೇಷನ್‌ನಲ್ಲಿ ಸ್ವಾಗತಿಸಿಕೊಂಡರು. ಅವರೊಂದಿಗೆ ಬಾಂಬೆಯಿಂದ ಬಂದಿದ್ದ ಪಿ.ಎನ್. ರಾಜಭೋಜ ಕೂಡ ಇದ್ದರು. ರೈಲು ನಾಂಪಲ್ಲಿ ಸ್ಟೇಷನ್‌ಗೆ ಬರುತ್ತಲೇ ಪರಿಶಿಷ್ಟ ಜಾತಿ ಸಂಘಟನೆ ಮತ್ತು ದಲಿತ ವರ್ಗದ ಸಂಘದ ಸದಸ್ಯರುಗಳು ಬಹು ಉತ್ತೇಜಕವಾಗಿ ಅಂಬೇಡ್ಕರ್ ಅವರನ್ನು ಸ್ವಾಗತಿಸಿದರು. ಬಹು ದೊಡ್ಡ ಸಂಖ್ಯೆಯ ಜನರ ಗುಂಪಿನ ಮಧ್ಯದಿಂದ 'ಅಂಬೇಡ್ಕರ ಜಿಂದಾಬಾದ' ಎಂಬ ಕೂಗು ಕೇಳಿಬಂತು. ಆಗ ಇನ್ನೂ ಅವರು ರೈಲು ಬೋಗಿಯಿಂದ ಕೆಳಗೆ ಇಳಿದಿರಲಿಲ್ಲ. ಅವರನ್ನು ಸ್ವಾಗತಿಸಲು ಅಲ್ಲಿಗೆ ಬಂದಿದ್ದ ಪ್ರತಿನಿಧಿಗಳೆಲ್ಲರೂ ಹೂಮಾಲೆಗಳನ್ನು ಹಾಕಿದರು. ಅವರ ಪಕ್ಕದಲ್ಲೇ ಸುಬ್ಬಯ್ಯ ನಿಂತಿದ್ದರು. ವೆಂಕಟರಾವ್, ಪಾಲಯಂ ಪಿಳ್ಳೈ ಮತ್ತು ಇತರ ನಾಯಕರೆಲ್ಲ ಹೂಮಾಲೆಗಳನ್ನು ಹಿಡಿದುಕೊಂಡು ಲೈನಿನಲ್ಲಿ ನಿಂತಿದ್ದರು. ಆದರೆ ಪರಿಶಿಷ್ಟ ಜಾತಿಗಳ ಸಂಘಟನೆಯ ಸದಸ್ಯರು ತಮ್ಮ ಪ್ರಭಾವವನ್ನು ತೋರಿಸಿ, ಅಲ್ಲಿ ನೆರೆದಿರುವ ಇತರರ ಗುಂಪನ್ನು ಯಶಸ್ವಿಯಾಗಿ ತಡೆಗಟ್ಟಿ, ಅಲ್ಲಿಂದ ಹೊರಗೆಡವಿದರು. ಡಾ॥ ಅಂಬೇಡ್ಕರರನ್ನು ಸುತ್ತುವರೆದು ನಿಂತಿದ್ದ ಸುಬ್ಬಯ್ಯ ಮತ್ತು ಅವರ ಪಕ್ಷದವರಿಗೆ ಗೊತ್ತಿತ್ತು, ಅಂಬೇಡ್ಕರ್ ಇಲ್ಲಿ ಇಳಿಯುವುದು ಬೇಡ, ಅವರು ಹೋಗಬೇಕಾದದ್ದು ಸಿಕಂದರಾಬಾದ್‌ಗೆ ಎಂದು. ಆದರೂ ಪ್ಲಾಟಫಾರಂ ಮೇಲೆ ವೆಂಕಟರಾವ್ ಮತ್ತು ಅವರ ಪಕ್ಷದವರು ಅಂಬೇಡ್ಕರರು ಇದ್ದ ಬೋಗಿಯಲ್ಲಿ ನುಸುಳಲು ಪರದಾಡುತ್ತಿದ್ದರು. ಆದರೆ ರೈಲು ಹೊರಡತೊಡಗಿತು. ಅವರ ಜೊತೆಗೆ ಸುಬ್ಬಯ್ಯ ಮತ್ತು ರಾಜಭೋಜ ಇಬ್ಬರೂ ಇದ್ದರು.

ಪರಿಶಿಷ್ಟ ಜಾತಿ ಸಂಘಟನೆಯ ಸದಸ್ಯರು ಆನಂದತುಂದಿಲರಾಗಿದ್ದರು. ಬಿ. ಎಸ್. ವೆಂಕಟರಾವ್ ಮತ್ತು ಆತನ ಪಾರ್ಟಿಯ ಸದಸ್ಯರನ್ನು ಇವರು ಅಂಬೇಡ್ಕರರನ್ನು ಭೇಟಿಯಾಗದಂತೆ ತಡೆಯುವುದರಲ್ಲಿ ಯಶಸ್ವಿಯಾಗಿದ್ದರು. ಇದರಿಂದ ವೆಂಕಟರಾವ್ ಪಾರ್ಟಿಯವರು, ಡಾ॥ ಅಂಬೇಡ್ಕರ್ ಅವರು ತಮ್ಮ ಸಂಘಟನೆಗೆ ಅವಮಾನಿಸಿದರೆಂದು ತಿಳಿದುಕೊಂಡರು. ಆಗವರು ತುಂಬ ಅಸಮಾಧಾನದಿಂದ 'ಅಂಬೇಡ್ಕರ್ ಮುರ್ದಾಬಾದ್' ಮತ್ತು 'ಅಂಬೇಡ್ಕರ್ ಬಾಯ್ಕಾಟ್' ಎಂದು ಕೂಗುತ್ತ ಸ್ಟೇಶನ್‌ನಿಂದ ಹೊರನಡೆದರು. ಡಾ॥ ಅಂಬೇಡ್ಕರ್ ಅವರು ಇದನ್ನು ಅಷ್ಟೊಂದು ಗಂಭೀರವಾಗಿ ಪರಿಗಣಿಸಿರಲಿಲ್ಲ. ಆದರೂ ಅವರು ಹೈದರಾಬಾದಿಗೆ ಬರುವ ಸುದ್ದಿ ತಿಳಿದಿದ್ದ ಪೊಲೀಸರು ಈ ರೀತಿಯ ಘಟನೆ ಜರುಗಬಹುದೆಂದು ಮೊದಲೇ ನಿರೀಕ್ಷಿಸಿದ್ದರು. ಆದ್ದರಿಂದ ಆಗಲೇ ಅಲ್ಲಿಗೆ ಬಂದಿದ್ದರು. ಸುದೈವದಿಂದ ಅಂಥ ಅಹಿತಕರ ಘಟನೆಯೇನೂ ಘಟಿಸಲಿಲ್ಲ.

ವಿಕ್ಟರಿ ಆಟದ ಮೈದಾನದಲ್ಲಿ ದಲಿತರೆಲ್ಲ ಸೇರಿದ್ದರು. ಜೊತೆಗೆ ಪ್ರಮುಖ ನಾಗರಿಕರಾದ ಬಿ.ರಾಮಕೃಷ್ಣರಾವ್ ಮತ್ತು ಇತ್ತೇಹಾದ-ಉಲ್-ಮುಸಲ್ಮೀನದ ಅಧ್ಯಕ್ಷರು ಇವರೆಲ್ಲ ಸಾಕ್ಷೀಭೂತವಾಗಿ ಡಾ॥ ಅಂಬೇಡ್ಕರ್ ಅವರೊಂದಿಗೆ ಹಾಜರಿದ್ದರು. ಅಂದು ಬಿ. ಎಸ್. ವೆಂಕಟರಾವ್ ಮಾತನಾಡುತ್ತ, ಆವೇಶಭರಿತರಾಗಿ "ಗೌರವಾನ್ವಿತ ಸದಸ್ಯರಿಗೆ ಮೂಲತಃ ಸೌಜನ್ಯವನ್ನು ಹೇಗೆ ತೋರಿಸಬೇಕೆಂಬುದೇ ಗೊತ್ತಿಲ್ಲ. ಹೈದರಾಬಾದಿನ ನಾಯಕರಲ್ಲಿಗೆ ಅವರು ಬಂದಾಗ, ಹೀಗೆ ವರ್ತಿಸುವುದು ಸರಿಯಲ್ಲ. ಈ ಗೊಂದಲದಿಂದ [illegible] ನಮಗೆ ತೊಂದರೆಯಾಗುವುದಕ್ಕೆ ಕ್ಷಮೆ ಕೋರುವೆ. ಆದರೆ ನಮ್ಮ ಆಹ್ವಾನವನ್ನು ನೀವೇಕೆ ಒಪ್ಪಲಿಲ್ಲ?" ಎಂದು ಕೇಳಿಕೊಂಡರು. "ನಮ್ಮ ಸಂಘವು [illegible] ಮುಂತಾದವನ್ನು [illegible]. ಆದರೆ ನಿಮ್ಮ [illegible] ಗೌರವ ಮತ್ತು ಅಭಿಮಾನ, ಅಸ್ತಿತ್ವ ಈ ರಾಜ್ಯದ ಜನರಲ್ಲಿ ಕಳೆದುಹೋಗಿವೆ" ಎಂದು ತನ್ನ ವಿಚಾರಗಳನ್ನು ಮಂಡಿಸಿದರು.

ಈ ಮೇಲಿನ ಮಾತುಗಳಿಂದ ನಮಗೆ ತಿಳಿದುಬರುವುದೇನೆಂದರೆ, ಒಂದೇ ಗುರಿಯನ್ನು ಹೊಂದಿರುವ ಎರಡು ಸಂಘಟನೆಗಳ ನಾಯಕರುಗಳ ವೈಯಕ್ತಿಕ ಪ್ರತಿಷ್ಠೆ ಹಾಗೂ ನಾಯಕತ್ವದ ಪೈಪೋಟಿಯಿಂದ ದಲಿತ ವರ್ಗದಲ್ಲಿ ಒಡಕುಂಟಾಗಿರುವುದು ಸ್ಪಷ್ಟವಾಗಿದೆ. ಈ ಎರಡು ಸಂಘಟನೆಗಳ ನಡುವೆ ಇರುವ ಭಿನ್ನತೆಗಳನ್ನು ಇವರು [illegible].



ಚಳವಳಿ ಮತ್ತು ಹೋರಾಟಗಳೆಂದರೆ ಅವು ಸ್ನೇಹದ ಗೂಡೇನೂ ಆಗಿರುವುದಿಲ್ಲ. ಅಲ್ಲಿಯೂ ಅನೇಕ ಭಿನ್ನಾಭಿಪ್ರಾಯ, ವೈಯಕ್ತಿಕ ಹಿತಾಸಕ್ತಿ, ಗುಂಪುಗಾರಿಕೆ, ವ್ಯಕ್ತಿಪ್ರತಿಷ್ಠೆ ಮುಂತಾದುವುಗಳು ಇದ್ದೇ ಇರುತ್ತವೆ. ಆದರೆ ಈ ಎಲ್ಲವುಗಳನ್ನು ಮೀರಿದಾಗ ಮಾತ್ರ ಒಂದು ಸಂಘಟನೆಯಾಗಲಿ ಚಳವಳಿಯಾಗಲಿ ಯಶಸ್ವಿಯಾಗಬಲ್ಲದು.

ಈ ಎರಡು ಸಂಘಟನೆಗಳೇ ಈ ರೀತಿಯಾದ ಅಶಾಂತಿಗೆ ಕಾರಣವಾದವು. ತದನಂತರ ಸಭೆಯಲ್ಲಿ ಒಂದು ಗೊತ್ತುವಳಿ ಪಾಸುಮಾಡಿ, ಡಾ|| ಅಂಬೇಡ್ಕರ್ ಅವರ ನಾಯಕತ್ವವನ್ನು ನಿರಾಕರಿಸಿರುವುದಾಗಿ ನಿರ್ಧರಿಸಿದರು. ಆ ಗೊತ್ತುವಳಿಗೆ ವೆಂಕಟರಾವ್ ಸಹಿ ಹಾಕಿದರು. ಅದನ್ನು ಪಾಲಯಂ ಪಿಳ್ಳೈ ಡಾ|| ಅಂಬೇಡ್ಕರ್ ಅವರಿಗೆ ಕಳಿಸಿಕೊಟ್ಟರು.

ಸಾರ್ವಜನಿಕ ಸಭೆಯು ಜೀರಾ ಎಂಬ ಸ್ಥಳದಲ್ಲಿ ಮಧ್ಯಾಹ್ನ ಜರುಗಿತು. ಪರಿಶಿಷ್ಟ ಜಾತಿಯ ಸಂಘಟನೆಯು ಡಾ|| ಅಂಬೇಡ್ಕರ್ ಅವರಿಗೆ ಕಾಣಿಕೆಗಳನ್ನು ನೀಡಿತು. ಸವಿನೆನಪಿನ ಕಾಣಿಕೆಗಳನ್ನು ಧಾರಾಳವಾಗಿ ಸಮರ್ಪಿಸಿ, ಅವರು ಪರಿಶಿಷ್ಟ ಜಾತಿಗೆ ಸಲ್ಲಿಸಿದ ಸೇವೆ, ಅವರನ್ನು ಮೇಲೆತ್ತಲು ಮಾಡಿದ ಪ್ರಯತ್ನ ಮುಂತಾದ ಅಂಶಗಳನ್ನು ಉಲ್ಲೇಖಿಸಿ ಅವರನ್ನು ಶ್ಲಾಘಿಸಲಾಯಿತು. ಆಮೇಲೆ ನಿಜಾಮನ ಆಡಳಿತದಲ್ಲಿ ದಲಿತರಿಗೆ ಸಿಕ್ಕಿರುವ ಸ್ಥಾನಮಾನಗಳನ್ನು ಹೀಗೆ ವಿವರಿಸಿದರು: ''ನಮ್ಮ ಅಚ್ಚುಮೆಚ್ಚಿನ ನಿಜಾಮರ ಆಡಳಿತದಿಂದ ನಮ್ಮ ಸಮುದಾಯಕ್ಕೆ ಲಾಭವಾಗಿದೆ. ಭೌತಿಕ ಅಭಿವೃದ್ಧಿಗೆ ಮಹತ್ವ ಸಿಕ್ಕಿದೆ. ಅಲ್ಲದೆ ಸರ್ಕಾರವು ನಮ್ಮ ಸಮುದಾಯವನ್ನು ಗುರುತಿಸಿದೆ. ಇದು ನಿಜಾಮರ ಬಹುದೊಡ್ಡ ಉದಾರ ಗುಣ. ನಾವು ರಾಜನ ಕೃಪಾಳುವಿನ ಸಾರ್ವಭೌಮತ್ವದಲ್ಲಿ ನಂಬಿಕೆ ಮತ್ತು ಭರವಸೆಯನ್ನಿಟ್ಟಿದ್ದೇವೆ. ಅವರ ಸರ್ಕಾರವು ಸಾಂಪ್ರದಾಯಿಕ ಕಾಳಜಿಯಿಂದ ನಮಗೆ ಹೆಚ್ಚಿನ ಗೌರವ ಮತ್ತು ಆಡಳಿತದಲ್ಲಿ ಪಾಲ್ಗೊಳ್ಳುವ ಸೌಲಭ್ಯಗಳನ್ನು ಒದಗಿಸಿದೆ.'' ಈ ಮಾತುಗಳು ಎಷ್ಟರ ಮಟ್ಟಿಗೆ ಸತ್ಯವೆಂದು ಪರಿಶೀಲಿಸಬೇಕು.

ರಾಜ್ಯವು ಪರಿಶಿಷ್ಟ ಜಾತಿಯವರ ಜಾಗೃತಿಗಾಗಿ ವಹಿಸಿದ ಆಸಕ್ತಿಯನ್ನು ತಿಳಿದು ಅಂಬೇಡ್ಕರರು ಬಹಳಷ್ಟು ಪ್ರಭಾವಿತರಾದರು.. ಅಂದು ಅವರು ತುಂಬ ಪರಿಣಾಮಕಾರಿಯಾದ ಭಾಷಣವನ್ನು ಮಾಡಿದರು. ''ಹಿಂದುಳಿದ, ತುಳಿತಕ್ಕೊಳಗಾದ ವರ್ಗವನ್ನು ಹಿಂದೂಗಳು ತಮ್ಮವರೆಂದು ಹೇಳಿಕೊಳ್ಳುತ್ತಾರೆ. ಆದರೂ ಹಿಂದುಳಿದ ವರ್ಗದ ಪ್ರಾತಿನಿಧ್ಯಕ್ಕೆ ಅವಕಾಶವನ್ನು ಮಾಡಿಕೊಡುತ್ತಿಲ್ಲ. ಸರ್ಕಾರವು ಮುಸ್ಲಿಮರಿಗೆ ಪ್ರಾತಿನಿಧ್ಯವನ್ನು ನಿರ್ಧರಿಸಿದೆ. ಆದರೆ ತುಳಿತಕ್ಕೊಳಗಾದ ವರ್ಗವು ಮಾತ್ರ ಹಿಂದು-ಮುಸ್ಲಿಂ ಮತ್ತು ಇತರ ಸಮುದಾಯಗಳಿಂದ ಪ್ರತ್ಯೇಕಿಸಲ್ಪಟ್ಟಿದೆ. ಹಳ್ಳಿ-ಪಟ್ಟಣಗಳಲ್ಲಿ ಇವರನ್ನು ನಿಗ್ರಹಿಸಿ ಗುಲಾಮರನ್ನಾಗಿಸಿಕೊಳ್ಳಲಾಗಿದೆ. ಈ ಜನತೆಯ ಹಕ್ಕುಗಳು ತಳ್ಳಲ್ಪಟ್ಟು, ಅವರ ಕುರಿತು ಯಾರೊಬ್ಬರೂ ಚಿಂತಿಸುತ್ತಿಲ್ಲ.'' ಇದನ್ನು ಇನ್ನೂ ಸ್ಪಷ್ಟೀಕರಿಸಿ ಹೀಗೆ ಹೇಳಿದರು: ''ದಮನಕ್ಕೊಳಗಾದ ವರ್ಗವು ಹಿಂದೂ ಸಮುದಾಯದ ಭಾಗವಲ್ಲ. ಆದರೆ ಅವರದೇ ಆದ ಪ್ರತ್ಯೇಕ ರಾಷ್ಟ್ರವಿದೆ. ಅವರ ಗುರಿಯೂ ಅದಾಗಬೇಕು. ಈ ಸಮುದಾಯದವರೆಲ್ಲ ಅಧಿಕಾರವನ್ನು ಹೊಂದುವಂತಾಗಬೇಕು. ಅದೂ ಒಂದೇ ಪರಿಧಿಯ ಅಡಿಯಲ್ಲಿ ಸೇರಿ ಒಕ್ಕೂಟದ ಶಕ್ತಿಯಾಗಬೇಕು.'' ಆದರೆ ಅವರ ಪಾರ್ಟಿಗಳಲ್ಲಿರುವ ಮತ್ಸರ, ಜಗಳಗಳನ್ನು ಕಂಡು ದುಃಖಿತರಾಗಿ, ಸಮುದಾಯದ ಸದಸ್ಯರುಗಳಿಗೆ ಒಗ್ಗಟ್ಟಾಗಿರಲು ಮನವಿ ಮಾಡಿದರು.

ಸಿಕಂದರಾಬಾದಿನಿಂದ ಬಾಬಾಸಾಹೇಬ ಅಂಬೇಡ್ಕರ್ ಅವರು ಮುಂಬೈಯಿಗೆ ಹೋದ ಮೇಲೆ, ಡಿಪ್ರೆಸ್ಡ್ ಕ್ಲಾಸ್ ಅಸೋಸಿಯೇಶನ್ ಸದಸ್ಯರು ಕೊಟ್ಟಿದ್ದ ಮನವಿ ಪತ್ರವನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಅದಕ್ಕೆ ಪ್ರತಿಯಾಗಿ ಅವರು ಟೆಲಿಗ್ರಾಂ ಮೂಲಕ ತಮ್ಮ ಇಚ್ಛೆಯನ್ನು ಫೆಡರೇಶನ್ನಿಗೆ ತಿಳಿಸಿದರು. ಎರಡು ಸಂಘಟನೆಗಳು ಪರಿಶಿಷ್ಟ ಜಾತಿಗಳ ಸಂಘಟನೆಯಡಿಯಲ್ಲಿಯೇ ತಮ್ಮ ಮನವಿಯನ್ನು ಸಲ್ಲಿಸಬೇಕೆಂದು ತಿಳಿಸಿದರು. ಆದರೆ ಫೆಡರೇಶನ್ನಿನ ಜನರಲ್ ಸೆಕ್ರೆಟರಿಯಾಗಿದ್ದ ಪಿ. ವಿ. ಮನೋಹರ್‌ಅವರು ಪತ್ರಿಕಾ ಹೇಳಿಕೆಯನ್ನು ಕೊಟ್ಟು, ಫೆಡರೇಶನ್ನಿನ ಸ್ಥಾನಮಾನವನ್ನು ತಿಳಿಸಿದರು. ಅದು ಹೀಗೆ ಇದೆ: ''ಹೈದರಾಬಾದ್ ರಾಜ್ಯ ಪರಿಶಿಷ್ಟ ಜಾತಿಗಳ ಸಂಘಟನೆ ಮತ್ತು ಡಿಪ್ರೆಸ್ಡ್ ಕ್ಲಾಸ್ ಅಸೋಸಿಯೇಶನ್ ಇವುಗಳು ನೀಡಿದ ಆಹ್ವಾನವನ್ನು ಗೌರವಾನ್ವಿತ ಡಾ|| ಅಂಬೇಡ್ಕರ್ ಅವರು ಒಪ್ಪಿಕೊಂಡು, ಇಲ್ಲಿಗೆ ಬಂದು ಹೋದುದರ ಕುರಿತು ತಪ್ಪಾಗಿ ಅರ್ಥೈಸಲಾಗಿದೆ. ಆದ್ದರಿಂದ ನಾನು ಇದನ್ನು ಸರಿಪಡಿಸುವ ಪ್ರಯತ್ನ ಮಾಡುವೆ. ಗೌರವಾನ್ವಿತ ಅಂಬೇಡ್ಕರ್ ಅವರು ಯಾವುದೊಂದು ಆಹ್ವಾನವನ್ನೂ ಡಿಪ್ರೆಸ್ಡ್ ಕ್ಲಾಸುಗಳ ಫೆಡರೇಶನನಿಂದ ಸ್ವೀಕರಿಸಿರಲಿಲ್ಲ. ಅಂಬೇಡ್ಕರ್ ಅವರು ರೈಲಿನಲ್ಲಿರುವಾಗ ಬಿ. ಎಸ್. ವೆಂಕಟರಾವ್ ಅವರನ್ನೂ ಅವರ ಹತ್ತಿರ ಬಿಟ್ಟುಕೊಡಲಿಲ್ಲ. ಆದರೆ ಶ್ರೀಯುತ ಜೆ.ಎಚ್.ಸುಬ್ಬಯ್ಯನಿಗೆ ಟೆಲಿಗ್ರಾಂನ ಮೂಲಕ ತಾವು ಬರುವ ದಿನಾಂಕ ಮತ್ತು ಸಮಯವನ್ನು ತಿಳಿಸಿದ್ದರು. ಹಾಗೆಯೇ ಅಜಾಗರೂಕತೆಯ ಕಾರಣ ಈ ಟೆಲಿಗ್ರಾಂಅನ್ನು ಶ್ರೀಯುತ ಬಿ. ಎಸ್. ವೆಂಕಟರಾವ್‌ಗೂ ಕಳಿಸಿದ್ದರು. ಈ ತಪ್ಪು ಅಂಬೇಡ್ಕರ್ ಮತ್ತು ಶ್ರೀ ಬಿ. ಎಸ್. ವೆಂಕಟರಾವ್ ಪರಿಧಿಗೆ ಆವರಿಸಿತು. ಆ ಟೆಲಿಗ್ರಾಮ್ ತಪ್ಪಾಗಿ ಈತನಿಗೆ ಬಂದಿರುವುದರಿಂದ, ಅವರೂ ಕೂಡ ಒಂದು ಸ್ವಾಗತ ಹಾಗೂ ಸಭೆಯೊಂದನ್ನು ಫೆಡರೇಶನ್ ವತಿಯಿಂದ ಇಟ್ಟುಕೊಂಡರು. ಅದಕ್ಕಾಗಿಯೇ ಶ್ರೀಯುತ ಬಿ. ಎಸ್. ವೆಂಕಟರಾವ್ ತನ್ನ ಸಿದ್ಧತೆಯೊಂದಿಗೆ ಹೋದ ಅವರು ವೈಯಕ್ತಿಕವಾಗಿ ಸ್ವಾಗತಿಸಲು ಹೋದಾಗ, ಅಲ್ಲಿದ್ದ ಸುಬ್ಬಯ್ಯನ ಕಡೆಯವರು ಈತನನ್ನು ಅಲ್ಲಿಂದ ಹೊರಹಾಕಿದರು. ಈ ಒಂದು ಕಾರಣದಿಂದ ಅನಾವಶ್ಯಕವಾದ ಅಡಚಣೆ ಮತ್ತು ತಪ್ಪು ತಿಳುವಳಿಕೆ ಜನತೆಯಲ್ಲುಂಟಾಯಿತು.''

ಆದರೆ ಬಹು ಆಶ್ಚರ್ಯಕರವಾದ ಈ ಸಂಗತಿ ಕುರಿತು ಮಾಧ್ಯಮಗಳು ಜನತೆಯಲ್ಲಿ ತಪ್ಪು ಮಾಹಿತಿಯನ್ನು ನೀಡಿದವು. ಅದೇನೆಂದರೆ ''ಡಾ|| ಅಂಬೇಡ್ಕರ್ ಅವರು ಎರಡು ಸ್ಪರ್ಧಾತ್ಮಕ ಸಂಘಟನೆಗಳಿಂದ ಆಹ್ವಾನವನ್ನು ಸ್ವೀಕರಿಸುವ ಮುನ್ನ ವಾಸ್ತವಿಕವಾಗಿ ನನ್ನ (ಮನೋಹರ್) ಅಥವಾ ಶ್ರೀಯುತ ಜೆ.ಎಚ್.ಸುಬ್ಬಯ್ಯ, ಅಧ್ಯಕ್ಷ, ಹೈದರಾಬಾದ್ ರಾಜ್ಯ ಪರಿಶಿಷ್ಟ ಜಾತಿಗಳ ಸಂಘಟನೆ ಮೂಲಕ ಇವರು ಯಾರು ಎಂಬುದನ್ನು ತಿಳಿದುಕೊಳ್ಳಬೇಕಾಗಿತ್ತು. ಈ ವಿಷಯದಲ್ಲಿ ತುಂಬ ನಯವಾಗಿ ಮಾಧ್ಯಮಗಳು ಕೆಲಸ ಮಾಡಿದವು. ಡಿಪ್ರೆಸ್ಡ್ ಕ್ಲಾಸ್ಗಳ ಫೆಡರೇಶನ್‌ಅನ್ನು ಅಂಬೇಡ್ಕರ್ ಮತ್ತು ಪರಿಶಿಷ್ಟ ಜಾತಿಗಳ ಸಂಘಟನೆಯ ವಿರುದ್ಧ ಎತ್ತಿಕಟ್ಟುವ ಕೆಲಸ ಮಾಡಿದ್ದು, ಮಾಧ್ಯಮದವರು ಜನತೆಯಲ್ಲಿ ತಪ್ಪು ತಿಳುವಳಿಕೆಯನ್ನು ಮೂಡಿಸುವುದೇ ತಮ್ಮ ಕರ್ತವ್ಯವೆಂಬ ಶಪಥ ಮಾಡಿದಂತಿತ್ತು. ವಾಸ್ತವದೊಂದಿಗೆ ಸುಳ್ಳೂ ಸೇರಿ ಪ್ರಚಾರ ಪಡೆಯಿತು''.

ಅಂಬೇಡ್ಕರ್ ಅವರು ಸಿಕಂದರಾಬಾದಿಗೆ ಭೇಟಿ ನೀಡಿದ್ದು, ಕೇವಲ ಕಾರ್ಯಕರ್ತರಲ್ಲಿ ಉತ್ಸಾಹವನ್ನು ತುಂಬುವುದು ಮಾತ್ರವಾಗಿರದೆ, ಅದು ಪರಿಶಿಷ್ಟ ಜಾತಿಗಳ ಸಂಘಟನೆಯ ನಾಯಕರಿಗೆ ಪ್ರೇರಣೆಯಾಯಿತು. ಯಾವತ್ತು ಬಾಬಾಸಾಹೇಬ ಅಂಬೇಡ್ಕರ್ ಅವರು ಈ ಸಂಘಟನೆಯ ಆಹ್ವಾನವನ್ನು ಒಪ್ಪಿಕೊಂಡರೋ, ಅದುವೇ ಈ ಸಂಘಟನೆಯ ಪ್ರಾತಿನಿಧ್ಯ ಮತ್ತು ನಾಯಕತ್ವದ ವಿಶ್ವಾಸಾರ್ಹತೆಯನ್ನು, ಕಾರ್ಯಕರ್ತರಲ್ಲಿ ಆಶಾ ಭಾವನೆಯನ್ನುಂಟುಮಾಡಿತು. ಇದು ಈ ಸಂಘಟನೆಯ ಚಟುವಟಿಕೆಗಳನ್ನು ಯಾವುದೇ ಭಯವಿಲ್ಲದೆ ನಡೆಸಲು ಮತ್ತು ಸಂಘಟನೆಯ ಗೌರವ ಮತ್ತು ಪ್ರತಿಷ್ಠೆಯನ್ನು ಕಾಯ್ದುಕೊಳ್ಳಲು ಕಾರ್ಯಕರ್ತರಿಗೆಂದೇ ನೀಡಿದ ಪರವಾನಗಿ ಆಯಿತು. ಅಲ್ಲದೆ ಈ ಸಂಘಟನೆಯ ನಾಯಕರಲ್ಲಿ ಗೌರವ ಮತ್ತು ಚೈತನ್ಯ ಮೂಡಿಸಿತು. ಆದರೆ ಎಲ್ಲವೂ ಅಂದುಕೊಂಡಂತೆ ನಡೆಯುವುದಿಲ್ಲ. ಎರಡು ಪ್ರಮುಖ ಭಿನ್ನಾಭಿಪ್ರಾಯವುಳ್ಳ ಬಣಗಳು ಸದಾ ತಮ್ಮ ಪ್ರತಿಷ್ಠೆಯನ್ನು ಮೆರೆಯಲು ಕಾದಾಡುತ್ತಿದ್ದವು. ಯಾವತ್ತೂ ಅಂಬೇಡ್ಕರ್ ಅವರ ಭೇಟಿ ತಮಗೆ ಸಿಗಲಿಲ್ಲವೆಂದು ಅಸಮಾಧಾನದಿಂದಲೇ ಇದ್ದ ವೆಂಕಟರಾವ್ ಸಾಮಾನ್ಯನಾಗಿರಲಿಲ್ಲ. ಈತನು ಮುಖಭಂಗಿತನಾಗಿ ಸುಬ್ಬಯ್ಯನ ನಾಯಕತ್ವವನ್ನು ಒಪ್ಪಿಕೊಳ್ಳಲಿಲ್ಲ. ಅವನಿಂದ ಹೊರಗಿದ್ದು, ಸಂಘಟನೆಯ ಕೆಲಸ ಮಾಡತೊಡಗಿದ. ಈತನು ವಿಕ್ಟರಿ ಪ್ಲೆಗ್ರೌಂಡಿನಲ್ಲಿ ಡಾ|| ಅಂಬೇಡ್ಕರ್ ಅವರ ನಾಯಕತ್ವವನ್ನು ನಿರಾಕರಿಸುವ ಕುರಿತು ಹೊರಡಿಸಿದ್ದ ಗೊತ್ತುವಳಿಯು ಸುಮ್ಮನೆ ಹೆದರಿಸಲು ಮಾತ್ರ ಮಾಡಿದ್ದಲ್ಲ. ನಾಂಪಲ್ಲಿಯ ರೈಲ್ವೆ ಸ್ಟೇಷನ್‌ನಲ್ಲಿ ನಡೆದ ಆ ಕೆಟ್ಟ ಘಟನೆಯು ಈತನ ಮನಸ್ಸನ್ನು ಬಾಧಿಸಿತ್ತು. ಅದರ ಪರಿಣಾಮವಾಗಿ ಸುಬ್ಬಯ್ಯನ ಮೇಲೆ ಸೇಡು ತೀರಿಸಿಕೊಳ್ಳಲು ಪ್ರತೀಕಾರದ ಪ್ರತಿಜ್ಞೆ ಮಾಡಿದ. ಈತನಿಗೆ ಡಿಪ್ರೆಸ್ಡ್ ಕ್ಲಾಸ್‌ಗಳ ಸಂಘಟನೆಯಲ್ಲಿ ಆತ್ಮವಿಶ್ವಾಸವಿತ್ತು. ಅದು ಈತನನ್ನು ಹುರಿದುಂಬಿಸಿ, ಶಕ್ತಿತುಂಬಿ, ರಾಜಕೀಯ ಕ್ಷೇತ್ರದಲ್ಲಿ ಬೆಳೆಯುವುದಕ್ಕೆ ಕಾರಣವಾಯಿತು.

ಆ ಸಂದರ್ಭದಲ್ಲಿ ಸಮಾನ ಧ್ಯೇಯವುಳ್ಳ ಎರಡು ಸಂಘಟನೆಗಳು ಸ್ಪರ್ಧಾತ್ಮಕವಾಗಿ ತಮ್ಮ ಚಟುವಟಿಕೆಗಳಲ್ಲಿ ತೊಡಗಿದ್ದವು. ಅವು ಮಾನಸಿಕವಾಗಿ ದೂರದಲ್ಲಿಯೇ ನಿಂತವು. ಅವುಗಳನ್ನು ಒಂದುಗೂಡಿಸುವುದು ಸಾಧ್ಯವೇ ಇಲ್ಲದಂತಾಯಿತು. ಅವು ಸಂಧಾನಕ್ಕೆ ಮನಸ್ಸು ಮಾಡುವ ಸ್ಥಿತಿಯಲ್ಲಿರಲಿಲ್ಲ. ಹೀಗೆ ಡಾ|| ಬಾಬಾಸಾಹೇಬ ಅಂಬೇಡ್ಕರ್ ಅವರು ನಿಜಾಂ ಸಂಸ್ಥಾನಕ್ಕೆ ಭೇಟಿ ಕೊಟ್ಟಾಗ, ಅಲ್ಲಿನ ಸ್ಥಿತಿ ಹೀಗಿತ್ತು. ಇಲ್ಲಿಯ ನಾಯಕರು ಮತ್ತು ಇಂತಹ ಕಾರ್ಯಕರ್ತರ ನಡವಳಿಕೆಯಿಂದ ಅವರು ತುಂಬ ನೊಂದುಕೊಂಡರು. ಮುಖ್ಯವಾಗಿ ನಾಯಕತ್ವದ ಮತ್ತು ವೈಯಕ್ತಿಕ ಪ್ರತಿಷ್ಠೆಗಾಗಿ ಈ ಜನರು ಹೀಗೆ ಕಚ್ಚಾಡಿದ್ದು ಸರಿಯಲ್ಲ ಅನ್ನಿಸುತ್ತದೆ. ಆದರೆ ಈ ಎರಡು ಸಂಘಟನೆಗಳು ಬಹು ಮಹತ್ವ ಸಮಾಜ ಸುಧಾರಣೆಯ ಕಾರ್ಯಗಳನ್ನು ಮಾಡಿದವು. ಇದಿಷ್ಟು ಡಾ|| ಅಂಬೇಡ್ಕರ್ ಅವರು ನಿಜಾಂ ಸಂಸ್ಥಾನಕ್ಕೆ ನೀಡಿದ ಪ್ರಥಮ ಭೇಟಿಯ ಸಂದರ್ಭದ ಕೆಲವು ಮಾಹಿತಿಗಳು. ದಲಿತರು ಚರಿತ್ರೆಯನ್ನು ಕಟ್ಟಿಕೊಳ್ಳುವಾಗ ಈ ಕೆಲವು ಅಂಶಗಳನ್ನು ಗಮನಿಸಬೇಕಾಗುತ್ತದೆ. ಚಳವಳಿ ಮತ್ತು ಹೋರಾಟಗಳೆಂದರೆ ಅವು ಸ್ನೇಹದ ಗೂಡೇನೂ ಆಗಿರುವುದಿಲ್ಲ. ಅಲ್ಲಿಯೂ ಅನೇಕ ಭಿನ್ನಾಭಿಪ್ರಾಯ, ವೈಯಕ್ತಿಕ ಹಿತಾಸಕ್ತಿ, ಗುಂಪುಗಾರಿಕೆ, ವ್ಯಕ್ತಿಪ್ರತಿಷ್ಠೆ ಮುಂತಾದುವುಗಳು ಇದ್ದೇ ಇರುತ್ತವೆ. ಆದರೆ ಈ ಎಲ್ಲವುಗಳನ್ನು ಮೀರಿದಾಗ ಮಾತ್ರ ಒಂದು ಸಂಘಟನೆಯಾಗಲಿ ಚಳವಳಿಯಾಗಲಿ ಯಶಸ್ವಿಯಾಗಬಲ್ಲದು.

**ಡಾ|| ಲಿಂಗಣ್ಣ ಗೋನಾಲ**
ಅಸಿಸ್ಟೆಂಟ್ ಪ್ರೊಫೆಸರ್, ಕನ್ನಡ ವಿಭಾಗ, ಯೂನಿವರ್ಸಿಟಿ ಕಾಲೇಜ್ ಆಫ್ ಆರ್ಟ್ಸ್ ಅಂಡ್ ಸೈನ್ಸಸ್
ಉಸ್ಮಾನಿಯ ವಿಶ್ವವಿದ್ಯಾಲಯ, ಹೈದರಾಬಾದ್



ಕಾವ್ಯ, ಕತೆ, ಕಾದಂಬರಿ ಹಾಗೂ ವೈಚಾರಿಕ ಬರಹಗಳ ಮೂಲಕ ನಿರಂತರವಾಗಿ ಸಾಮಾಜಿಕ ಬದ್ಧತೆಯನ್ನು ಜೀವನಧರ್ಮದಂತೆ ನಿರ್ವಹಿಸಿದರು. ಈ ದೇಶದ ಆಲೋಚನಾ ಸ್ತರದಲ್ಲಿಯೇ ಬೆರೆತುಹೋಗಿರುವ ವರ್ಣ ವ್ಯವಸ್ಥೆಯ ಕಹಿಯನ್ನು ತಣ್ಣಗೆ ಅರುಹುವ 'ತಲೆಮಾರು' ಕಾದಂಬರಿ; 'ಬಿರುಗಾಳಿ' ಎಂಬ ಕೃತಿ ಒತ್ತಾಯಿಸುವ ಪ್ರತಿಭಟನೆಯ ಸ್ಥಿತಿ; ಮಾರ್ಕ್ಸವಾದದ ಕಲಾ ಸಿದ್ಧಾಂತವನ್ನು ಪ್ರತಿಪಾದಿಸುವ ಜಾರ್ಜ ಲುಕಾಕ್ಸನ ಕೃತಿಯ ಅನುವಾದ ಸಮಾಜವಾದಿ ವಾಸ್ತವ; ವರ್ಣದಿಂದ ವರ್ಗದೆಡೆಗೆ ಎಂಬ ಕೃತಿ ಇವೆಲ್ಲ ಭಂಡಾರಿಯವರ ವೈಚಾರಿಕ ಸ್ಪಷ್ಟತೆಯ ಸಾಕ್ಷಿಯಂತಿವೆ. ಕನ್ನಡದ ಪ್ರಜ್ಞೆಯನ್ನು ವಿಸ್ತರಿಸುವಂತಿವೆ.

ಬದ್ಧತೆಯಲ್ಲಿ ಬದುಕಿದ್ದರು. ತತ್ವವನ್ನು ಬದುಕಲು ಬೇಕಾದ ಸ್ಥೈರ್ಯ ಹಾಗೂ ಬದುಕುವಾಗ ಕೆರುವ ಬೆಲೆ ಈ ಎರಡೂ ಅವರಿಗೆ ಸಹಜವಾಗಿತ್ತು. ಇದರ ಪರಿಣಾಮವಾಗಿ ಅವರ ಮಾತು-ಬರಹಗಳಲ್ಲಿ ತೀಕ್ಷ್ಣ ಪ್ರತಿರೋಧವಿರುತ್ತಿತ್ತು. ಆದರೆ ತಾತ್ವಿಕ ವಿರೋಧವನ್ನು ವ್ಯಕ್ತಿದ್ವೇಷದ ಮಟ್ಟಕ್ಕೆ ಇಳಿಸಿಕೊಳ್ಳದ ಖಚಿತ ಮಾರ್ಕ್ಸವಾದಿಯಾಗಿದ್ದರು.

ನನ್ನ ಜಿಲ್ಲೆಯ ಈ ಹಿರೀಕರನ್ನು ನಾನು ನೋಡಿದ್ದು ಬಂಡಾಯ ಸಾಹಿತ್ಯದ ಕಾರ್ಯಕ್ರಮಗಳಲ್ಲಿ. ೧೯೯೦ರಲ್ಲಿ ರಾಣೆಬೆನ್ನೂರಿನಲ್ಲಿ ನಡೆದ ಬಂಡಾಯ ಜಿಲ್ಲಾ ಸಮ್ಮೇಳನದಲ್ಲಿ ನಾನು ಮೊದಲು ಪ್ರಬಂಧ ಓದಿದ್ದೆ. ''ಓಹೋಹೋ... ನಮ್ಮೂರಿನವಳು ನೀನು'' ಅಂತ

# ನೆನೆ ಮನವೆ...

ತನ್ನ ನೆಲವನ್ನು ಹೃದಯದ ಭಾಗವಾಗಿಸಿ ಕೊಂಡಿದ್ದವರು ರೋಹಿದಾಸ ವಿಠಲ್ ಭಂಡಾರಿಯವರು. ಶರಾವತಿಯ ಮೃದು ಮಡಿಲಿನಲ್ಲಿ ಅಸಮಾನತೆಯ ವಿರುದ್ಧದ ಹೆಮ್ಮರದಂತೆ ಬದುಕಿದ್ದರು. ಕಳೆದ ಅಕ್ಟೋಬರ್ ೨೫ರಂದು ಉತ್ತರ ಕನ್ನಡದ ಈ ಬಂಡಾಯದ ಧ್ವನಿ ನಿಂತಿತು. ತೆಳುದೇಹದ ಹರಿತ ಕಣ್ಣುಗಳ ಸದಾ ಲವಲವಿಕೆಯ ಭಂಡಾರಿಯವರು ಸಾವಿನ ಸನಿಹದಲ್ಲಿ ಜೀವ-ಸಾವಿನ ಗುದುಮುರಿಗೆಯಲ್ಲಿ ನುಗ್ಗಾಗಿದ್ದರು. ಹೊನ್ನಾವರ ತಾಲೂಕಿನ ಕೆರೆಕೋಣ ಎಂಬ ಪುಟ್ಟ ಹಳ್ಳಿಯಲ್ಲಿದ್ದ ಭಂಡಾರಿಯವರು ವೃತ್ತಿಯಲ್ಲಿ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿದ್ದರು. ಆದರೆ ಬದುಕನ್ನು ಕಳ್ಳಿಗೆ ಹಚ್ಚಿಕೊಂಡು ಅಂಗುಲ ಅಂಗುಲ ಬೆಳೆಯುತ್ತ ತಮ್ಮ ವ್ಯಕ್ತಿತ್ವಕ್ಕೆ ಹಲವು ಚಹರೆಗಳನ್ನು ರೂಪಿಸಿಕೊಂಡಿದ್ದರು. ಶಿಕ್ಷಕರಾಗಿ, ಲೇಖಕರಾಗಿ, ಚಿಂತಕರಾಗಿ, ಸಂಘಟಕರಾಗಿ, ಯಕ್ಷಗಾನ ತಾಳಮದ್ದಳೆ ಅರ್ಥಧಾರಿಗಳಾಗಿ ಎಡ ಪಂಥೀಯ ಆಲೋಚನೆಗಳ ಸ್ಪಷ್ಟ ನಿಲುವಿನವರಾಗಿ ತಮ್ಮನ್ನು ತಾವು ನಿರ್ಮಿಸಿಕೊಂಡರು. ಓದಿನ ಅದಮ್ಯ ಪ್ರೀತಿ ಮತ್ತು ನಿರಂತರ ಶ್ರಮ ಅವರ ಗುಣವಾಗಿತ್ತು. ಇಂಗ್ಲಿಷ್ ಮತ್ತು ಕನ್ನಡದಲ್ಲಿ ಸ್ನಾತಕೋತ್ತರ ಪದವಿ ಪಡೆದುಕೊಂಡ ಭಂಡಾರಿಯವರು ಮಂಗಳೂರು ವಿಶ್ವ ವಿದ್ಯಾಲಯದಿಂದ ಕನ್ನಡ ಕಾದಂಬರಿಗಳಲ್ಲಿ (ಪ್ರಗತಿಶೀಲ) ವರ್ಣ ಮತ್ತು ವರ್ಗ ಸಂಘರ್ಷದ ವಿಷಯವಾಗಿ ಪಿಎಚ್.ಡಿ. ಪದವಿಯನ್ನು ೧೯೯೫ರಲ್ಲಿ ಪಡೆದರು.

ಶಿಕ್ಷಕ ವೃತ್ತಿಯನ್ನು 'ಉದ್ಯೋಗ' ಎಂಬ ದೂರದಿಂದ ಎಂದೂ ನೋಡಿದವರಲ್ಲ. ಪುಟ್ಟ ಮಕ್ಕಳೆಂದರೆ ಜೀವಶಕ್ತಿಯ ಸಂಕೇತಗಳೆಂದು ತಿಳಿದಿದ್ದರು. ಮಕ್ಕಳಿಗೆ ನಿಸರ್ಗ ಸಹಜ ಪಾಠದ ಪ್ರಯೋಗ, ಸ್ವತಃ ಮಾಡೆಲ್‌ಗಳನ್ನು ತಯಾರುಮಾಡಿ ಪಾಠ ಮಾಡುವ ಕಮಿಟಮೆಂಟ, ಮಕ್ಕಳಿಗಾಗಿ ಕವಿತೆ, ನಾಟಕ ರಚನೆ, ಮಕ್ಕಳ ನಾಟಕ ಪ್ರಯೋಗ ಇವೆಲ್ಲವನ್ನೂ ಸಾಧ್ಯವಾಗಿಸಿಕೊಂಡರು. ಬೆಳಕು ಹಂಚಿದ ಬಾಲಕ, ನಾನೂ ಗಾಂಧೀ ಆಗ್ತೇನೆ, ಕಣ್ಣೇ ಕಟ್ಟೇ ಕಾಡೇ ಗೂಡೇ ಇವು ಭಂಡಾರಿಯವರ ಶಿಕ್ಷಕ ಬದುಕು ಮಕ್ಕಳಿಗೆ ಕೊಟ್ಟ ಕೊಡುಗೆಗಳು.

ಬಂಡಾಯ ಚಳುವಳಿಯೊಂದಿಗೆ ಕರುಳುಬಳ್ಳಿಯ ಸಂಬಂಧವನ್ನು ಹೊಂದಿದ್ದರು. ೧೯೮೨ರಲ್ಲಿ ಜಿಲ್ಲಾ ಬಂಡಾಯ ಸಾಹಿತ್ಯ ಸಮ್ಮೇಳನವನ್ನು ಸಿದ್ಧಾಪುರದಲ್ಲಿ ಸಂಘಟಿಸಿದ್ದರು. ಉತ್ತರ ಕನ್ನಡದಲ್ಲಿ ಚಿಂತನ ವೇದಿಕೆಯನ್ನು ಹುಟ್ಟುಹಾಕಿದ್ದರು. ಸ್ವಾತಂತ್ರ್ಯ, ಸಮಾನತೆ, ಪ್ರಜಾಸತ್ತಾತ್ಮಕ, ಕೋಮುಸೌಹಾರ್ದ, ಜಾತ್ಯತೀತ, ಸಮಾಜವಾದಿ ಚಿಂತನೆಯ ಜನಪರ ಕಾಳಜಿಯ




ನವಕರ್ನಾಟಕ ಪ್ರಕಾಶನವು
ಆರ್. ವಿ. ಭಂಡಾರಿ ಅವರ ಮಕ್ಕಳ ಕಾದಂಬರಿ
'ಯಶವಂತನ ಯಶೋಗೀತ'ವನ್ನು ಪ್ರಕಟಿಸಿದೆ.
ಈ ಕೃತಿಗೆ ೨೦೦೨ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ
'ಸಿ. ಸು. ಸಂಗಮೇಶ' ಪ್ರಶಸ್ತಿ ಹಾಗೂ
೨೦೦೨ರ ಸಾಲಿನ ಕರ್ನಾಟಕ ಸಾಹಿತ್ಯ
ಅಕಾಡೆಮಿ ಪ್ರಶಸ್ತಿ ಸಂದಿವೆ.

ಕುಶಾಲು ಬೆರೆತ ಅಭಿಮಾನದಲ್ಲಿ ಮಾತಾಡಿಸಿದ್ದರು. ಗದಗ ಜಿಲ್ಲೆಯ ಮುಂಡರಗಿಯಲ್ಲಿ ನಡೆದ ಬಂಡಾಯ ಸಮ್ಮೇಳನದಲ್ಲಿ ಬಳ್ಳಾರಿಯ ಲೋಹಿಯಾ ಪ್ರಕಾಶನದ ಚೆನ್ನಬಸವಣ್ಣ ಅವರ ಪುಸ್ತಕ ಮಳಿಗೆಯಲ್ಲಿ 'ನೋಡಿ, ಇವಳ ಪ್ರಬಂಧವನ್ನ ಪುಸ್ತಕವಾಗಿ ತನ್ನಿ' ಎಂದಿದ್ದರು. ಹೀಗೆ ಅಯಾಚಿತವಾಗಿ ಹಿರೀಕನ ಕೆಲಸವನ್ನು ನಿರ್ವಹಿಸಿ ಬಿಡುತ್ತಿದ್ದರು. ಅವರೊಡನೆ ಮಾತನಾಡುವಾಗೆಲ್ಲ ಸಹ್ಯಾದ್ರಿಯ ಮರದ ನೆರಳಿನ ಅನುಭವವಾಗುತ್ತಿತ್ತು. ಇವರು 'ದೊಡ್ಡವರು' ಅಂತ ನನ್ನಂಥ ಕಿರಿಯರು ಮುಜುಗರಪಟ್ಟುಕೊಳ್ಳದಷ್ಟು ಸರಳವಾಗಿರುತ್ತಿದ್ದರು. ದಟ್ಟ ಮರದ ಎಲೆಎಲೆಗಳನ್ನು ಹೊಕ್ಕು ಹೊರಬರುವ ಗಾಳಿಯಷ್ಟು ಸಲೀಸಾಗಿ ಅವರ ಅನುಭವವನ್ನು ಹೊಕ್ಕು ಬರಬಹುದಿತ್ತು. ತಿಳಿವಿನ ತಂಪು ಪಡೆಯಬಹುದಿತ್ತು.

ಕಳೆದ ಎರಡು ವರ್ಷದ ಹಿಂದೆ ಧಾರವಾಡದಲ್ಲಿ ನಡೆದ ಒಂದು ಸೌಹಾರ್ದ ಕಾರ್ಯಕ್ರಮಕ್ಕೆ ಬಂದಿದ್ದರು. ಯಾಕೋ ಸೋತವರಂತಿದ್ದರು. ಎಂಥದೋ ಭಾವೋದ್ವೇಗವನ್ನು ಅದುಮಿಟ್ಟುಕೊಳ್ಳುತ್ತ ಬಾಯಿ ಕಟ್ಟಿದವರಂತಿದ್ದರು. ಕಡೆಗೆ, ''ನಾವು ಹೀಗೆ ಎಲ್ಲಕ್ಕೂ ಜಗಳ ಮಾಡ್ತಾ ಇರುವಾ. ಅಲ್ಲಿ ನಮ್ಮೂರಲ್ಲಿ ನೆಟ್ಟಗೆ ಡಾಂಬರು ಕಾಣದ ನಮ್ಮೂರಲ್ಲಿ ಲಾಟಿ-ಚೆಡ್ಡಿ ಬಂದಿದೆ. ಗೊತ್ತುಂಟಾ ?'' ಎಂದು ವೇದಿಕೆ ಇಳಿದರು. ಕೋಮುವಾದದ ಕರಾಳತೆ ವ್ಯಾಪಕವಾಗುತ್ತಿರುವ ದಿನಗಳಲ್ಲಿ, ಪ್ರಗತಿಪರ ಚಿಂತನೆಯ ಸಾಕ್ಷೀಪ್ರಜ್ಞೆಯಂತಿದ್ದ ಭಂಡಾರಿಯವರ ಸಾವಿಗೆ ನನ್ನ ನೆಲದ ಸಂವೇದನೆಯ ಭಾಗವೊಂದು ಸ್ತಬ್ಧವಾದಂತಾಗಿದೆ.

ಸಾವಿನ ಬಗ್ಗೆ ಎಷ್ಟೆಲ್ಲ ಕೇಳಿದ್ದೇವೆ. ಆದರೆ ಸಾವಿನ ನಡುಕಕ್ಕೆ ಮದ್ದೆಲ್ಲಿ? ಮತ್ತೆ ಮತ್ತೆ ಗಾಯಕ್ಕೆ ನೆನಪಿನ ಮುಲಾಮು ಬಳಿದುಕೊಳ್ಳುವುದು ಬಿಟ್ಟು.

'ಹೊಸತು'ವಿನೊಂದಿಗೆ ಅವರಿಗೆ ವಿನಯಪೂರ್ವಕ ಗೌರವ ಅರ್ಪಿಸುತ್ತೇನೆ.


ವಿನಯಾ




# ಬಗೆಹರಿಯದ ಶ್ರೀಲಂಕಾ ತಮಿಳರ ಸಮಸ್ಯೆ

ಸೀಯಾರ್ಕೆ

ಶ್ರೀಲಂಕಾದ ತಮಿಳು ಜನಾಂಗೀಯರ ಸಮಸ್ಯೆ ಪರಿಹಾರ ಕಾಣದ ಕಗ್ಗಂಟು. ಸೈನಿಕ ಕಾರ್ಯಾಚರಣೆಯಿಂದ ಪ್ರಶ್ನೆ ಇತ್ಯರ್ಥ ಸಾಧ್ಯವಿಲ್ಲ ಎಂಬುದನ್ನು ತಿಳಿದಿದ್ದರೂ ಎರಡು ಕಡೆಯವರೂ ಸಶಸ್ತ್ರ ಸಂಘರ್ಷ ಮಾರ್ಗವನ್ನು ತ್ಯಜಿಸಿಲ್ಲ. ಶ್ರೀಲಂಕಾದ ಪ್ರಮುಖ ರಾಜಕೀಯ ಪಕ್ಷಗಳು – ಶ್ರೀಲಂಕಾ ಫ್ರೀಡಮ್ ಪಾರ್ಟಿ ಮತ್ತು ಯುನೈಟೆಡ್ ನ್ಯಾಷನಲ್ ಪಾರ್ಟಿ – ಅಧಿಕಾರ ಗ್ರಹಣಕ್ಕಾಗಿ, ರಾಜಕೀಯ ಲಾಭಕ್ಕಾಗಿ ತಮಿಳರ ಪ್ರಶ್ನೆಯನ್ನು ಬಳಸಿಕೊಳ್ಳುತ್ತಿದ್ದರೆ, ಸ್ವತಂತ್ರ ತಮಿಳು ರಾಜ್ಯ ಸ್ಥಾಪನೆಗಾಗಿ ಸಶಸ್ತ್ರ ಹೋರಾಟದಲ್ಲಿ ತೊಡಗಿರುವ ಎಲ್.ಟಿ.ಟಿ.ಈ. ನಾಡಿನ ಉತ್ತರ ಭಾಗದಲ್ಲಿ ತನ್ನ ವಶದಲ್ಲಿರುವ ತಮಿಳರೇ ಅಧಿಕ ಸಂಖ್ಯೆಯಲ್ಲಿರುವ ಪ್ರದೇಶಗಳ ಮೇಲೆ ನಿಯಂತ್ರಣ ಬಿಗಿಗೊಳಿಸಲು, ವಿಸ್ತರಿಸಲು ಉಪಯೋಗಿಸಿಕೊಳ್ಳುತ್ತಿದೆ. ಕಳೆದ ಇಪ್ಪತ್ತೈದು ವರ್ಷಗಳಿಂದ ಈ ಸೆಣಸಾಟ ನಡೆದುಕೊಂಡು ಬಂದಿದೆ. ಆಗಾಗ್ಗೆ ಅಂತಾರಾಷ್ಟ್ರೀಯ ಒತ್ತಡದಿಂದಲೋ, ಇಲ್ಲ ಪರಿಸ್ಥಿತಿಯ ಒತ್ತಡದಿಂದಲೋ ಯುದ್ಧ ಸ್ತಂಭನ ಒಪ್ಪಂದವಾಗಿ, ಮಾತುಕತೆಗಳು ನಡೆದಿವೆ. ಆದರೆ ಸಮಸ್ಯೆ ಬಗೆಹರಿಯದೆ ಇದೆ. ಶಾಂತಿಯ ಕಾಲಾವಧಿಯನ್ನು ಎರಡೂ ಕಡೆಯವರು ರಾಜಕೀಯ ಲಾಭಕ್ಕಾಗಿ, ಮುಂದಿನ ಕದನಕ್ಕಾಗಿ ಸಜ್ಜು ಆಗುವುದಕ್ಕೆ ಉಪಯೋಗಿಸಿಕೊಂಡಿದ್ದಾರೆ. ಇದೀಗ ಅದೇ ಪುನರಾವರ್ತನೆಯಾಗುವ ಸೂಚನೆಗಳಿವೆ. ಆದರೆ ಪರಿಸ್ಥಿತಿ ತೀರಾ ಭಿನ್ನ. ಎಲ್.ಟಿ.ಟಿ.ಈ. ಹಿಂದೆಂದಿಗಿಂತ ಹೆಚ್ಚು ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದಿದೆ.

ಶ್ರೀಲಂಕಾ ತಮಿಳರ ಪ್ರಶ್ನೆ ಇಂದು ನಿನ್ನೆಯದಲ್ಲ. ಅದು ಬ್ರಿಟಿಷ್ ಸಾಮ್ರಾಜ್ಯಶಾಹಿ ಪಳೆಯುಳಿಕೆ. ಅನಾದಿಕಾಲದಿಂದ ಶ್ರೀಲಂಕಾದಲ್ಲಿ ತಮಿಳರು ವಲಸೆ ಹೋಗಿ ನೆಲೆಸಿದ್ದಾರೆ. ಇವರಲ್ಲಿ ತಮಿಳು ಅರಸರ ಆಳ್ವಿಕೆಯ ಕಾಲದಲ್ಲಿ ಬಂದು ನೆಲೆಸಿದವರು, ವ್ಯಾಪರಕ್ಕಾಗಿ ಬಂದವರು ಇದ್ದಾರೆ. ಇವರೆಲ್ಲ ಶ್ರೀಲಂಕಾದವರೆ ಆಗಿಬಿಟ್ಟಿದ್ದಾರೆ. ತಮಿಳರ ಅಧಿಕ ವಲಸೆ ಪ್ರಾರಂಭವಾದದ್ದು ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ. ಶ್ರೀಲಂಕಾ ಪ್ಲಾಂಟೇಷನ್‌ಗಳಲ್ಲಿ ದುಡಿಯಲು ಇಂಗ್ಲಿಷರು ತಮಿಳರನ್ನು ಕರೆತಂದು ನೆಲೆಗೊಳಿಸಿದರು. ಸ್ವಾತಂತ್ರ್ಯಾನಂತರ ಬಹುತೇಕ ತಮಿಳು ವಲಸೆಗಾರರ ಸ್ಥಿತಿ ಅತಂತ್ರವಾಯಿತು. ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಭಾರತದಿಂದ ಕರೆತಂದ ನೌಕರರಲ್ಲಿ ಕೆಲವರಿಗೆ ಬ್ರಿಟಿಷ್ ನಾಗರಿಕ ಹಕ್ಕನ್ನು ನೀಡಿ, ಕೆಲವರಿಗೆ ಶ್ರೀಲಂಕಾದ ನಾಗರಿಕ ಹಕ್ಕು ನೀಡಿ ಉಳಿದ ಬಹುಸಂಖ್ಯೆಯ ದುಡಿಮೆಗಾರರನ್ನು ನಡುನೀರಿನಲ್ಲಿ ಕೈಬಿಟ್ಟಿತು. ಸ್ವತಂತ್ರ ಭಾರತ ಮತ್ತು ಶ್ರೀಲಂಕಾ ಸರಕಾರಗಳು ಎದುರಿಸಿದ ಮುಖ್ಯ ಸಮಸ್ಯೆ ಈ ತಮಿಳು ವಲಸೆಗಾರರಿಗೆ ಸಂಬಂಧಿಸಿದ್ದಾಗಿತ್ತು. ಎರಡೂ ಸರಕಾರಗಳು ಸುದೀರ್ಘ ಚರ್ಚೆ ನಡೆಸಿ ಒಂದು ಒಪ್ಪಂದಕ್ಕೆ ಬಂದವು. ಈ ಒಪ್ಪಂದದ ಪ್ರಕಾರ ನಿಗದಿತ ಸಂಖ್ಯೆಯ ಜನರಿಗೆ ಶ್ರೀಲಂಕಾದ ಪೌರತ್ವ ನೀಡಿ, ಉಳಿದವರನ್ನು ಭಾರತಕ್ಕೆ ರವಾನಿಸಲಾಯಿತು. ಹಾಗೆ ನಿರಾಶ್ರಿತರಾಗಿ ಬಂದ ಲಕ್ಷಾಂತರ ಮಂದಿಯನ್ನು ಮುಖ್ಯವಾಗಿ ತಮಿಳುನಾಡಿನಲ್ಲಿ, ಭಾರತದ ಇತರ ಭಾಗಗಳಲ್ಲಿ ನೆಲೆಗೊಳಿಸಲಾಯಿತು. ಶ್ರೀಲಂಕಾದ ಉತ್ತರ ಪ್ರಾಂತಗಳಲ್ಲಿ ಅಧಿಕ ಸಂಖ್ಯೆಯಲ್ಲಿ ನೆಲೆಗೊಂಡಿದ್ದ ಅಲ್ಪಸಂಖ್ಯಾತ ತಮಿಳರ ಜೀವನ ಕೆಲಕಾಲ ನಿರಾತಂಕವಾಗಿ ಸಾಗಿತ್ತು. ಮುಂದೆ ಅಧಿಕಾರಕ್ಕೆ ಬಂದ ಶ್ರೀಲಂಕಾ ಸರಕಾರಗಳು ಪ್ರಾರಂಭಿಸಿದ ಸಿಂಹಳೀಕರಣ ತಮಿಳರನ್ನು ಕೆರಳಿಸಿತು. ತಮ್ಮ ಅಸ್ಮಿತೆಯನ್ನು ಕಾಪಾಡಿಕೊಳ್ಳಲು ತಮಿಳು ಅಲ್ಪಸಂಖ್ಯಾತರು ಸಂಘಟಿತರಾಗತೊಡಗಿದರು. ಸರಕಾರದಲ್ಲಿ ನ್ಯಾಯವಾಗಿ ಸಲ್ಲಬೇಕಾಗಿರುವ ಪ್ರಾತಿನಿಧ್ಯ, ಸಮಾನ ಉದ್ಯೋಗಾವಕಾಶ, ತಮಿಳು ಭಾಷೆಗೆ ತಕ್ಕ ಸ್ಥಾನಮಾನ ಮೊದಲಾದವು ಬೇಡಿಕೆಯಾಗಿದ್ದುವು. ಹೋರಾಟ ಮುಂದುವರಿಯುತ್ತಿದ್ದಂತೆ ತಮಿಳು ಉಗ್ರಗಾಮಿಗಳ ತಂಡವೊಂದು ಪ್ರಭಾಕರನ್ ನಾಯಕತ್ವದಲ್ಲಿ ಸ್ವತಂತ್ರ ತಮಿಳು ರಾಜ್ಯದ ಸ್ಥಾಪನೆಯ ಬೇಡಿಕೆ ಮುಂದೊಡ್ಡಿ 'ಲಿಬರೇಶನ್ ಟೈಗರ್ಸ್ ಆಫ್ ತಮಿಳ್ ಈಳಂ (ಎಲ್‌ಟಿಟಿಈ)' ಸಂಸ್ಥೆಯನ್ನು ಸ್ಥಾಪಿಸಿಕೊಂಡಿತು ೧೯೮೦ರ ದಶಕದ ಪ್ರಾರಂಭದಲ್ಲಿ. ಪ್ರತ್ಯೇಕವಾದದ ಚಳವಳಿ ಪ್ರಾರಂಭವಾದದ್ದು ಹೀಗೆ. ಈ ಚಳವಳಿಯನ್ನು ಹತ್ತಿಕ್ಕಲು ಶ್ರೀಲಂಕಾ ಸರಕಾರ ದಬ್ಬಾಳಿಕೆಯನ್ನು ನಡೆಸಿತು. ೧೯೮೩ರಲ್ಲಿ ಸರಕಾರದ ದಬ್ಬಾಳಿಕೆ ಎದುರಿಸಲು ಎಲ್‌ಟಿಟಿಈ ಸಶಸ್ತ್ರ ಹೋರಾಟ ಪ್ರಾರಂಭಿಸಿತು. ಯೂರೋಪಿನ ಹಲವು ದೇಶಗಳಲ್ಲಿ ವಲಸೆಗಾರರಾಗಿ ನೆಲೆಸಿದ್ದ ಶ್ರೀಲಂಕಾ ತಮಿಳರ ಬೆಂಬಲದಿಂದ ಅಗತ್ಯವಾದ ಶಸ್ತ್ರಾಸ್ತ್ರಗಳು, ಹಾಗೂ ಹಣದ ಬೆಂಬಲ ಎಲ್‌ಟಿಟಿಈಗೆ ಒದಗಿತು. ತಮಿಳರು ಅಧಿಕ ಸಂಖ್ಯೆಯಲ್ಲಿ ವಾಸಿಸುತ್ತಿರುವ ಶ್ರೀಲಂಕಾದ ಉತ್ತರದ ಕೆಲ ಪ್ರಾಂತಗಳಲ್ಲಿ ಎಲ್‌ಟಿಟಿಈ ತನ್ನ ಅಧಿಕಾರವನ್ನು ಸ್ಥಾಪಿಸಿಕೊಂಡು ಸರಕಾರದ ವಿರುದ್ಧ ಸಮರವನ್ನೇ ಸಾರಿತು. ಅಂತರ್ಯುದ್ಧದ ಪರಿಸ್ಥಿತಿ ನೆಲೆಗೊಂಡಿತ್ತು ಶ್ರೀಲಂಕಾದಲ್ಲಿ.

ಈ ಸಮರದ ಬಿಸಿ ಭಾರತಕ್ಕೂ ತಟ್ಟದೇ ಹೋಗಲಿಲ್ಲ. ಅಂತರ್ಯುದ್ಧದ ಭರಾಟೆಯಲ್ಲಿ ಸಿಕ್ಕಿಕೊಂಡ ಸಹಸ್ರಾರು ಮಂದಿ ತಮಿಳರು ನಿರಾಶ್ರಿತರಾಗಿ ನೆರೆಯ ತಮಿಳುನಾಡಿಗೆ ವಲಸೆ ಬಂದರು. ತಮಿಳುನಾಡಿನ ಪ್ರಮುಖ ರಾಜಕೀಯ ಪಕ್ಷಗಳು ಪ್ರತ್ಯೇಕವಾದಿಗಳಿಗೆ ನೇರವಾದ ಬೆಂಬಲ ನೀಡದೆ ಹೋದರೂ ಕೆಲವು ತೀವ್ರಗಾಮಿ ಸಂಸ್ಥೆಗಳು ಬೆಂಬಲ ನೀಡುತ್ತಿದ್ದುವು. ತಮಿಳರ ಸಮಸ್ಯೆಯನ್ನು ಶಾಂತಿಯುತವಾಗಿ ಸಂಧಾನದ ಮೂಲಕ ಬಗೆಹರಿಸಲು ಭಾರತ ಸರಕಾರ ಕ್ರಮ ಕೈಗೊಳ್ಳಬೇಕೆಂಬುದು ತಮಿಳುನಾಡಿನ ರಾಜಕೀಯ ಪಕ್ಷಗಳ ಒತ್ತಾಯ. ಆದರೆ ಭಾರತ ಸರಕಾರ ನೇರವಾಗಿ ಮಧ್ಯೆ ಪ್ರವೇಶಿಸಲು ಇರುವ ಅವಕಾಶಗಳು ಕಡಿಮೆ. ಹಾಗಾಗಿ ಇರಸುಮುರಸು.

ಯೂರೋಪಿನ ಕೆಲ ರಾಷ್ಟ್ರಗಳ ಬೆಂಬಲ ಪಡೆದುಕೊಂಡಿದ್ದ ಎಲ್‌ಟಿಟಿಈ ಪ್ರತ್ಯೇಕ ತಮಿಳು ರಾಜ್ಯ ಸ್ಥಾಪನೆಯ ಪ್ರಶ್ನೆಯನ್ನು ಅಂತಾರಾಷ್ಟ್ರೀಯಗೊಳಿಸಲು ನಡೆಸಿದ ಪ್ರಯತ್ನಗಳು ಸಫಲಗೊಳ್ಳಲಿಲ್ಲ. ಆದರೆ ನಾರ್ವೆ ಮುತ್ಸದ್ದಿಗಳು ಮಧ್ಯಸ್ಥಿಕೆ ವಹಿಸಿ







ಕೆಲವರ್ಷಗಳ ಹಿಂದೆ ಶ್ರೀಲಂಕಾ ಸರಕಾರ ಮತ್ತು ಎಲ್‌ಟಿಟಿಈ ನಡುವೆ ಸಂಧಾನಗಳಿಗೆ ವೇದಿಕೆ ಕಲ್ಪಿಸಿ, ಯುದ್ಧ ಸ್ತಂಭನವನ್ನು ಯಶಸ್ವಿಯಾಗಿ ಜಾರಿಗೊಳಿಸಿತು. ಆದರೆ ಪ್ರತ್ಯೇಕವಾದಿಗಳ ಹಠಮಾರಿತನದಿಂದಾಗಿ ಸುದೀರ್ಘ ಕಾಲ ಜರುಗಿದ ಸಂಧಾನಗಳು ಸಫಲಗೊಳ್ಳಲಿಲ್ಲ. ಶ್ರೀಲಂಕಾ ಸರಕಾರ ದೇಶದ ವಿಭಜನೆಗೆ, ಅಂದರೆ ಪ್ರತ್ಯೇಕ ತಮಿಳು ರಾಜ್ಯ ಸ್ಥಾಪನೆಗೆ ಸಿದ್ಧವಿಲ್ಲದಿರುವುದು ಸಹಜ. ಅದು ತಮಿಳರು ಹೆಚ್ಚಿನ ಸಂಖ್ಯೆಯಲ್ಲಿರುವ ಪ್ರಾಂತಗಳಲ್ಲಿ ಅಧಿಕಾರದ ವಿಕೇಂದ್ರೀಕರಣಕ್ಕೆ ಸಿದ್ಧವಾಗಿದೆ. ಹೀಗೆ ಅಂತ್ಯಗೊಂಡ ಸಂಧಾನಗಳ ನಂತರ ಮತ್ತೆ ಸಶಸ್ತ್ರ ಹೋರಾಟ ಮುಂದುವರಿದಿದೆ. ಕೇಂದ್ರ ಸರಕಾರದ ವಿರುದ್ಧ ಹೋರಾಟದಲ್ಲಿ ಆಗಾಗ್ಗೆ ಎಲ್‌ಟಿಟಿಈ ಉಗ್ರರು ನಡೆಸಿದ ಭಯೋತ್ಪಾದನೆ ಕೃತ್ಯಗಳಿಂದಾಗಿ ಅದು ಹಿಂದೆ ಬೆಂಬಲಿಸುತ್ತಿದ್ದ ಐರೋಪ್ಯ ದೇಶಗಳ ಸಹಾನುಭೂತಿಯನ್ನು ಕಳೆದುಕೊಂಡಿದೆ. ಈ ರಾಷ್ಟ್ರಗಳು ಎಲ್‌ಟಿಟಿಈಯನ್ನು ಭಯೋತ್ಪಾದಕ ಸಂಸ್ಥೆ ಎಂದು ಸಾರಿವೆ. ಭಾರತ ಸರಕಾರ ಅದಕ್ಕೆ ಈ ಪಟ್ಟವನ್ನು ಹಿಂದೆಯೇ ಕೊಟ್ಟಿದೆ. ಹಾಗಾಗಿ ಎಲ್‌ಟಿಟಿಈ ಈಗ ತುಂಬಾ ಇಕ್ಕಟ್ಟಿನ ಸ್ಥಿತಿಯಲ್ಲಿದೆ. ತನ್ನ ವಶದಲ್ಲಿದ್ದ ಹಲವು ಪ್ರದೇಶಗಳನ್ನು ಅದು ಕಳೆದುಕೊಂಡಿದೆ. ಶ್ರೀಲಂಕಾ ಸೇನೆ ಮೇಲುಗೈ ಸಾಧಿಸಿಕೊಂಡಿದೆ. ಹೀಗಾಗಿ ಶ್ರೀಲಂಕಾದ ತಮಿಳರ ಪ್ರಶ್ನೆ ಮತ್ತೆ ಪ್ರಾಧಾನ್ಯತೆ ಪಡೆದುಕೊಂಡಿದ್ದು ತಮಿಳು ನಾಗರಿಕರು ದಾಳಿಗೆ ತುತ್ತಾಗಿರುವುದು ತಮಿಳುನಾಡಿನಲ್ಲಿ ಜನರನ್ನು ಕಳವಳಕ್ಕೀಡುಮಾಡಿದೆ. ಆಡಳಿತಾರೂಢ ಹಾಗೂ ಕೇಂದ್ರದ ಪಾಲುದಾರನಾಗಿರುವ ಡಿ.ಎಂ.ಕೆ. ಪಕ್ಷ ಹಾಗೂ ತಮಿಳುನಾಡಿನ ಇತರ ಪಕ್ಷಗಳು ಕೇಂದ್ರ ಸರಕಾರದ ಮಧ್ಯಪ್ರವೇಶಕ್ಕೆ ಒತ್ತಾಯಿಸಿವೆ. ರಾಯಭಾರಿಗಳ ಮಟ್ಟದಲ್ಲಿ ಮಾತುಕತೆ, ಶ್ರೀಲಂಕಾದ ಅಧ್ಯಕ್ಷರು ಹಾಗೂ ಪ್ರಧಾನಿ ನಡುವೆ ನಡೆದ ಮಾತುಕತೆಗಳಲ್ಲಿ ತಮಿಳು ನಾಗರಿಕರ ಸುರಕ್ಷತೆಗೆ ಸೂಕ್ತ ಕ್ರಮ ಕೈಗೊಳ್ಳುವುದಾಗಿ ಶ್ರೀಲಂಕಾ ಸರಕಾರ ಭರವಸೆ ನೀಡಿದೆ. ಹಾಗಾಗಿ ಸದ್ಯಕ್ಕೆ ಕೇಂದ್ರ ಸರಕಾರದ ಮೇಲೆ ಒತ್ತಡ ಕಡಿಮೆಯಾಗಿದೆ. ಯುದ್ಧ ಸ್ತಂಭನ ಹಾಗೂ ಸೈನಿಕ ಕಾರ್ಯಾಚರಣೆ ನಿಲ್ಲಿಸುವಂತೆ ಶ್ರೀಲಂಕಾ ಸರಕಾರದ ಮೇಲೆ ಒತ್ತಡ ತರಲು ಸಾಧ್ಯವಿಲ್ಲ ಎಂಬುದನ್ನು ಭಾರತದ ವಿದೇಶಾಂಗ ಸಚಿವರು ಸ್ಪಷ್ಟಪಡಿಸಿದ್ದಾರೆ. ದಿನೇ ದಿನೇ ಪ್ರಾಬಲ್ಯ ಕಳೆದುಕೊಳ್ಳುತ್ತಿರುವ ಎಲ್‌ಟಿಟಿಈ ಇಂದು ಹತಾಶ ಸ್ಥಿತಿಯಲ್ಲಿದೆ. ಶ್ರೀಲಂಕಾ ಸರಕಾರ ಅಧಿಕಾರ ವಿಕೇಂದ್ರೀಕರಣಕ್ಕೆ ಬದ್ಧವಾಗಿರುವುದಾಗಿ ಘೋಷಿಸಿದೆ. ಮುಂದಿನ ಬೆಳವಣಿಗೆಗಳ ಮೇಲೆ ಶ್ರೀಲಂಕಾ ತಮಿಳರ ಭವಿಷ್ಯ ಅವಲಂಬಿಸಿದೆ.

# ಅಮೆರಿಕ: ಬರಾಕ್ ಒಬಾಮಾ ಬದಲಾವಣೆಯ ಸೂಚಕವೆ ?



ಅಮೆರಿಕದ ಅಧ್ಯಕ್ಷ ಚುನಾವಣೆಯ ಅಬ್ಬರ ಮುಗಿದಿದೆ. ನಮ್ಮ ಪತ್ರಿಕೆಗಳು, ಮಾಧ್ಯಮಗಳು ನೀಡಿದ ಪ್ರಾಮುಖ್ಯತೆ ಮತ್ತು ಪ್ರಚಾರವನ್ನು ಗಮನಿಸಿದರೆ ಚುನಾವಣೆ ಭಾರತದಲ್ಲೇ ನಡೆಯುತ್ತಿದೆಯೋ ಏನೋ ಎನ್ನುವಂತಿತ್ತು. ಅದು ಹಾಗಿರಲಿ. ಚುನಾವಣೆಗಳಲ್ಲಿ ಡೆಮಾಕ್ರಟಿಕ್ ಪಕ್ಷದ ಅಭ್ಯರ್ಥಿ ಆಫ್ರಿಕನ್ ಅಮೆರಿಕನ್ ಎಂದು ಗೌರವಾನ್ವಿತವಾಗಿ ಕರೆಯುವ ಕರಿಯ ಜನಾಂಗದ ಬರಾಕ್ ಒಬಾಮಾ ನಿಚ್ಚಳ ಬಹುಮತದಿಂದ ಆಯ್ಕೆಗೊಂಡಿರುವುದು ಮಹತ್ತರವಾದ ಬೆಳವಣಿಗೆ ಹಾಗೂ ಐತಿಹಾಸಿಕ ವಿಜಯ. ಗುಲಾಮಗಿರಿಯಲ್ಲಿ ಬೆಂದು, ಬಸವಳಿದು, ಬಿಳಿಯರ ದಬ್ಬಾಳಿಕೆ, ಮೂದಲಿಕೆ, ಶೋಷಣೆಗಳಿಗೆ ಗುರಿಯಾಗಿದ್ದ ಜನಾಂಗವೊಂದರ ಪ್ರತಿನಿಧಿ ಪ್ರಪಂಚದ ಅತ್ಯಂತ ಪ್ರಬಲ ರಾಷ್ಟ್ರ ಅಮೆರಿಕದ ಅಧ್ಯಕ್ಷಗಿರಿಗೆ ಏರಿರುವುದು ಸ್ವಾಗತಾರ್ಹ ಸಂಗತಿ. ಶತಮಾನಗಳ ಕಾಲ ಕರಿಯ ಜನಾಂಗದವರು ನಡೆಸಿದ ಹೋರಾಟಕ್ಕೆ ಸಂದಿರುವ ಜಯ. ಸಮಾನ ಪೌರ ಹಕ್ಕುಗಳಿಗಾಗಿ ಮಾರ್ಟಿನ್ ಲೂಥರ್ ಕಿಂಗ್ ನೇತೃತ್ವದಲ್ಲಿ ಕಪ್ಪು ಜನರು ಅಮೆರಿಕದ ಬೀದಿಗಳಲ್ಲಿ ನಡೆಸಿದ ಸಮರವನ್ನು ಒಬಾಮಾ ವಿಜಯ ನೆನಪಿಗೆ ತರುತ್ತದೆ. ಮುಂದಿನ ವರ್ಷಾರಂಭದಲ್ಲಿ ಅಧಿಕಾರದ ಚುಕ್ಕಾಣಿ ಹಿಡಿಯಲಿರುವ ಈ ನಾಯಕ ಅಮೆರಿಕದ ಜನಸಾಮಾನ್ಯರಲ್ಲಿ ಹಾಗೂ ಪ್ರಪಂಚದಲ್ಲಿ ಬದಲಾವಣೆಗಳ ಹರಿಕಾರನಾಗುವ ಭರವಸೆ ಮೂಡಿಸಿದ್ದಾನೆ. ಅದು ಎಷ್ಟು ಮಟ್ಟಿಗೆ ನೆರವೇರುವುದು ಎಂಬುದನ್ನು ಮುಂದಿನ ದಿನಗಳು ರುಜುವಾತುಗೊಳಿಸುತ್ತವೆ. ಚುನಾವಣೆ ಫಲಿತಾಂಶ ಹೊರಬಿದ್ದ ನಂತರ ನಮ್ಮ ಪತ್ರಿಕೆಗಳು ಹಾಗೂ ಮಾಧ್ಯಮಗಳಲ್ಲಿ, ಅಮೆರಿಕ ಮತ್ತು ಐರೋಪ್ಯ ದೇಶಗಳ ಮಾಧ್ಯಮಗಳಲ್ಲಿ ನಡೆಯುತ್ತಿರುವ ಪ್ರಚಾರವನ್ನು ಅವಲೋಕಿಸಿದರೆ ಒಂದು ಬಗೆಯ ಕ್ರಾಂತಿಕಾರಿ ಬದಲಾವಣೆ ಪ್ರಪಂಚದಲ್ಲಿ ಆಗಿಹೋಗುವ ಅಭಿಪ್ರಾಯವನ್ನು ಮೂಡಿಸುತ್ತದೆ. ಅಂಥ ಬದಲಾವಣೆ ಬರುವುದಾದರೆ ಸಂತೋಷ. ಆದರೆ ಅದು ಸಾಧ್ಯವೆ ಎನ್ನುವ ಪ್ರಶ್ನೆ ನಮ್ಮನ್ನು ಕಾಡದಿರದು.

ಒಬಾಮಾ ಅಧಿಕಾರಕ್ಕೆ ಬರುತ್ತಿರುವುದು ಒಂದು ಸಂಕೀರ್ಣ ಪರಿಸ್ಥಿತಿಯಲ್ಲಿ. ಅಮೆರಿಕದ ಆರ್ಥಿಕ ಸ್ಥಿತಿ ಹಿಂದೆಂದೂ ಕಾಣದ ಕುಸಿತವನ್ನು ಕಂಡಿದೆ. ಅಧ್ಯಕ್ಷ ಜಾರ್ಜ್ ಬುಷ್ ಆಡಳಿತದಲ್ಲಿನ ದುಸ್ಸಾಹಸಗಳ ಪರಿಣಾಮ ತೀವ್ರವಾಗಿದೆ. ಇರಾಕ್ ಮತ್ತು ಆಫ್ಘಾನಿಸ್ತಾನದಲ್ಲಿ ಅಮೆರಿಕ ದಾರಿಕಾಣದೆ ಕಂಗಾಲಾಗಿದೆ. ಅಮೆರಿಕದ ಆರ್ಥಿಕ ಕುಸಿತದ ಪರಿಣಾಮ ಪ್ರಪಂಚದ ಇತರ ದೇಶಗಳನ್ನು ಕಾಡುತ್ತಿದೆ. ಹೀಗಿರುವಾಗ ಅಧ್ಯಕ್ಷಗಿರಿಗೆ ಬರುವ ಒಬಾಮಾ ಆಂತರಿಕವಾಗಿ ಅಮೆರಿಕದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಕೆಲವು ಕ್ರಮಗಳನ್ನು ಕೈಗೊಳ್ಳಬಹುದು. ಅವರು ಅದಕ್ಕೆ ಆದ್ಯತೆ ನೀಡುವುದಾಗಿಯೂ ಹೇಳಿದ್ದಾರೆ. ಆದರೆ ಅಮೆರಿಕದ ಅರ್ಥವ್ಯವಸ್ಥೆಯಲ್ಲಿ ಎಂದರೆ ಬಂಡವಾಳಶಾಹಿ ಮುಕ್ತ ಮಾರುಕಟ್ಟೆ ವ್ಯವಸ್ಥೆಯಲ್ಲಿ ಮೂಲಭೂತ ಬದಲಾವಣೆಗಳನ್ನು ನಿರೀಕ್ಷಿಸುವುದು ದೂರದ ಬೆಟ್ಟವೇ ಸರಿ. ಏಕೆಂದರೆ ಅಮೆರಿಕದ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಡೆಮಾಕ್ರಟಿಕ್ ಮತ್ತು ರಿಪಬ್ಲಿಕನ್ ಪಕ್ಷಗಳ ನೀತಿಗಳಲ್ಲಿ ಮೂಲಭೂತ ವ್ಯತ್ಯಾಸಗಳೇನಿಲ್ಲ. ಎರಡೂ ಪಕ್ಷಗಳು ಅಮೆರಿಕದ ಹಿತಾಸಕ್ತಿಗಳನ್ನು, ಅಧಿನಾಯಕತ್ವವನ್ನು ಕಾಪಾಡಿಕೊಳ್ಳಲು ಕಂಕಣಬದ್ಧವಾಗಿವೆ. ಆಂತರಿಕ ನೀತಿಯಲ್ಲಿ ಚೂರುಪಾರು ಬದಲಾವಣೆಗಳನ್ನು ಬಿಟ್ಟರೆ ಉಳಿದವೆಲ್ಲ ಒಂದೆ. ಹಾಗಾಗಿ ಅಮೆರಿಕದ ವಿದೇಶೀ ನೀತಿಯಲ್ಲಿ ಒಬಾಮಾರಿಂದ ಹೆಚ್ಚಿನ ಬದಲಾವಣೆಗಳನ್ನೇನೂ ನಿರೀಕ್ಷಿಸುವಂತಿಲ್ಲ. ಚುನಾವಣೆ ಪ್ರಚಾರ ಕಾಲದಲ್ಲಿನ ಅವರ ಭಾಷಣಗಳನ್ನು ಗಮನಿಸಿದರೆ ಅದು ವೇದ್ಯವಾಗುತ್ತದೆ. ಇರಾಕಿನ ವಿಷಯದಲ್ಲಾಗಲಿ, ಆಫ್ಘಾನಿಸ್ತಾನದ ವಿಷಯದಲ್ಲಾಗಲಿ, ಕ್ಯೂಬಾ-ವೆನಿಜುಯೇಲಾ ಬಗೆಗಾಗಲಿ, ಭಯೋತ್ಪಾದನೆ ವಿರುದ್ಧ ಸಮರದ ನೀತಿಯಲ್ಲಾಗಲಿ ಬದಲಾವಣೆಗಳನ್ನೇನೂ ನಿರೀಕ್ಷಿಸುವಂತಿಲ್ಲ. ಇರಾನಿನ ನ್ಯೂಕ್ಲಿಯರ್ ವಿಷಯದಲ್ಲಿ ಇತ್ತೀಚೆಗೆ ಒಬಾಮಾ ನೀಡಿದ ಹೇಳಿಕೆ ಈಗಾಗಲೇ ಇರಾನಿಯರನ್ನು ಕೆರಳಿಸಿದೆ. ಅಲ್ ಖೈದಾ ಮತ್ತು ತಾಲಿಬಾನ್ ವಿರುದ್ಧ ಸಮರವನ್ನು ತೀವ್ರಗೊಳಿಸಲು ಅವರು ತಮ್ಮ ಬದ್ಧತೆಯನ್ನು ಘೋಷಿಸಿದ್ದಾರೆ. ಹಾಗಿರುವಾಗ ಮೂಲಭೂತ ಬದಲಾವಣೆ ಎನ್ನುವುದು ಕನಸಿನ ಲೆಖ್ಖಾಚಾರ. ಈ ಹಿಂದೆ ಅಮೆರಿಕದಲ್ಲಿ ಜಾನ್ ಕೆನೆಡಿ ಅಧಿಕಾರಕ್ಕೆ ಬಂದಾಗ ಇದೇ ರೀತಿಯ ಬದಲಾವಣೆಗಳ ಅಬ್ಬರದ ಪ್ರಚಾರ ನಡೆದಿತ್ತು. ಆದರೆ ಆತನ ಅಧಿಕಾರಾವಧಿಯಲ್ಲಿ ನಡೆದಿದ್ದೇ ಬೇರೆ. ಅಧಿಕಾರದಲ್ಲಿದ್ದಾಗ ಜನರಲ್ ಐಸೆನ್ ಹೋವರ್ ವಿಯೆಟ್ನಾಮ್ ಮತ್ತು ಕ್ಯೂಬಾಗಳ ಮೇಲೆ ಯುದ್ಧ ನಡೆಸಲು ನಿರಾಕರಿಸಿದ್ದರು. ಆದರೆ ಅಧಿಕಾರದಲ್ಲಿ ಅಲ್ಪಕಾಲ ಇದ್ದ ಕೆನೆಡಿ ಎರಡೂ ಅನಾಹುತಗಳಿಗೆ ಮುಂದಾದರು. ವಿಯೆಟ್ನಾಮ್ ಮೇಲೆ ಮಿಲಿಟರಿ ಕಾರ್ಯಾಚರಣೆ ಪ್ರಾರಂಭಿಸಿದ ಕೆನೆಡಿ ಕ್ಯೂಬಾದ ತೀರದಲ್ಲಿ ಕ್ಷಿಪಣಿಗಳನ್ನು ನೆಲೆಗೊಳಿಸಿ, ಪ್ರಪಂಚವನ್ನು ಮೂರನೇ ಮಹಾಯುದ್ಧದ ಅಂಚಿಗೆ ದೂಡಿದರು. ಇದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳುವುದು ಉಚಿತ. ಹಾಗಾಗಿ ಅಮೆರಿಕದಲ್ಲಿ ಯಾರೇ ಅಧಿಕಾರಕ್ಕೆ ಬಂದರೂ ಕ್ರಾಂತಿಕಾರಿ ಬದಲಾವಣೆಗಳನ್ನು ನಿರೀಕ್ಷಿಸುವುದು ಅವಾಸ್ತವ.

ಶೀಯಾರ್ಕೆ

ಕಳೆದೆರಡು ಸಂಚಿಕೆಗಳಲ್ಲಿ 'ಹೊಸತು' ಮತಾಂತರದ ಪ್ರಶ್ನೆಯನ್ನು ಸ್ಥೂಲವಾಗಿ ಚರ್ಚಿಸಿದೆ. ಚರ್ಚೆಯನ್ನು ಮುಂದುವರಿಸಲು ಓದುಗ-ಲೇಖಕರ ಕೆಲವು ಅಭಿಪ್ರಾಯಗಳನ್ನು ಪ್ರಕಟಿಸಲಾಗುತ್ತಿದೆ.

— ಸಂ.

# ಧಾರ್ಮಿಕ ಸಹಿಷ್ಣುತೆ ಮತ್ತು ಮತಾಂತರ

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ



ಕವಿ ಪು. ತಿ. ನರಸಿಂಹಾಚಾರ್ ಬರೆದ ಕವಿತೆಯನ್ನಾಧರಿಸಿದ ಕತೆಯೊಂದನ್ನು ಡಾ|| ಸಿದ್ದನಗೌಡ ಪಾಟೀಲ ಅವರು ಒಮ್ಮೆ 'ಕೆಂಬಾವುಟ' ಪತ್ರಿಕೆಯಲ್ಲಿ ಬರೆದಿದ್ದರು. ಅದು ಹೀಗಿದೆ :

ಒಬ್ಬ ಜಮೀನ್ದಾರ ಒಂದು ನಾಯಿಯನ್ನು ಸಾಕಿದ್ದನು. ಅದನ್ನು ಪ್ರೀತಿಯಿಂದಲೇ ಸಾಕಿದ್ದ. ಅದಕ್ಕಾಗಿ ತಾನುಣ್ಣುವ ಭಕ್ಷ್ಯ ಭೋಜನವನ್ನು ನೀಡುತ್ತಿದ್ದ. ಆದರೆ ತನ್ನ ನೆಲೆ ಮಹಲಿನಲ್ಲಿ, ನಾಯಿಯದು ಅದರ ಬಾಗಿಲ ಹೊರಗಿನ ಜಾಗದಲ್ಲಿ. ಹೀಗಿರುವಾಗ ಒಮ್ಮೆ ತೋಟದಲ್ಲಿ ಕೆಲಸ ಮಾಡುತ್ತಿದ್ದ ಜೀತದಾಳು ತೋಟದ ವರ್ತಮಾನವನ್ನು ಮಾಲಿಕನಿಗೆ ನೀಡಲು ಸಂಜೆ ಮನೆಗೆ ಬಂದ. ಆಗ ಜೋರು ಮಳೆ ಶುರುವಾಯಿತು. ತನ್ನ ಕೆಲಸ ಮುಗಿಸಿಕೊಂಡು ಹೊರಟುನಿಂತ ಈ ಆಳು ಆ ಮನೆಯ ಬಾಗಿಲ ಬಳಿಯಲ್ಲಿ ಚಳಿಯಿಂದ ನಡುಗುತ್ತ ಮಲಗಿದ್ದ ನಾಯಿಯನ್ನು ನೋಡಿದ. ಅದರ ಸ್ಥಿತಿಯನ್ನು ನೋಡಿ, ಅದನ್ನು ತೋಟಕ್ಕೆ ಕರೆದುಕೊಂಡು ಹೋಗಿ, ಅಲ್ಲಿದ್ದ ತನ್ನ ಗುಡಿಸಲಿನಲ್ಲಿದ್ದ ತನ್ನ ಹರಕಲು ಚಾಪೆಯಲ್ಲಿ ಮಲಗಿಸಿಕೊಂಡ. ನಾಯಿಯೂ ಸಂತೋಷದಿಂದ ಮಲಗಿಕೊಂಡಿತು. ಆದರೂ ಅದು ನಡುಗುತ್ತಿದ್ದುದನ್ನು ನೋಡಿ ಅದನ್ನು ಹತ್ತಿರಕ್ಕೆ ಸೆಳೆದುಕೊಂಡು ತನ್ನ ಹರಕಲು ಕಂಬಳಿಯನ್ನು ಹೊದೆಸಿ, ತಾನೂ ನಿದ್ದೆ ಹೋದ.

ಮರುದಿನ ಬೆಳಿಗ್ಗೆ ಜಮೀನ್ದಾರ ತೋಟಕ್ಕೆ ಬಂದ. ನಾಯಿಯನ್ನು ಕಂಡ. ಅದೂ ಈತನನ್ನು ನೋಡಿ, ಬಾಲವಲ್ಲಾಡಿಸಿತು; ಮಾತನಾಡಿಸಿತು. ಆದರೆ ಈತ ಮನೆಗೆ ಹಿಂದಿರುಗುವಾಗ ಇದು ಈತನನ್ನು ಹಿಂಬಾಲಿಸಲಿಲ್ಲ. ಈತ ಒತ್ತಾಯಿಸಿ ಕರೆದಾಗಲೂ ಈತನ ಹಿಂದೆ ಇದು ಹೋಗಲಿಲ್ಲ.

– ಹೀಗೆ ನಾಯಿ ಭಕ್ಷ್ಯಭೋಜನವನ್ನು ತಿಂದುಕೊಂಡು ಬಿದ್ದಿದ್ದ ಮಹಲನ್ನು ಏಕೆ ಬಿಟ್ಟಿತು ? ಹರಕಲು ಚಾಪೆಯೊಂದರ ಮೇಲೆ ತನ್ನನ್ನೂ ಸಮನಾಗಿ ಎಣಿಸಿದ ಆಳಿನ ಗುಡಿಸಲನ್ನು ಏಕೆ ಒಪ್ಪಿತು ? ಬಹುಶಃ ಸ್ವಾಭಿಮಾನ ಮತ್ತು ಸಮಾನತೆಯ ಹಂಬಲ ಇದಾಗಿರಬಹುದು ಎನ್ನಿಸುತ್ತದೆ.

ಹೀಗೆ ಸ್ವಾಭಿಮಾನವಿರುವ ಯಾರೇ ಆದರೂ ಸಮಾನತೆಯನ್ನು ಹಂಬಲಿಸುವುದು ತಪ್ಪಲ್ಲ. ಅಂಥವರು ತಾವಿರುವ ನೆಲೆಯಲ್ಲಿ ಅದು ದಕ್ಕದೇ ಹೋದಾಗ ಅದು ಯಾವುದೇ ಸ್ಥಿತಿಯಲ್ಲಿದ್ದರೂ ಅದನ್ನು ಬಿಟ್ಟು ಇನ್ನೊಂದು ನೆಲೆಗೆ ಸ್ಥಾನಾಂತರಗೊಳ್ಳುವುದು ಸಹಜ ಸ್ವಭಾವವೇ ಆಗಿರುತ್ತದೆ. ಅದನ್ನು ಯಾರಾದರೂ ಯಾಕೆ ತಡೆಯಬೇಕು ? ಆ ತಡೆಯುವ ಹಕ್ಕನ್ನು ಅವರಿಗೆ ನೀಡಿದವರಾರು ? ಭಾರತದ ಸಂವಿಧಾನದಲ್ಲಂತೂ ಯಾರಾದರೂ ಸರಿ, ಅವರು ಯಾವ ರಾಜ್ಯಕ್ಕಾದರೂ ಭಾಷಾ ಪರಿಸರಕ್ಕಾದರೂ ಕಡೆಗೆ ಮತಕ್ಕಾದರೂ ಸರಿ, ಅಲ್ಲಿ ಹೋಗಿ ಸೇರಲು ಅವಕಾಶವಿದೆ. ಅದನ್ನು ಪ್ರಶ್ನಿಸುವ ಹಕ್ಕು ಯಾರಿಗೂ ಇಲ್ಲ. ಅದರೊಂದಿಗೆ ಲಿಂಗಾಂತರದ ಹೊಸ ಬೆಳವಣಿಗೆಯೂ ಇತ್ತೀಚೆಗೆ ಕಂಡುಬಂದಿದೆ.

ಏನೇ ಆದರೂ ಇಂತಹ ಸ್ಥಾನಾಂತರವು ಸಂವಿಧಾನಬದ್ಧವಾಗಿದೆ. ಇಂತಹ ಸ್ಥಾನಾಂತರ ಹಾಗೊಮ್ಮೆ ಬಲಾತ್ಕಾರದಿಂದ ನಡೆದರೆ ಅದನ್ನು ವಿಚಾರಿಸಿಕೊಳ್ಳಲು ಕಾನೂನು ವ್ಯವಸ್ಥೆ ಇದೆ. ಅದನ್ನು ಕಾಪಾಡಲು ಪೊಲೀಸ್ ಇಲಾಖೆ ಮತ್ತು ನ್ಯಾಯಾಲಯಗಳು ಇವೆ. ಈ ಇಲಾಖೆಗಳು ಮಾಡುವ ಕೆಲಸವನ್ನು ಯಾರಾದರೂ ಖಾಸಗಿಯಾಗಿ ತಮ್ಮ ಕೈಗೆ ತೆಗೆದುಕೊಂಡರೆ ಅದು ನೈತಿಕವಾಗಿಯಲ್ಲದೆ ಕಾನೂನುರೀತ್ಯಾ ಸಹ ಅಪರಾಧವಾಗಿರುತ್ತದೆ ಎಂಬುದನ್ನು ಮರೆಯಬಾರದು.

ಆದರೂ ಇತ್ತೀಚೆಗೆ ಅನೇಕ ಸಂಘಟನೆಗಳು, ಮಠಗಳು ಬಲಾತ್ಕಾರದ ಮತಾಂತರವನ್ನು ಕುರಿತು ಮಾತನಾಡುತ್ತಿವೆ. ಆದರೆ ವಾಸ್ತವವೆಂದರೆ ಅಂತಹ ಪ್ರಕರಣವೊಂದೂ ಇದುವರೆಗೆ ನಡೆದಿಲ್ಲ. ಆದರೂ ಇವರ ಹುಯ್ಯಲು ನಿಂತಿಲ್ಲ. ಹಾಗಾದರೆ ಇವರ ಆರ್ಭಟದ ಹಿಂದಿನ ಧ್ವನಿ ಯಾವುದು ? ಅಥವಾ ಅದರ ಮರ್ಮವೇನು ?

ಇದುವರೆಗೆ ಪ್ರಸ್ತಾಪಿಸಿದಂತೆ ಯಾವುದೇ ಸ್ಥಾನಾಂತರ, ಅದು ಮತಾಂತರವೂ ಸೇರಿ, ಅದನ್ನು ವಿರೋಧಿಸುವುದು ಮೂಲತಃ ಮೂಲಭೂತವಾದವೇ ಆಗಿರುತ್ತದೆ. ಅಂತಹ ಮೂಲಭೂತವಾದವು ಪ್ರಾದೇಶಿಕ ವಲಸೆ ಸೇರಿದಂತೆ ಮತಾಂತರವನ್ನು ವಿರೋಧಿಸುತ್ತದೆ. ಇಂತಹ ಯಾವುದೇ ಮೂಲಭೂತವಾದವು ಜೀವ ವಿರೋಧಿಯಾದ ನಿಲುವಿನಿಂದ ಕೂಡಿರುವುದರಿಂದ ಅದನ್ನು ತ್ಯಜಿಸುವುದು ಮಾತ್ರ ಸರಿಯಾಗಿರುತ್ತದೆ.

ಇಂತಹ ಮತಾಂತರಗಳು ಜಗತ್ತಿನ ಚರಿತ್ರೆಯಲ್ಲಿ ಎಲ್ಲ ದೇಶಗಳಲ್ಲಿಯೂ ಸಂಭವಿಸಿವೆ. ಅದಕ್ಕೆ ತಮ್ಮದೇ ಆದ ಕಾರ್ಯಕಾರಣ ಸಂಬಂಧಗಳೂ ಇಲ್ಲದೇ ಇಲ್ಲ. ಉದಾಹರಣೆಗೆ, ಕ್ರೈಸ್ತ, ಜೈನ, ಬೌದ್ಧ, ಮುಸ್ಲಿಂ, ಸಿಖ್, ವೀರಶೈವ ಮುಂತಾದ ಧರ್ಮ, ಪಂಥಗಳು ಯಾಕೆ ಹುಟ್ಟಿದವು ಎಂಬುದನ್ನು ಯೋಚಿಸಬೇಕು. ಇಲ್ಲಿ ಇವುಗಳಿಗೆ ಹೊರತಾದವರು ಸಹಿಷ್ಣುತೆಯನ್ನೂ ತೋರಿದ್ದಾರೆ. ಅವರಲ್ಲಿ ಇನ್ನೊಂದು ವರ್ಗ ಇವತ್ತಿನವರ ಹಾಗೆ ಸಂಘರ್ಷವನ್ನೂ ಮೆರೆದಿದ್ದಾರೆ. ಈ ಸಹಿಷ್ಣುತೆ ಮತ್ತು ಸಂಘರ್ಷಗಳು ಒಟ್ಟು ಮನುಷ್ಯ ಪರಂಪರೆಯ ಎರಡು ಧಾರೆಗಳೇ ಆಗಿವೆ. ಅದರ ಭಾಗವಾಗಿ ಇಂದಿಗೂ ಅವೆರಡೂ ಮುಂದುವರೆದಿವೆ.

ಭಾರತದ ಚರಿತ್ರೆಯಲ್ಲಿ ಅಶೋಕ ? ಈತ ಮತಾಂತರಗೊಳ್ಳಲಿಲ್ಲವೇ ಬೌದ್ಧ ಧರ್ಮಕ್ಕೆ ? ಇದರಿಂದ ಹಾನಿಯಾಯಿತೋ ಅಥವಾ ಕಳಿಂಗದ ಚರಿತ್ರೆಗೇ ಹೊಸ ತಿರುವು ಸಿಕ್ಕಿತೋ ?

ಇಲ್ಲಿಂದ ಮೊದಲ್ಗೊಂಡು ಇವತ್ತಿನ ಕಾಲದವರೆಗೂ ಇಂತಹ ಘಟನೆಗಳು ಜರುಗಿವೆ. ಅದರಿಂದ ಹಾನಿಯಾಯಿತೋ ಅನುಕೂಲವಾಗಿದೆಯೋ ? ಅಂತೂ ಅದನ್ನು ಪಡೆದವರಿಗಂತೂ ಮಾನಸಿಕ ತೃಪ್ತಿ ಸಿಕ್ಕಿದೆ. ಅದನ್ನು ಯಾರಾದರೂ ಯಾಕೆ ವಿರೋಧಿಸಬೇಕು ? ಹರಿಯುವ ನೀರಿಗೆ ದೊಣೆನಾಯಕನ ಅಪ್ಪಣೆ ಯಾಕೆ ?

ಇನ್ನು ಕನ್ನಡ ನೆಲದ ಪರಂಪರೆಗೆ ಬರೋಣ. ಪಂಪ ? ಈತನ ತಾತ ವೈದಿಕ ಧರ್ಮದಿಂದ ಜೈನಧರ್ಮಕ್ಕೆ ಮತಾಂತರಗೊಳ್ಳಲಿಲ್ಲವೆ ? ಈ ವಂಶದ ಪಂಪನಿಂದ

ಕನ್ನಡಕ್ಕೆ ಅಪಚಾರವಾಯಿತೆ?

ಬಸವಣ್ಣ? ''ಕರ್ಮಲತೆಯಂತಿರ್ದ ಜನ್ನಿವಾರಮಂ ಬಿಸುಟು...'' ವೀರಶೈವ ಧರ್ಮಕ್ಕೆ ಬರಲಿಲ್ಲವೆ? ಶ್ರೇಣೀಕೃತ ಭಾರತೀಯ ಸಮಾಜದ ಉನ್ನತ ಜಾತಿಯಲ್ಲಿ ಹುಟ್ಟಿದ ಬಸವಣ್ಣನಿಗೆ ಈ ಸಾಮಾಜಿಕ ವ್ಯವಸ್ಥೆ ಇಷ್ಟು ಮಾನಸಿಕ ಹಿಂಸೆ ನೀಡಿರಬೇಕಾದರೆ ಇನ್ನು ಕೆಳಜಾತಿಗಳ ಮಾನಸಿಕ ಸ್ಥಿತಿ ಏನಾಗಿರಬಾರದು? ಇಂಥವರು ಹಿಂದೂ ಧರ್ಮದಿಂದ ಆಚೆ ಹೊರಟರೆ ನಮಗ್ಯಾಕೆ ನೋವು? ಈ ಹಿನ್ನೆಲೆಯಲ್ಲೇ ಅಲ್ಲವೇ ಅಂಬೇಡ್ಕರ್ ಅವರು ಬೌದ್ಧಧರ್ಮಕ್ಕೆ ಮತಾಂತರಗೊಂಡದ್ದು, ಇವರೊಂದಿಗೆ ಸಾವಿರಾರು ದಲಿತರು ಹಿಂದೂ ಧರ್ಮದಿಂದ ಬಿಡುಗಡೆಯನ್ನು ಪಡೆದದ್ದು! ಕನಿಷ್ಠ ಸಾಮಾಜಿಕ ಅರಿವು ಇರುವವರಿಗೇ ಮತಾಂತರವೆಂಬುದು ಬಿಡುಗಡೆಯ ದಾರಿಯಾಗಿ ಕಾಣುವಾಗ ಮತ್ತು ಅಂಬೇಡ್ಕರ್ ಅಂತಹ ಸಮಾಜ ಅಧ್ಯಯನದ ಶಕ್ತಿ ಇದ್ದ ಮೇಧಾವಿಗೆ ಅದು ಸರಿಯೆನಿಸದೇ ಇದ್ದೀತೆ? ಆದರೂ ಇದರ ಬಗೆಗೆ ಗಾಂಧೀಜಿಯಂಥವರಿಗೂ ಒಪ್ಪಿಗೆಯಿರಲಿಲ್ಲ. ಇವರ ಪ್ರಕಾರ ಹಿಂದೂಗಳಲ್ಲಿ ಜಾತಿ ವಿಚಾರದಲ್ಲಿ ಮನಃಪರಿವರ್ತನೆಯಾಗಬೇಕು. ಇದು ಒಳ್ಳೆಯ ವಿಚಾರ ಮತ್ತು ಆದರ್ಶವೇ ಸರಿ. ಆದರೆ ಇದು ಇಂತಹ ನೂರಾರು ಮಹಾತ್ಮರು ಆಗಿಹೋಗಿರುವ ಭಾರತದ ಸಾವಿರಾರು ವರ್ಷಗಳ ಇತಿಹಾಸದಲ್ಲಿಯೇ ಸಾಧ್ಯವಾಗಿಲ್ಲ. ಹೀಗಿರುವಾಗ ಈ ನವಮಹಾತ್ಮನ ಅವಧಿಯಲ್ಲಿ ಅದು ಹೇಗೆ ಕಾರ್ಯಸಾಧ್ಯವಾದೀತು? ಈ ಅರಿವು ಗಾಂಧೀಜಿಯವರಿಗೆ ಇರಲಿಲ್ಲ, ಆದ್ದರಿಂದಲೇ ಅವರ ಸಾಮಾಜಿಕ ಚಿಂತನೆಗಳು ಅಪಕ್ವವೆನಿಸಿದ್ದು. ಅದು ಅವರಿಗೆ ಆದ್ಯತೆಯ ವಿಚಾರವೂ ಆಗಿರಲಿಲ್ಲ ಎಂಬುದು ಬೇರೆ ಮಾತು. ಅವರ ಆದ್ಯತೆ ಭಾರತದ ರಾಜಕೀಯ ವಿಮುಕ್ತಿ; ಉಳಿದಂಥ ಸಾಮಾಜಿಕ ವಿಮುಕ್ತಿಗಳು ಆನುಷಂಗಿಕ ಮಾತ್ರ. ಇವರ ಶತ್ರು ಹೊರಗಿನವನು; ಒಳಗಿನವನಲ್ಲ. ಆದ್ದರಿಂದಲೇ ಒಳಗಿನವರೆಲ್ಲರೂ ಇವರನ್ನು 'ನಾಯಕ' ಎಂದು ಪರಿಗಣಿಸಿದ್ದು. ಅಂತೆಯೇ ಒಳಗಿನ ಶತ್ರುವನ್ನು ಗುರುತಿಸಿದ ಅಂಬೇಡ್ಕರ್ ಅವರನ್ನು ಇದೇ ಪಟ್ಟಭದ್ರರು ತಮ್ಮ ಅಭದ್ರತೆಗೆ ಕಾರಣವಾದ ಇವರನ್ನು ವಾರೆನೋಟದಿಂದ ನೋಡಿದ್ದು.




ಈ ಹಿನ್ನೆಲೆಯಲ್ಲಿ ಗಾಂಧೀಜಿಯವರಿಗಿದ್ದ ಹಾಗೂ ಅಂಬೇಡ್ಕರ್ ಅವರಿಗಿದ್ದ ಸಾಮಾಜಿಕ ಪ್ರಜ್ಞೆಯನ್ನು ಗುರುತಿಸಬೇಕು. ಇಬ್ಬರಿಗೂ ಇದ್ದ ಸಾಮಾಜಿಕ ಕಳಕಳಿಯಲ್ಲಿ ಭೇದ ಇರಲಿಲ್ಲ. ಆದರೆ ಸಾಮಾಜಿಕ ಪ್ರಜ್ಞೆಯಲ್ಲಿ ಭೇದವಿತ್ತು. ಅದು ಅಧ್ಯಯನ ಮೂಲದ್ದೂ ಆಗಿತ್ತು. ಅಂತಹ ಸಾಮಾಜಿಕ ಅಧ್ಯಯನವು ಅಂಬೇಡ್ಕರ್‌ರವರ ಇಪ್ಪತ್ತೈದಕ್ಕೂ ಮೀರಿದ ಬೃಹತ್ ಸಂಪುಟಗಳಲ್ಲಿ ಕಾಣಬಹುದಾಗಿದೆ.

ಹಾಗಾಗಿ ಭಾರತೀಯ ಸಮಾಜದ ಗೊತ್ತುಗುರಿಯನ್ನು ಅತ್ಯಂತ ಸಾಮಾಜಿಕ ಜವಾಬ್ದಾರಿಯಿಂದ ರೂಪಿಸುವಲ್ಲಿ ಯಾರ ದಾರಿ ಸೂಕ್ತ ಎಂಬುದು ಇಲ್ಲಿ ತಿಳಿಯಬಹುದಲ್ಲವೆ? ಆ ದಾರಿಯಲ್ಲಿ ಸ್ವತಃ ನಡೆದೇ ಹೋದ ಅಂಬೇಡ್ಕರ್ ಅವರ ಮತಾಂತರ ದೇಶದ ಆರೋಗ್ಯಕರ ದಿಕ್ಸೂಚಿಯಾಗಬಹುದಲ್ಲವೆ? ಈ ದಾರಿಯಲ್ಲಿ ಜನ ನಡೆಯಲು ಯಾರಾದರೂ ಧರ್ಮಪ್ರಚಾರ ನಡೆಸಿದರೆ ನಡೆಸಲಿ, ಬಿಡಿ. ಅದನ್ನು ವಿವೇಚಿಸುವ ಶಕ್ತಿ ನಮ್ಮ ಜನರಿಗಿದೆ. ನಾವ್ಯಾಕೆ ಹಿಟ್ಲರ್‌ಗಳಾಗಬೇಕು, ನಮ್ಮದೇ ಆದ ಕಳಂಕಿತ ಸಮವಸ್ತ್ರವನ್ನು ಧರಿಸಿ.

ಇದು ಉದಾರೀಕರಣದ ಕಾಲ. ಸತ್ವ ಇರುವವನು ತನ್ನ ಪ್ರಚಾರವನ್ನು ಮಾಡಿಕೊಳ್ಳುತ್ತಾನೆ. ಆತನ ಮತ್ತು ಆತನ ಕಂಪನಿಯ ಉತ್ಪಾದನಾ ವಸ್ತುಗಳಲ್ಲಿ ಸತ್ವ ಇದೆಯೆಂದು ತಿಳಿದರೆ ಜನ ಅದಕ್ಕೆ ಮಾರುಹೋಗುತ್ತಾರೆ; ಅವನನ್ನು ಒಪ್ಪುತ್ತಾರೆ ಮತ್ತು ಸ್ವೀಕರಿಸುತ್ತಾರೆ. ಇಲ್ಲಿ ಗೆಲ್ಲದವನು ತೆರೆಯಿಂದ ಮರೆಯಾಗುತ್ತಾನೆ. ಹಾಗೆಯೇ ನಿಮ್ಮಲ್ಲಿ ಸತ್ವ ಇದ್ದರೆ ಅದನ್ನು ತೋರಿಸಿ. ಅದನ್ನು ಬಿಟ್ಟು ಸುಮ್ಮನೆ ಮೈ ಪರಚಿಕೊಳ್ಳುವುದೇಕೆ?

ಅಂಬೇಡ್ಕರ್ ಅವರು ಒಂದೆಡೆಯಲ್ಲಿ ಸುಮಾರು ೧೩೫ ಪುಟದ ಪ್ರಬಂಧವೊಂದನ್ನು ಬರೆಯುತ್ತಾರೆ. ಅದು 'ಜಾತಿಗಳ ನಿರ್ಮೂಲನೆ' ಎಂಬುದು. ಅದರಲ್ಲಿ ಮುಸ್ಲಿಂರಲ್ಲಿ ಆಂತರಿಕ ಒಗ್ಗಟ್ಟು ಇರಲು ಯಾಕೆ ಸಾಧ್ಯವಾಗಿದೆ, ಅದು ಹಿಂದೂಗಳಲ್ಲಿ ಇಲ್ಲವಾಗಿರಲು ಕಾರಣವೇನು, ಎಂಬುದನ್ನು ಒಂದೆಡೆ ವಿಶ್ಲೇಷಿಸುತ್ತಾರೆ. ಅದರ ಸಾರ ವೆಂದರೆ, ಮುಸ್ಲಿಂರಲ್ಲಿ ಒಂದೆರಡು ಅಥವಾ ನಾಲ್ಕಾರು ಪಂಥಗಳು ಇರಬಹುದಷ್ಟೆ. ಆದರೆ ಆ ಪಂಥಗಳು ಮತ್ತು ಅವು ಜಾತಿಗಳಷ್ಟು ನಿಕೃಷ್ಟವಲ್ಲ. ಆದರೆ ಹಿಂದೂಗಳಲ್ಲಿ ಐದು ಸಾವಿರಕ್ಕೂ ಅಧಿಕ ಜಾತಿಗಳಿವೆ. ಇವು ದ್ವೀಪಗಳು. ಇವುಗಳ ಗೋಡೆಗಳು ಹಿಮಾಲಯಕ್ಕಿಂತಲೂ ಎತ್ತರ ಮತ್ತು ಉಕ್ಕಿನ ಕೋಟೆಗಿಂತಲೂ ಕಠಿಣ. ಹಾಗಾಗಿಯೇ ಹಿಂದೂ ಆದವನು ತನ್ನ ಧರ್ಮದಲ್ಲಿಯೇ ಒಂದು ಜಾತಿಯಿಂದ ಇನ್ನೊಂದು ಜಾತಿಗೆ ಹೋಗಲು ವೀಸಾ ಪಡೆಯಲಿಕ್ಕಾಗಲಿಲ್ಲ. ಇದು ಹಿಂದೂಗಳ ಆಂತರಿಕ ಒಗ್ಗಟ್ಟನ್ನು ಛಿದ್ರಮಾಡಿದೆ. ಇದು ಬದಲಾಗಲು ಎಂದಿಗೂ ಸಾಧ್ಯವಿಲ್ಲ. ಈ ಹಿನ್ನೆಲೆಯಲ್ಲೇ ಅವರು ಹಿಂದೂ ಸಮಾಜದ ಹಣೆಬರಹವನ್ನು ತಿದ್ದಲು ಸೋತು ಕಡೆಗೆ, ತಮ್ಮ ಹಣೆಬರಹವನ್ನೇ ತಿದ್ದಿಕೊಂಡು ಬೌದ್ಧರಾದದ್ದು.

ಈ ಎಲ್ಲದರ ಹಿನ್ನೆಲೆಯಲ್ಲಿ ಹಿಂದೂಗಳು ಒಂದು ಪ್ರಶ್ನೆಯನ್ನು ಕೇಳಿಕೊಳ್ಳಬೇಕು: ಹಾಗೊಮ್ಮೆ ಈ ಧರ್ಮದ ಒಳಗೆ ಯಾವುದಾದರೂ ಒಂದು ತತ್ವವನ್ನು ಹುಡುಕಿ, ಆ ಗಾಳದ ಮೂಲಕ ಇತರೆ ಧರ್ಮದ ಯಾರಾದರೂ ಒಬ್ಬರನ್ನು ತಮ್ಮೊಳಕ್ಕೆ ಸೆಳೆದುಕೊಂಡರೆ ಅವರ ಸ್ಥಾನವೆಲ್ಲಿ? ಅಂದರೆ ಯಾವ ಜಾತಿಯಲ್ಲಿ? ಅಂದರೆ... ಜಾತಿಯಿಲ್ಲದೆ ಹಿಂದೂ ಧರ್ಮವಿಲ್ಲ. ಅಂತಹ ಜಾತಿಭರಿತ ಧರ್ಮ ಯಾರಿಗೂ ಬೇಕಿಲ್ಲ. ಈ ಅರಿವನ್ನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪಡೆದು ಹೊರಹೋಗಬಯಸುವವರಿಗೆ ಈ ಧರ್ಮದ ಒಳಗಿನವರು ಬೀಳ್ಕೊಡಬೇಕು. ಹಾಗೆಯೇ ಹೊರಗಿನವರು ಸ್ವಾಗತಿಸಬೇಕು. ಇದನ್ನು ತಿಳಿದೂ ತಿಳಿದೂ ಇಲ್ಲೇ ಬದುಕುಳಿಯುವವನಿಗೆ ತಕ್ಕ ಫಲ ಸಿಕ್ಕೇ ಸಿಕ್ಕುತ್ತದೆ. ಅದು ಅವರ ಪಾಲಾಗಿರುವಾಗಿ ಇತರರು ಯಾಕೆ ನಿಷ್ಫಲವಾಗಿ ಚಿಂತಿಸಬೇಕು.

ಇಲ್ಲಿ ಒಂದು ಬಗೆಯ ಮತಾಂತರವಿದೆ. ಅದು ಮೂಲಭೂತವಾಗಿ ಸ್ಥಾನಾಂತರ ಅಥವಾ ಮತಕ್ಕೆ ಹೊರತಾದ ಇನ್ನೊಂದು ಅತೀತಾವಸ್ಥೆಯನ್ನು ತಲುಪಿ ನಿಲ್ಲುವುದು. ಉದಾಹರಣೆಗೆ, ಕುವೆಂಪು. ಇವರಂತೆ ನಿರಂಜನ, ಚದುರಂಗ, ಲಂಕೇಶ, ಜಿ. ರಾಮಕೃಷ್ಣ ಮುಂತಾದ ಅನೇಕ ಬರಹಗಾರರು ಕನ್ನಡದಲ್ಲಿದ್ದಾರೆ. ಇವರ ಬದುಕು ಮತ್ತು ಬರಹಗಳನ್ನೋದಿದಾಗ ಇವರು ಯಾವ ಮತದವರು? ಬಾಲ್ಯದ ಅಥವಾ ತಾರುಣ್ಯದ ಕೆಲವು ವರ್ಷಗಳಲ್ಲಿ ಯಾವುದೋ ಒಂದು ಮತದಲ್ಲಿ ತಮ್ಮ ಐಡೆಂಟಿಟಿ ಇರಬಹುದು. ಆದರೆ ಆನಂತರದ ಘಟ್ಟದಲ್ಲಿ ಅದನ್ನು ಮೀರಿದ ಹಂತವನ್ನು ತಲುಪಿ ನಿಲ್ಲಲಿಲ್ಲವೆ? ಹಾಗೆ ಬದುಕಿ, ಬರೆಯಲಿಲ್ಲವೆ? ಇದು ಇನ್ನೊಂದು ಬಗೆಯ ಮತಾಂತರವಲ್ಲವೆ? ಇವರನ್ನೇನು ಮಾಡುತ್ತೀರಿ? ಇವರನ್ನು ಅವರ ಪೂರ್ವ ಮತಕ್ಕೆ ಯಾರಾದರೂ ಸೆಳೆಯಲು ಅವರೊಂದಿಗೆ ಬೌದ್ಧಿಕವಾಗಿ ಸೆಣಸಿದರೆ, ಆ ಸೆಣಸಿದವರೇ ತಮ್ಮ ಮತವನ್ನು ಬಿಡಬೇಕಾದ ಸ್ಥಿತಿ ಬರುತ್ತದೆ. ಅದು ಆಗಬೇಕು.

ಹೀಗೆ ಮತಾಂತರ ಎಂಬುದು ಒಂದು ಸಹಜ ಸಾಮಾಜಿಕ ಪ್ರಕ್ರಿಯೆ. ಇದು ಚರಿತ್ರೆ ಯುದ್ದಕ್ಕೂ ಸಂಭವಿಸಿದೆ. ಈ ದಾರಿಯಲ್ಲಿ ಅಶೋಕ, ಪಂಪ, ಬಸವ, ಅಂಬೇಡ್ಕರ್, ಕುವೆಂಪು, ಪೆರಿಯಾರ್ ಮುಂತಾದ ಲಕ್ಷಾಂತರ ಮಂದಿ ಕ್ರಮಿಸಿದ್ದಾರೆ. ಅಂಥವರು ನಮ್ಮ ಮಾರ್ಗದರ್ಶಕ ದೀಪಗಳಾಗಬೇಕೇ ಅಥವಾ ರಸ್ತೆಯಲ್ಲಿ, ರೈಲಿನಲ್ಲಿ, ಪ್ರಾರ್ಥನಾ ಮಂದಿರಗಳಲ್ಲಿ ಚೆಲ್ಲಿದ ಬೆಂಕಿ ನಮಗೆ ದಾರಿ ತೋರಬೇಕೇ, ನೀವೇ ವಿವೇಚಿಸಿ.

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**
ರೀಡರ್, ಸ್ನಾತಕೋತ್ತರ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ
ಕೋಲಾರ - ೫೬೩ ೧೦೧

# ಶೂದ್ರರನ್ನು ಮೊದಲು ಹಿಂದೂಧರ್ಮಕ್ಕೆ ಸೇರಿಸಿಕೊಳ್ಳಿ

**ಭಾ**ರತದ ಚರಿತ್ರೆಯನ್ನು ಗಮನಿಸಿದಾಗ ವೈದಿಕ ಧರ್ಮ ನಿರ್ಮಿಸಿಕೊಂಡಿರುವ ಶ್ರೇಣೀಕರಣ ಹಾಗೂ ಅದು ಹುಟ್ಟಿಸಿರುವ ಗೊಂದಲಗಳು ಬೆರಗುಗೊಳಿಸುವಂಥವು. ಪ್ರಾರಂಭದಿಂದಲೂ ಮಡಿವಂತ ವೈದಿಕಶಾಹಿಯು, ಕ್ಷತ್ರಿಯ, ವೈಶ್ಯ, ಶೂದ್ರರನ್ನು ಪ್ರತ್ಯೇಕವಾಗಿಯೇ ನೋಡುತ್ತಾ ಬಂದಿದೆಯೇ ಹೊರತು, ತನ್ನ ಒಟ್ಟು ವ್ಯಾಪ್ತಿಯಲ್ಲಿ ಅವರನ್ನು ಒಂದು ಭಾಗವಾಗಿ ಸೇರಿಸಿಕೊಂಡಿಲ್ಲ. ಇದರ ಬೆನ್ನಲ್ಲಿ ಆಲೋಚಿಸುವುದಾದರೆ ಮತಾಂತರದ ಪ್ರಶ್ನೆ ಇಂದಿನದಲ್ಲ, ಬದಲಾಗಿ ಆರ್ಯರು, ಮೊಗಲರು, ಆನಂತರ ಯೂರೋಪಿಯನ್ನರು ಇವರೆಲ್ಲಾ ಭಾರತಕ್ಕೆ ಕಾಲಿಟ್ಟ ನಂತರವೇ ಪ್ರಾರಂಭವಾಯಿತು. ಹಾಗೆ ನೋಡಿದರೆ ಯೂರೋಪಿಯನ್ನರಿಗೆ ಭಾರತದಲ್ಲಿ ಬಲವಂತದ ಮತಾಂತರಕ್ಕೆ ಮುನ್ನುಡಿಯಾಗಿ ಹಿಂದಿನ ಶೈವ, ವೈಷ್ಣವ, ಬೌದ್ಧ, ಜೈನ, ಇವರ ಪರಸ್ಪರ ಸಂಘರ್ಷಗಳು ಕಾರಣ ಎನ್ನಬಹುದೆ? ಒಂದು ರೀತಿಯಲ್ಲಿ ಮತಾಂತರ ಕುರಿತ ಪ್ರಶ್ನೆಗೆ ಉತ್ತರಗಳು ನಮ್ಮಲ್ಲೆ ಲಭ್ಯವಾಗುತ್ತವೆ. ಪರಂಪರೆಯಿಂದ ಮಡಿವಂತ ಹಿಂದೂಧರ್ಮ, ಶೂದ್ರರನ್ನು (ಅದರಲ್ಲೂ ದಲಿತರನ್ನು) ದೈಹಿಕವಾಗಿ ಬಳಸಿಕೊಂಡು ಮಾನಸಿಕವಾಗಿ ದೂರ ಇಟ್ಟಿರುವುದೇ ಇದಕ್ಕೆ ಬಹುದೊಡ್ಡ ಕಾರಣವೆನ್ನಬಹುದು. ಇತ್ತೀಚಿನ ಒಂದು ನಿದರ್ಶನವನ್ನು ನೀಡುವುದಾದರೆ, ಬಸವಣ್ಣನ ಜಾತಿ ಮೂಲದ ವಾಸ್ತವತೆ ಏನೇ ಇರಲಿ ಆತನನ್ನು 'ದಲಿತ' ಎಂದು ಕರೆಯುವುದೇ ಒಂದು ದೊಡ್ಡ ತಪ್ಪು, ಪಾಪ ಎಂದು ಭಾವಿಸಿ ಬೀದಿಗಿಳಿದು ದೊಡ್ಡ ಸಮುದಾಯವೊಂದು ಹೋರಾಟ ಮಾಡಿತು. ಹಾಗಾದರೆ ದಲಿತರು ಹಿಂದೂಧರ್ಮದವರಲ್ಲವೆ? ಬಸವಣ್ಣನನ್ನು ತಮ್ಮವನೆಂದು ಕರೆದುಕೊಳ್ಳುವ ಹಕ್ಕು ಕೂಡ ಅವರಿಗಿಲ್ಲವೆ? ಇಂತಹ ಪ್ರಶ್ನೆಗಳಿಗೆ ನಮ್ಮ ಮಠಾಧೀಶರೇ ಉತ್ತರ ನೀಡಬೇಕು.

ಬಲಾತ್ಕಾರದ ಮತಾಂತರ ನಿಷೇಧ ಪದ್ಧತಿ, ಇದಕ್ಕೆ ಮಠಾಧೀಶರ ಬೆಂಬಲ ಎಲ್ಲವೂ ತಾತ್ವಿಕತೆ ಇಲ್ಲದ ಮಾತುಗಳೇ ಆಗಿವೆ. ನನ್ನ ತಿಳುವಳಿಕೆಯ ಪ್ರಕಾರ ಜಗತ್ತಿನ ಯಾವುದೇ ಧರ್ಮದ ಎಲ್ಲ ತತ್ವಗಳು ಸರಿಯಾಗಿಲ್ಲ. ಪುರೋಹಿತ/ಪಾದ್ರಿ/ಮುಲ್ಲಾ/ ಇವರಿಗೆ ತನ್ನ ಧರ್ಮವೇ ಶ್ರೇಷ್ಠ ಎಂದು ಹೇಳುವ ನೈತಿಕತೆ ಇದೆಯೆ? ಅಂಬೇಡ್ಕರ್ ಅವರು ಸ್ವತಃ ಬೌದ್ಧ ಧರ್ಮಕ್ಕೆ ಸೇರಿದ್ದು ಅವರ ವೈಯಕ್ತಿಕ ಬೌದ್ಧಿಕ ನೆಲೆಯಿಂದಲೇ ಹೊರತು ಯಾರ ಬಲವಂತದಿಂದಲೂ ಅಲ್ಲ. ಅವರಿಗೆ ಬುದ್ಧನು ಮಾನವ ಜನಾಂಗದ ಸಾಮರಸ್ಯದ ಪ್ರತೀಕವೆಂದು ಕಂಡದ್ದರಿಂದ ಬೌದ್ಧ ಧರ್ಮವನ್ನು ಸ್ವೀಕರಿಸಿದರು. ಏಸು ಕೆಲವು ಶೂದ್ರರಿಗೆ ಹಾಗೆ ಕಂಡರೆ ತಪ್ಪಲ್ಲ. ಆದರೆ ಇವರಿಗೆ ಇರುವ ಬಹಳ ದೊಡ್ಡ ಸವಾಲೆಂದರೆ 'ಸ್ವೀಕಾರದ್ದು'. ಕಾರಂತರ 'ಚೋಮ'ನೇ ಇದಕ್ಕೆ ದೊಡ್ಡ ಉದಾಹರಣೆ. ಈ ಜನರು ಸೌಲಭ್ಯಗಳ, ಆಚಾರಗಳ, ಸಂಸ್ಕೃತಿಗಳ ನಡುವೆ ತಮ್ಮ ಅಸ್ತಿತ್ವವನ್ನು ರೂಪಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದಾರೇ ವಿನಾ ಸರಿಯಾದ 'ನಾಯಕ'ನನ್ನು ಆರಿಸಿಕೊಳ್ಳುವಲ್ಲಿ ವಿಫಲರಾಗುತ್ತಿದ್ದಾರೆ. ಹಾಗೆ ನೋಡಿದರೆ ಬುದ್ಧನಲ್ಲಿ ವರ್ತಮಾನದ ಪ್ರಶ್ನೆಗಳಿಗೆ ಉತ್ತರಗಳಿವೆ. ಆದರೆ ಆತ ಕೇವಲ ಪೋಸ್ಟರ್‌ಗಳಲ್ಲಿ ಮಾತ್ರ ಕಾಣಿಸಿಕೊಳ್ಳುತ್ತಿರುವುದು ದುರಂತದ ಸಂಗತಿ. ಬುದ್ಧನ ಜತೆಗೆ ಮಾನವ ಧರ್ಮದ ಕನಸು ಕಂಡಿದ್ದ ಬಸವಣ್ಣ, ಅಕ್ಬರ್, ವಿವೇಕಾನಂದರು ಕೆಲವರ ಪಾಲಿಗೆ ಖಳನಾಯಕರಾಗಿರುವುದು ಮತ್ತೊಂದು ದುರಂತ. ಭಾರತೀಯ ಸಂಸ್ಕೃತಿಯನ್ನು ರಕ್ಷಿಸುವುದೆಂದರೆ ಚರ್ಚ್‌ಗಳನ್ನು ಧ್ವಂಸ ಮಾಡುವುದಲ್ಲ, ಬದಲಾಗಿ ಆತ್ಮವಿಮರ್ಶೆ ಅನಿವಾರ್ಯವಾಗಿದೆ. ಮೂಲಭೂತವಾದಿಗಳು ಎಲ್ಲಾ ಧರ್ಮಗಳಲ್ಲಿಯೂ ಇದ್ದಾರೆ. ಎಲ್ಲಿಯ ತನಕ ಕೆಳಹಂತದ ವರ್ಗಗಳನ್ನು ಮುಖ್ಯವಾಹಿನಿಗೆ ಸೇರಿಸಿಕೊಳ್ಳುವುದಿಲ್ಲವೋ ಅಲ್ಲಿಯತನಕ ಮತಾಂತರದ ಘರ್ಷಣೆಗಳು ನಡೆಯುತ್ತಲೇ ಇರುತ್ತವೆ.

**ಎಸ್. ಸುರೇಶ್ ನಾಗಲಮಡಿಕೆ**
ಕನ್ನಡ ಉಪನ್ಯಾಸಕರು, ಎಸ್.ಜೆ.ಇ.ಎಸ್. ಕಾಲೇಜು. ಮೇಡಹಳ್ಳಿ, ಬೆಂಗಳೂರು -೫೬೦ ೦೪೦

# ಮತಾಂತರದ ಪ್ರಶ್ನೆ

ನಗರಗೆರೆ ರಮೇಶ್

**ಭಾ**ರತದಲ್ಲಿ ವಿವಿಧ ಜಾತಿಗಳು ಮತ್ತು ಧರ್ಮಗಳ ನಡುವಿನ ಘರ್ಷಣೆಗಳಿಗೆ ಹಲವು ದಶಕಗಳ ಇತಿಹಾಸವೇ ಇದೆ. ಬಹುಸಂಖ್ಯಾತರಿಗೆ ಹಾಗೂ ಅಲ್ಪಸಂಖ್ಯಾತರಿಗೆ ಇರುವ ಮನಸ್ತಾಪಗಳಿಗೆ, ಅಸಹನೆಗೆ ಅವರ ನಡುವಿನ ಸಂಶಯಗಳು, ಸ್ಪರ್ಧೆ ಕಾರಣವಾಗಿರುವಂತೆಯೇ ವಿವಿಧ ಧರ್ಮಗಳವರು ತಮ್ಮ ಧರ್ಮಗಳನ್ನು ಕಾಪಾಡಿಕೊಳ್ಳುವ ಭರದಲ್ಲಿ ಬೇರೆ ಧರ್ಮಗಳ ಮೇಲೆ ದಾಳಿ ಮಾಡುವುದನ್ನೇ ಪ್ರಮುಖ ಮಾರ್ಗವಾಗಿ ಬಳಸಿರುವುದನ್ನೂ ಕಾಣಬಹುದು. ಇಂಥ ಕೋಮು ಘರ್ಷಣೆಗಳು ರಾಜಕೀಯ ಆರ್ಥಿಕ ಕಾರಣಗಳಿಂದ ಆರಂಭವಾಗಿ ಕೊನೆಗೆ ಸಾವಿರಾರು ಅಮಾಯಕ ಪ್ರಾಣಗಳು ಬಲಿಯಾಗುವುದರಲ್ಲಿ ಪರ್ಯವಸಾನಗೊಂಡಿವೆ.

ಇದುವರೆಗೂ ಹಿಂದೂ ಮುಸ್ಲಿಂ ಘರ್ಷಣೆಗಳೇ ಹೆಚ್ಚಾಗಿ ನಡೆಯುತ್ತಿದ್ದು ಈಗ ಹೊಸದಾಗಿ ಬಹುಸಂಖ್ಯಾತರ ದಾಳಿಗೆ ಮತ್ತೊಂದು ಅಲ್ಪಸಂಖ್ಯಾತ ಸಮುದಾಯವಾದ ಕ್ರೈಸ್ತರು ತುತ್ತಾಗಿರುವುದು ಇತ್ತೀಚಿನ ಬೆಳವಣಿಗೆ. 'ಮತಾಂತರ'ಗೊಳಿಸುವುದೆಂಬ ಅಪರಾಧ ಮಾಡಿದ್ದಕ್ಕಾಗಿ ಎಲ್ಲ ಕ್ರೈಸ್ತರನ್ನು ತಪ್ಪಿತಸ್ಥ ಸ್ಥಾನದಲ್ಲಿ ನಿಲ್ಲಿಸಿ ಅವರಿಗೆ ಶಿಕ್ಷೆ ನೀಡುವ ಅಧಿಕಾರವನ್ನು ತಮಗೆ ತಾವೇ ಕೊಟ್ಟುಕೊಂಡಿರುವ ಹಿಂದುತ್ವವಾದಿಗಳು ಆ ಮೂಲಕ ತಮ್ಮ ಸಾಂಸ್ಕೃತಿಕ ರಾಷ್ಟ್ರೀಯತೆಯನ್ನು ಪುಷ್ಟಿಗೊಳಿಸುತ್ತಿದ್ದೇವೆಂದು ಹೇಳಿಕೊಳ್ಳುತ್ತಿದ್ದಾರೆ. ತಮ್ಮ ಕಲ್ಪನೆಯ 'ಹಿಂದೂ ರಾಷ್ಟ್ರ'ದಲ್ಲಿ ಬೇರೆಲ್ಲ ಧರ್ಮದವರು ಎರಡನೆಯ ದರ್ಜೆಯ ಪ್ರಜೆಗಳಾಗಿರಬೇಕೆಂಬ ಸಂಪೂರ್ಣವಾಗಿ ಅಪ್ರಜಾಸ್ವಾಮಿಕ ಚಿಂತನೆಯನ್ನು ಆಚರಣೆಗಿಳಿಸುವ ಅವರ ಕಾರ್ಯಸೂಚಿಯಲ್ಲಿ ಮುಸ್ಲಿಮರ ನಂತರ ದಾಳಿಗೆ ಒಳಗಾಗುತ್ತಿರುವವರು ಕ್ರೈಸ್ತರು. ಈ ದೇಶದ ಸಂಸ್ಕೃತಿಗೆ ಬದ್ಧರಾಗಿಲ್ಲವೆಂಬುದು ಮುಸ್ಲಿಮರ ವಿರುದ್ಧದ ಆಪಾದನೆಯಾದಂತೆ ಈಗ ಕ್ರೈಸ್ತರ ಮೇಲಿನ ದಾಳಿಗಳಿಗೆ ಅವರು ನೀಡುವ ಕಾರಣ 'ಮತಾಂತರ'.

ಹಾಗೆ ನೋಡಿದರೆ, ಮತಾಂತರವೆಂಬುದು ಈ ದೇಶಕ್ಕೆ ಹೊಸದೇನಲ್ಲ. ವಿಶ್ವದಾದ್ಯಂತ ದೇವರೆಂಬ ಕಲ್ಪನೆಯನ್ನು ಸೃಷ್ಟಿಸಿಕೊಂಡು ಒಂದು ಅತಿ ಮಾನುಷ ಶಕ್ತಿಯನ್ನು ಆರಾಧಿಸುವುದನ್ನು ಆರಂಭಿಸಿದ ಅದೆಷ್ಟೋ ಕಾಲದ ನಂತರ ಆ ನಂಬಿಕೆಗೆ ಒಂದು ವ್ಯವಸ್ಥಿಕೃತ ರೂಪವನ್ನು ಕೊಟ್ಟು ಮತ ಧರ್ಮಗಳನ್ನು ಹುಟ್ಟು ಹಾಕಲಾಯಿತು. ಅದೇ ಪ್ರಕ್ರಿಯೆಯೇ ಈ ದೇಶದಲ್ಲಿಯೂ ನಡೆಯಿತು. ದೈವವೆಂಬ ನಂಬಿಕೆ ಸಾರ್ವತ್ರಿಕವಾದ್ದು. ಈ ನಂಬಿಕೆಯ ವ್ಯವಸ್ಥಿಕೃತ ರೂಪವಾದ ಮತ ಅಥವಾ ಧರ್ಮಗಳು ಅವು ಹುಟ್ಟಿದ ಸ್ಥಳ ಹಾಗೂ ಸಮಯಗಳಿಗೆ ಅನುಗುಣವಾಗಿ ವಿವಿಧ ಹೆಸರುಗಳನ್ನು, ರೂಪಗಳನ್ನು ಪಡೆದಿವೆ. ಈ ವ್ಯವಸ್ಥೆಗಳ ನಡುವೆ ಸ್ಪರ್ಧೆಗಳು ಏರ್ಪಟ್ಟು ಧರ್ಮಯುದ್ಧಗಳು ನಡೆದಿರುವುದು ಚರಿತ್ರೆಯಲ್ಲಿ ದಾಖಲಾಗಿದೆ. ಈ ಜಗಳಗಳ ನಡುವೆ ಒಂದು ಮತ (ಧರ್ಮ)ವನ್ನು ಬಿಟ್ಟು ಮತ್ತೊಂದು ಮತ(ಧರ್ಮ)ವನ್ನು ಸೇರುವುದೂ ನಡೆಯಿತು ಅಥವಾ ಹಾಗೆ ಸೇರುವಂತೆ ಮಾಡಲಾಯಿತು. ಈ ಮತಾಂತರ ಕೆಲವು ಬಾರಿ ಸ್ವಇಚ್ಛೆಯಿಂದ ನಡೆದರೆ, ಹಲವು ಸಂದರ್ಭಗಳಲ್ಲಿ ಬಲಾತ್ಕಾರವೂ ಇತ್ತು ಎನ್ನುವುದು ರಹಸ್ಯವಾಗೇನೂ ಉಳಿದಿಲ್ಲ.

ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಈ ದೇಶದಲ್ಲಿ ಪ್ರತ್ಯಕ್ಷವಾಗಿ ಆಳ್ವಿಕೆ ನಡೆಸುತ್ತಿದ್ದ ಕಾಲದಲ್ಲಿ ತಮ್ಮ ರಾಜಕೀಯ ಅಧಿಕಾರವನ್ನು ಭದ್ರಪಡಿಸಿಕೊಳ್ಳಲು ಅನುಸರಿಸಿದ ಹಲವಾರು ವಿಧಾನಗಳಲ್ಲಿ ಮತಾಂತರವೂ ಒಂದು. ತನ್ನ ಅಧೀನದಲ್ಲಿರುವವರು ಹೆಚ್ಚಿನ ಸಂಖ್ಯೆಯಲ್ಲಿ ಇಂಗ್ಲೆಂಡಿನ ಧರ್ಮವಾದ ಕ್ರೈಸ್ತ ಧರ್ಮಾವ

ಅನುಯಾಯಿಗಳಾದರೆ, ಆ ಮೂಲಕ ತನ್ನ ಸರ್ಕಾರಕ್ಕೂ ವಿಧೇಯರಾಗಿರುತ್ತಾರೆ ಎನ್ನುವ ಚಿಂತನೆ ಸಾಮ್ರಾಜ್ಯಶಾಹಿ ಸರ್ಕಾರದ್ದಾಗಿತ್ತು. ಹಾಗಾಗಿ ತನ್ನ ಅಧಿಕಾರವನ್ನು ಬಳಸಿಕೊಂಡು ಜನರನ್ನು ಮತಾಂತರಗೊಳಿಸುವುದು ಸುಲಭದ ಸಂಗತಿಯೂ ಆಗಿತ್ತು. ಇದೇ ಅಂಶವು ಹಿಂದೆ ಮುಸ್ಲಿಂ ದೊರೆಗಳು ಜನರನ್ನು ಮತಾಂತರಗೊಳಿಸಿದಾಗಲೂ ಕೆಲಸ ಮಾಡಿದೆ ಎಂಬುದು ಸ್ಪಷ್ಟ. ಅದಕ್ಕಿಂತಲೂ ಮುಖ್ಯವಾಗಿ ಹಿಂದೂ ಸಮಾಜದಲ್ಲಿದ್ದ (ಇನ್ನೂ ಇರುವ) ಶ್ರೇಣೀಕೃತ ವ್ಯವಸ್ಥೆ ಇಲ್ಲಿನ ಕೆಳಜಾತಿಗಳ ಜನರು ಹೊಸ ಧರ್ಮಗಳ ಕಡೆ ಆಕರ್ಷಿತರಾಗಲು ದಾರಿಮಾಡಿಕೊಟ್ಟಿತು. ಇಲ್ಲಿ ಮುಖ್ಯವಾಗಿದ್ದು ದೇವರು, ಧರ್ಮ ಎಂಬ ಕಲ್ಪನೆಗಿಂತಲೂ ಹೆಚ್ಚಾಗಿ ಯಾವ ರೀತಿಯ ಸಾಮಾಜಿಕ ಸ್ಥಾನಮಾನ ಆ ಹೊಸ ಧರ್ಮದಲ್ಲಿ ತಮಗೆ ಸಿಗುತ್ತದೆ ಎನ್ನುವುದು. ಜಾತಿಯ ಹೆಸರಿನಲ್ಲಿ ಎಲ್ಲ ರೀತಿಯ ಅನ್ಯಾಯಕ್ಕೆ ಒಳಗಾದ ಜನರಿಗೆ ಬೇರೆ ಧರ್ಮಗಳು ವಿಮೋಚನಾ ಮಾರ್ಗಗಳಂತೆ ಕಂಡರೆ ಅದು ತುಂಬ ಸಹಜವಾದ ಬೆಳವಣಿಗೆ.



**ಸೃಷ್ಟಿ**
ಸೃಷ್ಟಿಕರ್ತರ
ಸೃಷ್ಟಿಕರ್ತೆ
ತಾಯಿ

ಪ್ರಾಸಂಗಿಕವಾಗಿ ಹೇಳುವುದಾದರೆ ಕ್ರೈಸ್ತ ಧರ್ಮ ರೂಪುಗೊಂಡು ಜನರ ನಡುವೆ ಪ್ರಭಾವಶಾಲಿಯಾಗಿ ಬೆಳೆಯುತ್ತಿದ್ದ ಸಂದರ್ಭದಲ್ಲಿ ಕ್ರೈಸ್ತರು ರೋಮನ್ ಸಾಮ್ರಾಜ್ಯದ ಅಧಿಕಾರಿಗಳಿಂದ ವಿಪರೀತ ದೌರ್ಜನ್ಯಕ್ಕೆ ಒಳಗಾದರು. ಏಸುಕ್ರಿಸ್ತನೇ ಶಿಲುಬೆಗೆ ಏರಬೇಕಾಯಿತು. ವಿಪರ್ಯಾಸವೆಂದರೆ, ಮುಂದೆ ಹಲವು ಶತಮಾನಗಳ ನಂತರ ವಿಮೋಚನೆಯ ದಾರಿಯಾಗಿದ್ದ ಕ್ರೈಸ್ತ ಧರ್ಮದ ಅನುಯಾಯಿಗಳು ಜಗತ್ತಿನ ಹಲವೆಡೆ ಆ ಧರ್ಮವನ್ನೂ ಬಳಸಿಕೊಂಡು 'ಬಿಳಿಯವನ ಜವಾಬ್ದಾರಿ'ಯ ಹೆಸರಿನಲ್ಲಿ ಜನರನ್ನು ತಮ್ಮ ಅಡಿಯಾಳುಗಳನ್ನಾಗಿಸಿಕೊಂಡರು.

ಭಾರತದ ಇತಿಹಾಸದಲ್ಲಿ ಮತಾಂತರದ ಸಂದರ್ಭಗಳು ಸಾಕಷ್ಟಿವೆ. ಆರ್ಯರು ಇಲ್ಲಿಗೆ ಬರುವ ಮುನ್ನ ಹಲವು ಜನಾಂಗಗಳು, ಬುಡಕಟ್ಟುಗಳು ತಮ್ಮದೇ ಆದ ಧಾರ್ಮಿಕ/ದೈವಿಕ ನಂಬಿಕೆಗಳನ್ನು, ಆಚರಣೆಗಳನ್ನು ಪಾಲಿಸಿಕೊಂಡು ಬರುತ್ತಿದ್ದರು. ತಮ್ಮ ಯುದ್ಧ ಪರಿಣತಿಯಿಂದಾಗಿ ಆರ್ಯರು ಇಲ್ಲಿನ ಮೂಲ ನಿವಾಸಿಗಳನ್ನು ಬಗ್ಗು ಬಡಿದು ತಮ್ಮದೇ ಆದ ದೈವಿಕ ಕಲ್ಪನೆಗಳನ್ನು ಎಲ್ಲ ಸಮುದಾಯಗಳ ಮೇಲೆ ಹೇರಿದರು. ಹೀಗೆ ಮಾಡುವಾಗ ಇಲ್ಲಿನ ಮೂಲನಿವಾಸಿಗಳ ಕೆಲವು ನಂಬಿಕೆಗಳನ್ನೂ ತಮ್ಮ ಆಚರಣೆಗಳ ಭಾಗವನ್ನಾಗಿಸಿಕೊಂಡರು. ಈ ಒಳಗೊಳ್ಳುವಿಕೆಯಿಂದಾಗಿ ಈಗ ಆರ್ಯರ ಆಚರಣೆ/ನಂಬಿಕೆ ಮತ್ತು ಮೂಲನಿವಾಸಿಗಳ ನಂಬಿಕೆ/ಆಚರಣೆ ಒಂದಾಗಿ ಬೆರೆತುಹೋಗಿ ಹೊಸ ವ್ಯವಸ್ಥೆಯೇ ರೂಪಿತವಾಯಿತು. ಆದರೂ ಆರ್ಯರ ವೇದಗಳು ಆಧಾರ ಗ್ರಂಥಗಳಾಗಿ ಅವುಗಳಲ್ಲಿ ಏನು ಬರೆದಿದೆಯೆಂಬುದು ತಿಳಿಯದವರೂ ಸಹ ವೈದಿಕರ ಮಾತಿಗೆ ತಲೆಬಾಗಬೇಕಾಯಿತು. ಈ ಪ್ರಕ್ರಿಯೆ ನಿರಂತರವಾಗಿ ನಡೆದು ವೇದ ಪ್ರಣೀತ ಸನಾತನ ಧರ್ಮದ ಅಡಿಯಲ್ಲಿಯೇ ಹೊಸ ಹೊಸ ಜಾತಿಗಳು ಜನ್ಮತಳೆದವು. ನಂತರ ಚಾಲ್ತಿಗೆ ಬಂದ 'ಹಿಂದು' ಎಂಬ ಹೆಸರಿನಿಂದ ಕರೆಯಲ್ಪಡುತ್ತಿರುವ ಧರ್ಮದ ಅನುಯಾಯಿಗಳ ನಡುವೆಯೇ ಧಾರ್ಮಿಕ ಆಚರಣೆಗಳಿಗೆ ಸಂಬಂಧಪಟ್ಟಂತೆ ಸಾಕಷ್ಟು ವೈವಿಧ್ಯಗಳಿವೆ. ಮುಂದೆ ಬಂದ ಬುದ್ಧ, ಬಸವ, ಗುರು ನಾನಕ್‌ರಂಥವರು ಹೊಸ ಮಾರ್ಗಗಳನ್ನು ಬೋಧಿಸಿದರು. ಸಾವಿರಾರು ಸಂಖ್ಯೆಯಲ್ಲಿ ಇಲ್ಲಿನ ಜನ ಈ ಹೊಸ ಧರ್ಮಗಳಿಗೆ ಮತಾಂತರಗೊಂಡಿದ್ದು ಆಯಿತು. ಈ ದೇಶದ ಚರಿತ್ರೆಯನ್ನು ವಸ್ತುನಿಷ್ಠವಾಗಿ ಪರಿಶೀಲಿಸಿದಾಗ ಇಂಥ ಮತಾಂತರಗಳು ಜರುಗಿದ ಸಂದರ್ಭಗಳಲ್ಲಿ ಧರ್ಮದ ಪಾಲೆಷ್ಟಿತ್ತು ಮತ್ತು ಸಾಮಾಜಿಕ ಕಾರಣಗಳೆಷ್ಟಿದ್ದವು ಎನ್ನುವುದು ಸ್ಪಷ್ಟವಾಗುತ್ತದೆ.

ಇಂದಿಗೂ ಮತಾಂತರಗಳು ನಡೆಯುತ್ತಿರುವುದು ಇಂಥದೇ ಕಾರಣಕ್ಕಾಗಿಯೇ. ಸಾಮಾನ್ಯ ಜನರಿಗೆ ದೇವರು, ಧರ್ಮಗಳು ಎಷ್ಟೇ ಮುಖ್ಯವಾದರೂ, ಅವುಗಳಿಗಿಂತಲೂ ಹೆಚ್ಚು ಮುಖ್ಯವಾದದ್ದು ಜೀವನ, ಆ ಜೀವನ ಎಷ್ಟು ಸಹನೀಯ ಎನ್ನುವುದು. ಕಳೆದ ಶತಮಾನದಲ್ಲಿ ತಮಿಳು ನಾಡಿನ ಮೀನಾಕ್ಷಿಪುರಂನಲ್ಲಿ ದಲಿತರು ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡಾಗ ಇಲ್ಲಿನ ಹಿಂದೂ ಮಠಾಧೀಶರು ದೊಡ್ಡ ಅನ್ಯಾಯ ನಡೆದುಹೋಗಿದೆ ಎಂಬಂತೆ ವರ್ತಿಸಿದರು. ಅಂದಿನಿಂದ ಇಂದಿನವರೆಗೂ ಈ ಹಿಂದೂವಾದಿಗಳಾಗಲೀ, ಅವರ ರಾಜಕೀಯ ಘಟಕದವರಾಗಲೀ ದಲಿತರೇ ಯಾಕೆ ಹೆಚ್ಚಾಗಿ ಮತಾಂತರಗೊಳ್ಳುತ್ತಾರೆ ಎಂಬುದರ ಬಗ್ಗೆ ಗಂಭೀರವಾಗಿ, ಪ್ರಾಮಾಣಿಕವಾಗಿ ಮಾತನಾಡಿದ್ದಿಲ್ಲ. ಈ ಪ್ರಶ್ನೆಗೆ ಉತ್ತರ ತಿಳಿದಿದ್ದರೂ ಅವರು ಅದನ್ನು ಒಪ್ಪಿಕೊಳ್ಳಲು ತಯಾರಿಲ್ಲ. ಬದಲಾಗಿ ಬಲಾತ್ಕಾರ, ಆಮಿಷ ಮುಂತಾದ ಸವಕಲು ಪದಗಳನ್ನೇ ಬಳಸುತ್ತಾ ಬೇರೆ ಧರ್ಮದವರ ಮೇಲೆ ಆಪಾದನೆ ಮಾಡುತ್ತಾ ಅವರ ಮೇಲೆ ದಾಳಿಗಳನ್ನು ನಡೆಸುವ ಮೂಲಕ ತಮ್ಮ ಸಾಂಸ್ಕೃತಿಕ ರಾಷ್ಟ್ರೀಯತೆಯನ್ನು ಗಟ್ಟಿಗೊಳಿಸುವ ಪ್ರಯತ್ನ ಮಾಡುತ್ತಿದ್ದಾರೆ. ೧೯೪೭ರ ಸಂದರ್ಭಕ್ಕೂ ಮುಂಚೆ ಮೇಲ್ಜಾತಿಯ ಹಲವರು ಕ್ರೈಸ್ತರಾದ ಉದಾಹರಣೆಗಳೂ ಇವೆ. ಇವರು ತಮ್ಮ ಆಸ್ತಿಯ ರಕ್ಷಣೆಗಾಗಿ, ಅಧಿಕಾರದ ಆಸೆಗಾಗಿ ಹಾಗೆ ಮಾಡಿದರೆ, ದಲಿತರು ವಿಮೋಚನಾ ಮಾರ್ಗವಾಗಿ ಕ್ರೈಸ್ತ ಧರ್ಮವನ್ನು ಆಯ್ದುಕೊಂಡರು. ಸಂಘಪರಿವಾರದವರು ಹೇಳುವ ಬಲಾತ್ಕಾರ, ಆಮಿಷಗಳು ಇಲ್ಲಿ ಕೆಲಸ ಮಾಡಿದ್ದರೆ ಈ ದೇಶದ ಜನಸಂಖ್ಯೆಯ ಕೇವಲ ಶೇ ೨.೬ರಷ್ಟು ಜನ ಮಾತ್ರ ಕ್ರೈಸ್ತರಾಗಿರುತ್ತಿರಲಿಲ್ಲ. ಮಿಷನರಿಗಳು ನಡೆಸುವ ಎಲ್ಲ ಸೇವಾ ಸಂಸ್ಥೆಗಳ ಅನುಕೂಲಗಳನ್ನು ಪಡೆಯುವ ಜನರೆಲ್ಲರೂ ಕ್ರೈಸ್ತರಾಗಿರಬೇಕಾಗಿತ್ತು. ಈ ಸತ್ಯಾಂಶವನ್ನು ಮುಚ್ಚಿಟ್ಟು ತಮ್ಮ ಹಿಂದುತ್ವ ಪ್ರಣಾಳಿಕೆಯನ್ನು ಆಚರಣೆಗೆ ತರುವುದಕ್ಕಾಗಿ ಸಂಘಪರಿವಾರ ತನ್ನ ವಿವಿಧ ಘಟಕಗಳ ಮೂಲಕ ಕ್ರೈಸ್ತರ ಮೇಲೆ ದಾಳಿಗಳನ್ನು ನಡೆಸುತ್ತಿದೆ ಎಂಬುದು ಸ್ಪಷ್ಟ. ಈ ಸತ್ಯ ತಿಳಿಯಲು ಯಾವುದೇ ಆಯೋಗವು ಬೇಕಿಲ್ಲ.

ಹಿಂದೂ ಧರ್ಮದಿಂದ ಮತಾಂತರಗೊಂಡವರನ್ನು ಮತ್ತೆ ಈ ಧರ್ಮಕ್ಕೆ ಕರೆತರುವ 'ಘರ್ ವಾಪಸಿ'ಕಾರ್ಯ ಪರಿವಾರದವರಿಂದ ನಡೆಯುತ್ತಿದೆ. ಈಗಿನ ಒರಿಸ್ಸಾದ ಉದಾಹರಣೆಯನ್ನು ಪರಿಗಣಿಸಿದರೆ ಈ ಪ್ರಕ್ರಿಯೆಯ ಮುಖ್ಯ ಅಂಶ ಬಲಾತ್ಕಾರ. ಮತ್ತೆ ಹಿಂದುಗಳಾಗದಿದ್ದರೆ ಕ್ರೈಸ್ತರು ತಮ್ಮ ಹಳ್ಳಿಗಳಲ್ಲಿ ವಾಸಮಾಡಲಾಗದ ಪರಿಸ್ಥಿತಿ ನಿರ್ಮಾಣವಾಗಿದೆ. ಆದರೆ ಕರ್ನಾಟಕ ಸರ್ಕಾರವಾಗಲಿ, ಒರಿಸ್ಸಾ ಸರ್ಕಾರವಾಗಲಿ ತಮ್ಮ ಹೇಳಿಕೆಗಳಲ್ಲಿ ಈ ವಿಷಯವನ್ನು ಪ್ರಸ್ತಾಪಿಸುವುದೇ ಇಲ್ಲ. ಕ್ರೈಸ್ತರ ಮೇಲೆ ಅಮಾನವೀಯ ದಾಳಿಗಳು ನಡೆಯುತ್ತಿರುವುದು ಜಗತ್ತಿನಾದ್ಯಂತ ತಿಳಿದಿದ್ದರೂ, ಈ ರಾಜ್ಯದ ಮುಖ್ಯಮಂತ್ರಿ ಹಾಗೂ ಗೃಹ ಮಂತ್ರಿಗಳು ಬಲಾತ್ಕಾರದ ಮತಾಂತರದ ಬಗ್ಗೆ ಮಾತ್ರವೇ ಹೆಚ್ಚು ಮಾತನಾಡುವ ಧೂರ್ತತನದ ಪ್ರದರ್ಶನ ಮಾಡುತ್ತಿದ್ದಾರೆ. ಇವರಿಗೆ ಬೆಂಬಲವಾಗಿ ನಿಂತಿರುವ ಮಠಾಧೀಶರುಗಳು ಸಹ ದಾಳಿಗಳನ್ನು ಖಂಡಿಸುವ ಬದಲಾಗಿ ಮತಾಂತರವೇ ದೊಡ್ಡ ಸಮಸ್ಯೆ ಎಂಬಂತೆ ಮಾತನಾಡುತ್ತಾರೆ. ರಾಮಕೃಷ್ಣ ಮಠದ ಹರ್ಷಾನಂದರವರು "ಒಬ್ಬ ಹಿಂದೂ ಬೇರೆ ಧರ್ಮಕ್ಕೆ ಮತಾಂತರಗೊಂಡರೆ ದೇಶದ್ರೋಹಿಗಳ ಪಟ್ಟಿಗೆ ಒಬ್ಬನು ಸೇರ್ಪಡೆಯಾದಂತೆ" ಎಂಬಂಥ ಅತ್ಯಂತ ಘಾತುಕತನದ ಹೇಳಿಕೆಯನ್ನು ನೀಡುತ್ತಾರೆಂದರೆ ಇವರ ಧಾರ್ಮಿಕ ಅಸಹನೆ ಯಾವ ಮಟ್ಟಕ್ಕೆ ತಲುಪಿದೆ ಎಂಬುದು ತಿಳಿಯುತ್ತದೆ. ಇವರು ಪರಮಹಂಸರ ಪರಂಪರೆಯವರು!

ಜಾಗತೀಕರಣದ ಸುನಾಮಿಯ ಹೊಡೆತಕ್ಕೆ ಸಿಕ್ಕ ದೇಶದ ಸಾಮಾನ್ಯ ಜನರ ಬದುಕು ದುರ್ಭರವಾಗುತ್ತಿದೆ. ಆದರೆ ಸಂಘಪರಿವಾರದ ಜನ ಈ ಸಮಸ್ಯೆಗಳಿಗೆ ಬೆನ್ನು ಹಾಕಿ ತಮ್ಮ ರಾಜಕೀಯ ದಾಳವಾಗಿ ಧಾರ್ಮಿಕ ಸಮಸ್ಯೆಗಳನ್ನು ಸೃಷ್ಟಿಸುವುದರ ಮೂಲಕ ಜನವಿರೋಧಿ ಕಾರ್ಯದಲ್ಲಿ ಮಗ್ನರಾಗಿದ್ದರೂ ತಾವೇ ದೇಶಭಕ್ತರೆಂಬ ಚಿತ್ರಣವನ್ನು ಕೊಡಲು ಯತ್ನಿಸುತ್ತಿದ್ದಾರೆ. ಇಂಥ ಹುನ್ನಾರಗಳನ್ನು ಸೋಲಿಸಬೇಕೆಂದರೆ ನಿಜವಾದ ಧರ್ಮ ನಿರಪೇಕ್ಷತೆಯಿಂದ ಮಾತ್ರ ಸಾಧ್ಯ. ಕೇವಲ ಅಧಿಕಾರ ಪಡೆಯಲು ಧರ್ಮ ನಿರಪೇಕ್ಷತೆಯ ಸೋಗನ್ನು ಹಾಕಿದರೆ ಅದೂ ಸಹ ಯಶಸ್ವಿಯಾಗುವುದಿಲ್ಲ. ಪ್ರಜ್ಞಾವಂತ, ನಿಸ್ಪೃಹ ಜನರು ಈ ದಿಕ್ಕಿನಲ್ಲಿ ಮುನ್ನಡೆದರೆ ಮಾತ್ರ ಇಂಥ ಜನವಿರೋಧಿ ಶಕ್ತಿಗಳಿಗೆ ಕಡಿವಾಣ ಹಾಕುವುದರಲ್ಲಿ ಯಶಸ್ಸನ್ನು ಕಾಣಬಹುದಾಗಿದೆ.

**ನಗರಗೆರೆ ರಮೇಶ್**
೩೬೬, ೮ನೇ ಅಡ್ಡ ರಸ್ತೆ, ೮ನೇ ಮುಖ್ಯರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦

# ನೆನ್ನೆಲ್ಲ - ನೆನೆಗಲ್ಲ

ನಮ್ಮ ಭಾರತ ದೇಶವು ಸ್ವಾತಂತ್ರ್ಯದ ಸಂಭ್ರಮವನ್ನು ಕಂಡಾಗ, ಅಂದಿನ ರಾಜಕೀಯ ಮುತ್ಸದ್ದಿಗಳ ದೃಷ್ಟಿಯಲ್ಲಿ ಈ ದೇಶವು ಒಂದು ಹೊಸ ಸಂಸಾರವನ್ನು ಹೂಡುವ ಸಾಧ್ಯತೆಯಿರುವ ಒಂದು ಸಣ್ಣ ಕುಟುಂಬದಂತಿತ್ತು. ಇದು ಭಾರತೀಯ ದೇಶಪ್ರೇಮಿಗಳಲ್ಲಿ ಬಹುಜನ ಸಂಕಲ್ಪವೇ ಆಗಿತ್ತು ಮತ್ತು ತಮ್ಮ ಇಚ್ಛಾನುಸಾರ ಸುಧಾರಣೆಯನ್ನು ಮಾಡುವ ಹೊಸ ಹುಮ್ಮಸ್ಸು, ಪ್ರತಿಯೊಬ್ಬನ ವೈಯಕ್ತಿಕ ಸಂಪತ್ತಿನ ಸದ್ಭಾವನೆಯು ಬಹು ಜನರದಾಗಿತ್ತು. ಇಷ್ಟು ಮಾತ್ರವಲ್ಲ, ಅಂದಂದಿನ ಕೆಲಸಗಳನ್ನು ಅಂದಂದೇ ಮಾಡಿ ಮುಗಿಸಿಕೊಂಡು ಸಾಗುವ ಕ್ರಿಯಾತ್ಮಕ ಮನಃಸ್ಥಿತಿ ಅಂದು ಅವರಲ್ಲಿತ್ತು. ಮುಂದಿನ ಯಾವ ಕೆಲಸಗಳೂ ಹೊರೆಯಾಗಲಾರವು ಎಂಬ ಭರವಸೆಯನ್ನು ಹೊಂದಿದವರಾಗಿದ್ದರು. ಇದರಿಂದ ಹಗುರಗೊಂಡ ಜೀವನವು ಸುಂದರಗೊಳ್ಳುವಂತಿತ್ತು.

ಆದರೆ, ಅವರೆಲ್ಲರೂ ಅಂದುಕೊಂಡಂತೆ ಆಯಿತೇ ! ಆಗಿಲ್ಲವೆನ್ನುವಂತೆಯೂ ಇಲ್ಲ ; ಯಾಕಾಗಲಿಲ್ಲ ಎನ್ನುವುದು ಯಕ್ಷಪ್ರಶ್ನೆಯೂ ಅಲ್ಲ. ಒಂದಿಷ್ಟು ಸಿಂಹಾವಲೋಕನದಂತೆ ಹಿಂತಿರುಗಿ ನೋಡಿದರೆ ಪರವಾಗಿಲ್ಲ ಎನ್ನುವ ನಿರ್ಲಿಪ್ತತನ ಕಾಣದೇ ಇಲ್ಲ; ಮುಂದೆ ನೋಡಿದರೆ ಚಿಂತೆ ಕಾಡದಿಲ್ಲ. ಅಭಿವೃದ್ಧಿ, ಪ್ರಗತಿ, ಪರಿವರ್ತನೆ ಎಂಬ ಮೂರು ಚಿಂತನೆಗಳಿಗೆ ಆಗ ಹೊಸ ಹುಟ್ಟು! ಸ್ವಾತಂತ್ರ್ಯದ ಹೆಸರಿನಲ್ಲಿ ದೇಶ ನಮ್ಮದೆನ್ನುವ ಉದ್ವೇಗ ಹೆಚ್ಚಾಗಿತ್ತೇ ವಿನಾ, ನಾಶವಾಗುತ್ತಿರುವುದು ಯಾರದೆನ್ನುವ ಪರಿಜ್ಞಾನ ಇದ್ದಿರಲಿಲ್ಲ. ನಮ್ಮ ಮನೆಯೊಳಗೆ ಬಂದು ಬೇರೆಯವರು ಕಾರುಬಾರು ಮಾಡುವುದನ್ನು ನಿಲ್ಲಿಸಬೇಕು; ಅಷ್ಟೇ ಅಲ್ಲ, ಅವರನ್ನು ಹೊರ ಹಾಕಬೇಕು. ಆದರೆ ಹಾಗಾಗಲಿಲ್ಲ. ನಮ್ಮದೆನ್ನುವುದನ್ನು ದೋಚಿಕೊಂಡು ಹೋಗುತ್ತಿದ್ದರೂ, ಅದನ್ನು ತಡೆಯುವುದರೊಂದಿಗೆ ನಮ್ಮದೆನ್ನುವುದನ್ನು ನಾಶಮಾಡಿಕೊಂಡು ಅವರನ್ನು ಹೊರಹಾಕಬೇಕಾಯಿತು. ಅಷ್ಟೊತ್ತಿಗೆ ಸಾರ್ವತ್ರಿಕವಾಗಿರುವ ಭಾರತದ ಮೂಲಭೂತ ಮತ್ತು ಪ್ರಸ್ತುತ ಸಂಪತ್ತನ್ನೂ ಸಾಕಷ್ಟು ನಾಶಮಾಡಿಕೊಂಡಿದ್ದೆವು. ಅಂದಿನ ಈ ದೇಶದ ಪ್ರಕ್ಷುಬ್ಧ ಸ್ಥಿತಿಗೆ ಕಾರಣವಾಗಿ ಹೆಣ ಹೊರಗೆ ಹೋದ ಕ್ಷಣದ ಮನೆಯಂತಾಗಿತ್ತು. ಅದನ್ನು ಶಿವನಮನೆ ಎಂತಲೂ ನಮ್ಮ ಜನಪದರು ಅನ್ನುತ್ತಾರೆ. ಇಂಥ ದೇಶದ ಭವಿಷ್ಯವನ್ನು ಕಟ್ಟಿಕೊಳ್ಳುವ ಹೊಸ ಕನಸು ಮನಸ್ಸು ನಮ್ಮದಾಗಿತ್ತು. ಬರಬರುತ್ತ ರಾಜಕೀಯ ವೈಪರೀತ್ಯಗಳು ವೈಯಕ್ತಿಕ ಪ್ರತಿಷ್ಠೆಯಾಗಿಯೂ ಬೆಳೆಯತೊಡಗಿದವು. ಇದರಿಂದಾಗಿ ಸಮಸ್ಯೆಗಳ ಸಂತಾನವೂ ರಾಷ್ಟ್ರಕಂಟಕವಾಗತೊಡಗಿತೆಂದರೆ ತಪ್ಪಲ್ಲ. ದೇಶದ ಜನಸಂಖ್ಯೆಯ ಹೆಚ್ಚಳ, ಆಹಾರೋತ್ಪಾದನೆಯ ಅಡಚಣೆ, ಶಿಕ್ಷಣದ ಕೊರಗು, ಔದ್ಯೋಗಿಕ ಸಮಸ್ಯೆ, ವಿದ್ಯುತ್ ಉತ್ಪಾದನೆ, ಸಾಮಾಜಿಕ ಕಲ್ಯಾಣ, ಗ್ರಾಮೀಣ ಅಭಿವೃದ್ಧಿ ಇಂಥ ಮೂಲಭೂತ ಹಲವಾರು ಸಮಸ್ಯೆಗಳು ದೇಶವನ್ನು ಕಾಡತೊಡಗಿದ್ದವು. ಇದಕ್ಕಿಂತಲೂ ಮಿಗಿಲಾಗಿ ಐತಿಹಾಸಿಕವಾಗಿ ಇಂದು ಅಂದಿನ ಸಮಕಾಲೀನರೆನಿಸಿಕೊಳ್ಳುವ ಮುಖಂಡರೊಳಗೇ ಸಮಾನ ಮನಸ್ಕರಾಗಿ ದುಡಿಯುವ ವಿಶಾಲ ದೃಷ್ಟಿಯ ಪ್ರವೃತ್ತಿ, ವೈರುಧ್ಯಗಳ ಗೊಂದಲ ಹೀಗೆ ಹಲವಾರು ಸಂದಿಗ್ಧತೆಗಳು ತಲೆ

■ ಅರ್ಜುನ ತಾ. ಕೋರಟಕರ



ದೋರಿದವು. ಇವು ರಾಷ್ಟ್ರಕ್ಕಾಗಿ ದುಡಿಯಬೇಕೆಂದುಕೊಂಡವರನ್ನು ಕಾಡತೊಡಗಿದವು. ಆದರೂ ಒಕ್ಕಟ್ಟಿನ ಬಲವನ್ನು ಮೀರಿದ ವೇನಾಗಿರಲಿಲ್ಲ. ವ್ಯಾಮೋಹದ ಧೂತಗಳು ಕಾಣದವಾದರು ಕೆಲವರ ಮನಸ್ಸಿನಲ್ಲಿ ಅವಕಾಶವಾದದಾಯಿತು.

ಸ್ವಾತಂತ್ರ್ಯೋತ್ಸವದ ದಿನಗಳು ಗಣನೆಗೆ ಬರುತ್ತಿದ್ದಂತೆ ಪ್ರಜಾಪ್ರಭುತ್ವದ ಹೊಸ ಸರ್ಕಾರಗಳ ಆತಂಕಗಳು ಶುರುವಾದಂತೆ ಹೊಸ ಪೀಳಿಗೆಯೂ ಕಾರ್ಯತಂತ್ರದಲ್ಲಿ ಸೇರ್ಪಡೆಗೊಂಡಿತು. ಹೊಸ ಸಂವಿಧಾನದ ಸರ್ಕಾರ ಮತ್ತು ಕಾನೂನುಗಳನ್ನು ಟೀಕಿಸಿ ಬದುಕುವ ಸಿಬ್ಬಂದಿ ವರ್ಗದಲ್ಲಿ ಮೊದಲು ಇದು ನನ್ನದು ಎಂಬ ಮನೋಭಾವನೆಯಿಂದ ಸಾಂಗಗೊಂಡದ್ದು ನಿಜ. ಆದರೆ ನಮ್ಮಲ್ಲಿ ಟೀಕೆ ಮಾಡುವ ಸ್ವಭಾವವೇ ಹೆಚ್ಚು. ಅದು ದಿವ್ಯ ತಿಳುವಳಿಕೆಯ ಜ್ಞಾನದಿಂದಲ್ಲ, ಅಜ್ಞಾನದಿಂದ. ನಮ್ಮ ದೇಶದ ಬೆಳವಣಿಗೆ ಮತ್ತು ಬೆಳವಣಿಗೆಯ ಶಿಸ್ತು ತುಂಬ ಗಮನಾರ್ಹವಾದುದು. ಸುಸಂಸ್ಕೃತ ಜ್ಞಾನದಿಂದ ಹಲವಾರು ಯೋಜನೆಗಳು ಜನಜೀವನದ ಅಪಾರ ಅನುಭವದಿಂದ ಒಡಮೂಡಿಬಂದವುಗಳಾಗಿವೆ. ಒಂದಷ್ಟು ಜ್ಞಾನ ಪಿಪಾಸುವಾದರೆ ಅರ್ಥವಾದೀತು. ನಮ್ಮ ದೇಶದ ಸುವ್ಯವಸ್ಥಿತ ಸಂಕಲ್ಪಗಳನ್ನು ಅಚ್ಚುಕಟ್ಟಾಗಿ ವಾಸ್ತವೀಕರಣಗೊಳಿಸುವುದು ಬಹುಮುಖ್ಯ. ಸ್ವಾರ್ಥ, ದುರಾಸೆ, ಸ್ವಜನ ಪಕ್ಷಪಾತ, ರಾಜಕೀಯ ಪಕ್ಷಪಾತಗಳು ದಿನೇ ದಿನೇ ಉಲ್ಬಣಿಸತೊಡಗಿದವು. ಇದರಿಂದಾಗಿ ಸ್ವಾತಂತ್ರ್ಯದ ಅಂದಿನ ದಿನಗಳನ್ನು ಮರೆಮಾಚತೊಡಗಿಸಿತು. ಪಾರತಂತ್ರ್ಯದಲ್ಲಿರುವಾಗ ನಡೆಯುವ ದೋಚುವಿಕೆಗಿಂತಲೂ ಸ್ವತಂತ್ರ ಭಾರತದ ಪ್ರಜಾಪ್ರಭುತ್ವದ ಸಂವಿಧಾನಾತ್ಮಕ ಆಡಳಿತದಲ್ಲಿ ಅದಕ್ಕಿಂತಲೂ ದುಷ್ಟತನದಿಂದ ನಮ್ಮನ್ನೇ ನಾವು ಹಾಳುಮಾಡಿಕೊಳ್ಳುವ ನೋವು ಯಾರನ್ನೂ ಕಾಡಲಿಲ್ಲ. ಅರ್ಥ ಕಳೆದುಕೊಂಡ ಚುನಾವಣೆಗಳು ಪ್ರಜೆಗಳನ್ನು ಆರ್ಥಿಕ ಕೊರತೆಗೆ ದೂಡುತ್ತವೆ ಎಂದಾಗಲಿ, ಈ ಚುನಾವಣೆಗಳು ಪ್ರಾಮಾಣಿಕತೆಯಿಂದ ಹೊರತಾದುವೆಂದಾಗಲಿ ತಿಳಿಯುವಂತಾಗಲಿಲ್ಲ. ಒಂದು ಅರ್ಥದಲ್ಲಿ ಪ್ರಜಾಚಿಂತನೆಯ ಕೆಲಸವೂ ಈ ಮೂಲಕ ನಡೆಯತೊಡಗಿದವೆಂದು ಭಾವಿಸುವಂತಾಯಿತು. ಆಮಿಷಗಳಿಗೆ ಬಲಿಯಾಗುವ ಕ್ರಿಯೆ ಇಂದಿಗೂ ಮುಂದುವರೆದಿದೆ. ಬಹುತೇಕ ರಾಜಕೀಯ ಪಕ್ಷಗಳು ಅಧಿಕಾರ ಹಿಡಿಯುವ ಸಲುವಾಗಿ ಮಾಡಬಾರದ್ದನ್ನು ಮಾಡತೊಡಗಿವೆ. ಈ ದೇಶದ ಬುದ್ಧಿಜೀವಿಗಳು, ಚಿಂತಕರು ವಾಸ್ತವಿಕತೆಯಲ್ಲಿ ಈ ದೇಶದ ಪ್ರಜಾಪ್ರಭುತ್ವದ ಸುವ್ಯವಸ್ಥೆಗೆ ತಮ್ಮ ಸಂವೇದನೆಗಳನ್ನು ದುಡಿಸಿಕೊಳ್ಳತೊಡಗಿದರೂ ಅವು ಪಠ್ಯದ ವಿಷಯಕ್ಕೆ ಸೀಮಿತಗೊಳ್ಳುತ್ತಿವೆ. ನೈಜ ಜೀವನದ ವಾಸ್ತವಿಕತೆಗೆ ತೀರ ದೂರ ಸರಿದಂತಾಗುತ್ತಿವೆ. ಸುಳ್ಳು-ವಂಚನೆಗಳಿಂದ ಪ್ರಜಾಮತವನ್ನು ಕಸಿದುಕೊಳ್ಳುವ ಹುನ್ನಾರಕ್ಕೆ ಅನೇಕ ರೀತಿಯ ಉಪಾಯಗಳನ್ನು ಹೂಡುವ ಕೆಲಸ ಇಂದಿಗೂ ಮುಂದುವರೆದಿದೆ. ಆದರೆ ಪ್ರಜೆ ಕೂಡ ತನ್ನ ಮತ ಮೌಲ್ಯದ ಬೆಲೆಯನ್ನು ತಿಳಿದುಕೊಳ್ಳುವುದು ಅತ್ಯಂತ ಅಗತ್ಯವಾಗಿದೆ. ದುಷ್ಟಶಕ್ತಿಯನ್ನು ಎದುರಿಸುವ ದಿಟ್ಟತನ ಸಾಮಾನ್ಯ ಪ್ರಜೆಗಳಿಗೆ ಎಂತು ಸಾಧ್ಯವಾದೀತು ?

ಇತ್ತೀಚಿನ ದಿನಗಳಲ್ಲಂತೂ ಪ್ರಜಾಜೀವನ ಹತಾಶೆಗೊಳ್ಳುತ್ತಿದೆ. ಅರಾಜಕತೆಯಿಂದ ದೌರ್ಜನ್ಯದ ಮಿತಿ ಜನಜೀವನವನ್ನು ಘಾಸಿಗೊಳಿಸುತ್ತಿದೆ. ಸೂಕ್ಷ್ಮ ಮನಸ್ಸಿನ ಸಂವೇದನಾಶೀಲ ನಾಗರಿಕ ಜೀವನವಂತೂ ತೀರ ಗಂಭೀರವಾದ ದಿನಮಾನಗಳನ್ನು ಅನುಭವಿಸುತ್ತಿದೆ. ಸಾಮಾಜಿಕ ಚಿಂತಕರು ಈ ದೇಶದ ಶ್ರೇಷ್ಠ ದಾರ್ಶನಿಕರ ತತ್ವಗಳನ್ನು ಅನುಸರಿಸಿಕೊಂಡು ಕಾಲಹರಣ ಮಾಡುವಂತಾಗಿದೆ. ಅಂಥವರ ತತ್ವ - ಜೀವನ ಮೌಲ್ಯಗಳಿಗೆ ಮೊರೆಹೋಗಿ ಹೊಸ ಹೊಸ ದಿಗಂತಗಳನ್ನು ತೋರಿಸುವ ಸೃಜನಾತ್ಮಕ ಕೆಲಸ ಒಂದು ಕಡೆ ನಡೆದರೆ, ಮತ್ತೊಂದು ಕಡೆಯಲ್ಲಿ ಎಲ್ಲವನ್ನೂ ಗಾಳಿಗೆ ತೂರಿಕೊಂಡು ಬದುಕಲಾಗುತ್ತಿದೆ. ಆದರೂ ಅಪಮೌಲ್ಯ ಜೀವನವನ್ನು ಪರಿವರ್ತಿಸಲು, ಹೊಸ ಪೀಳಿಗೆಯ ಮೇಲೆ ಸತ್ಪ್ರಭಾವ ಬೀರುವ ಸಾರ್ಥಕ್ಯದ ಕೆಲಸವನ್ನು ಮಾಡುವವರು ಆಶಾಭಾವನೆಗಳೊಂದಿಗೆ

ಬದುಕಿದಾಗಲೇ ಭವಿಷ್ಯದಲ್ಲಿ ಭರವಸೆ ಹುಟ್ಟಲು ಸಾಧ್ಯವಿದೆ. ಸರ್ಕಾರ ಮತ್ತು ಕಾನೂನುಗಳನ್ನು ಬೆಸೆದು ಬದುಕುವ ಸಿಬ್ಬಂದಿ ವರ್ಗದಲ್ಲಿ ಕರ್ತವ್ಯನಿಷ್ಠೆಯ ಬಗ್ಗೆ ಎಚ್ಚರಿಕೆ ಹುಟ್ಟಲು ಸಂವಿಧಾನಾತ್ಮಕವಾಗಿ ಆಲೋಚನೆ ಮಾಡುವುದು ಇಂದು ತುಂಬ ಅಗತ್ಯವಾಗಿದೆ. ಕಾನೂನಿನ ನಿರ್ಭಯತೆಯನ್ನು ದುರುಪಯೋಗಪಡಿಸಿಕೊಳ್ಳುವ ಕೆಟ್ಟ ಪ್ರವೃತ್ತಿ ಬೆಳೆಯುತ್ತಿದೆ. ಸಾರ್ವಜನಿಕರು ಯಾವುದೇ ಇಲಾಖೆಯ ಕಚೇರಿಗಳಲ್ಲಿ ಕಾಲಿಟ್ಟು ತಮ್ಮ ಕೆಲಸಗಳನ್ನು ಸುಲಲಿತವಾಗಿ ಮಾಡಿಕೊಂಡು ಬರುವ ಸಂತೋಷ ಇಡೀ ದೇಶದಲ್ಲಿ ಎಲ್ಲಿಯೂ ಸಿಗುತ್ತಿಲ್ಲ. ಯಾವುದೇ ಟೇಬಲ್ಲಿಗೆ ಹೋಗಿ ತಮ್ಮ ಕೆಲಸದ ಕುರಿತು ಕೇಳತೊಡಗಿದರೆ ಇದು ನನ್ನದಲ್ಲ ಎನ್ನುತ್ತಾರೆ. ಯಾರದೆನ್ನುವ ಸಲಹೆಯನ್ನೂ ಮನುಷ್ಯ ಪಡೆಯಲು ಸಾಧ್ಯವಿಲ್ಲ. ಪ್ರಯಾಸಪಟ್ಟು ನನ್ನದೆನ್ನುವವನ ಮುಂದೆ ನಿಂತಾಗ ನಿರಾಶೆಯ ಉತ್ತರ. ಆಶಾವಾದಿಯಾಗಿ ತನ್ನ ಕೆಲಸ ಮಾಡಿಕೊಳ್ಳಲು ಅವನನ್ನು ಸಂತೈಸದಿದ್ದರೆ ತಾನೇ ಕುಪಿತನಾಗುವ ಪಾಳಿ ಬರುತ್ತದೆ. ಈ ಕುಪಿತತನದ ಪರಿಣಾಮದಿಂದ ಇದು ನನಗೇನಲ್ಲವಲ್ಲ ಅದೇನು ಮಾಡಿಕೊಳ್ಳುತ್ತಾನೆ ಮಾಡಿಕೊಳ್ಳಲಿ ಬಿಡಿ ಅಂದುಕೊಂಡು ನಿರ್ಲಕ್ಷ್ಯ ಮಾಡುತ್ತಾನೆ. ತನ್ನನ್ನು ಚೆನ್ನಾಗಿ ನೋಡಿಕೊಂಡರೆ ಮಾತ್ರ ಸುಸೂತ್ರವಾಗಿ ಕೆಲಸ ಮಾಡಿಕೊಂಡು ಹೋಗುವುದು ಎನ್ನುವ ಪ್ರವೃತ್ತಿ ಬೆಳೆದುಬಿಟ್ಟಿದೆ. ಇದು ಕೇವಲ ಕೆಳಮಟ್ಟಕ್ಕೆ ಮಾತ್ರ ಸೀಮಿತವಾದುದಲ್ಲ. ಮೇಲ್ಮಟ್ಟದಲ್ಲಿಯೂ ಇದೇ ನಡೆಯುತ್ತಿದೆ. ವಿರೋಧ ಪಕ್ಷದ ಒಬ್ಬ ವ್ಯಕ್ತಿ ಆಡಳಿತ ಪಕ್ಷದವನನ್ನು ತರಾಟೆಗೆ ತೆಗೆದುಕೊಂಡಾಗ ಇದು ನನಗಲ್ಲ ಎಂದು ಪಕ್ಷದ ಮೇಲೆ ಹಾಕುತ್ತಾನೆ. ಆಡಳಿತ ಪಕ್ಷದ ಒಬ್ಬ ವ್ಯಕ್ತಿ, ವಿರೋಧ ಪಕ್ಷದ ವ್ಯಕ್ತಿಯ ಕುರಿತು ಮಾತನಾಡಿದಾಗ ಮಾತನಾಡಿಕೊಳ್ಳಲಿ ಬಿಡಿ ಅದು ತನಗಲ್ಲ, ಅದು ಪಕ್ಷಕ್ಕೆ ಸೇರಿದ ಸಂಗತಿ ಎನ್ನುತ್ತಾನೆ. ತಮ್ಮ ತಮ್ಮ ವೈಯಕ್ತಿಕ ದೋಷಾರೋಪಣೆಗಳನ್ನು ಪಕ್ಷದ ಮೇಲೆ ಹಾಕಿ ನುಣುಚಿಕೊಳ್ಳುವ ಪ್ರವೃತ್ತಿ ಇಡೀ ದೇಶದಲ್ಲಿ ಇಂದು ಹೆಚ್ಚುತ್ತಿದೆ. ಇದರಿಂದ ಅಧಿಕಾರಾವಧಿಯ ಕಾಲ ಮಾತ್ರ ವ್ಯರ್ಥವಲ್ಲ; ಜೀವಮಾನದ ಅಮೂಲ್ಯ ಸಮಯ ವ್ಯರ್ಥವಾಗುತ್ತದೆ. ಇನ್ನು ಈ ದೇಶದ ನ್ಯಾಯಾಲಯಗಳಿಗೆ ಕಾಲಿಟ್ಟವರ ಪರಿಸ್ಥಿತಿಯಂತೂ ಹೇಳತೀರದು. ಅಲ್ಲಿ ಕಾಲದ ಮೌಲ್ಯವನ್ನು ಅರ್ಥಮಾಡುವ ವ್ಯವಧಾನವಂತೂ ಕನಸಿನ ಮಾತು. ಜೀವಮಾನದ ಅಮೂಲ್ಯವಾದ ಸಮಯವನ್ನು ವ್ಯರ್ಥ ಕಳೆದುಕೊಳ್ಳುವುದೇ ಬದುಕು ಎನ್ನುವ ಸ್ಥಿತಿ ಬಂದುಬಿಟ್ಟಿದೆ. ಹೀಗಾಗಿ ಕಾನೂನುಗಳು ಹೊಟ್ಟೆಹೊರೆಯುವ ಯಂತ್ರದಂತೆ ಬಳಕೆಯಾಗುತ್ತಿವೆ. ನ್ಯಾಯ, ನೀತಿ, ಧರ್ಮದ ರಕ್ಷಣೆಗಾಗಿ ನ್ಯಾಯಾಲಯದ ಕಟ್ಟೆ ಏರುವ ನಿಜವಾದ ಅರ್ಥ ಕಚೇರಿಯವರ ಕುತ್ಸಿತತನ ಮತ್ತು ಕುಚೋದ್ಯತನಗಳಿಗೆ ಹೆಚ್ಚು ಅನುಕೂಲವಾಗಿರುತ್ತದೆ. ಕಾನೂನುಗಳು ಪ್ರಜಾರಕ್ಷಣೆಯ ಪರವಾಗಿವೆ ಎಂಬುದು ಸ್ಪಷ್ಟವಿದ್ದರೂ ಹೃದಯ ಅಂತರಂಗಗಳ ಜಿಜ್ಞಾಸೆಯಲ್ಲಿ ಒಂದಿಷ್ಟು ಕಣ್ತೆರೆಯಬೇಕಾಗಿದೆ.

ಇನ್ನು ಮಾಧ್ಯಮಗಳಂತೂ ತಮ್ಮ ವೃತ್ತಿಗೌರವಗಳಿಂದ ಬಹು ದೂರ ಸರಿದಿವೆ. ಮತ್ತೊಂದು ನಿಟ್ಟಿನಲ್ಲಿ ಅಪ್ರಾಮಾಣಿಕರ ಪ್ರಾಮಾಣಿಕ ನೀತಿ ಮತ್ತು ಭ್ರಷ್ಟ ಪತ್ರಕರ್ತರ ಮೌಲಿಕ ವೃತ್ತಿನಿಷ್ಠೆ ಜನಜೀವನವನ್ನು ದಿಗ್ಭ್ರಮೆಗೊಳಿಸುತ್ತಿದೆ. ಬಂಡವಾಳಶಾಹಿಗಳು ಮತ್ತು ಅಧಿಕಾರಿಗಳು ಪ್ರಜಾಪ್ರಭುತ್ವ ಸರ್ಕಾರವನ್ನು ಆಳುತ್ತಿರುವುದು ಪ್ರಜಾಕೋಟಿಗೆ ಅರ್ಥವಾಗಬೇಕಾದರೆ ಪ್ರಜಾಪ್ರತಿನಿಧಿಗಳಿಗೆ ಈ ನಾಡಿನ, ಈ ದೇಶದ ಅಭಿವೃದ್ಧಿಗಿಂತಲೂ ತಮ್ಮ ತಮ್ಮ ಸ್ವಂತದ ಮನೆ ತುಂಬಿಕೊಳ್ಳುವ ರೋಗ, ಮಹಾರೋಗವಾಗುತ್ತಿದೆ. ಜನತೆಯ, ಈ ನೆಲದ ಅಸ್ತಿತ್ವದ ಮಹತ್ವವನ್ನು, ಸ್ವಾಯತ್ತತೆಯನ್ನು ಬಂಡವಾಳಶಾಹಿಗಳಿಗೆ ಮಾರಿಕೊಳ್ಳುತ್ತಿರುವುದು ಗಾಳಿಬಿಟ್ಟಾಗ ತೂರಿಕೊಳ್ಳುವ ಕೆಲಸವಾಗಿದೆ. ದುಡಿಯುವುದನ್ನು ಕಲಿಸುವ ಸರ್ಕಾರವನ್ನು ನಿರೀಕ್ಷಿಸುವುದು ಚಿಂತಕರ ಜಿಜ್ಞಾಸುಗಳ ಕನಸಾಗಿಯೇ ಉಳಿಯುತ್ತದೆ.

ಪ್ರಚಲಿತ ಸಂದರ್ಭದಲ್ಲಿ ಕರ್ನಾಟಕ ಉಳಿದ ರಾಜ್ಯಗಳಿಗಿಂತ ಭಿನ್ನ ಧೋರಣೆಗೆ ಅಣಿಯಾಗುತ್ತಿರುವುದನ್ನು ಗಮನಿಸಬಹುದಾಗಿದೆ ಎನ್ನುವುದಕ್ಕೆ ಇದೇ ಇಸ್ವಿ ೨೦೦೭ರಲ್ಲಿ ಜುಲೈ-ಆಗಸ್ಟ್ ತಿಂಗಳಲ್ಲಿ ಕರ್ನಾಟಕದ ಶಾಸಕರು ಚೀನಾ ದೇಶದ ಪ್ರವಾಸ ಕೈಕೊಂಡರು. ಅಲ್ಲಿಯ ಕೃಷಿ, ಜೀವನದ ರೀತಿ ಮತ್ತು ನೀತಿಯ ಆಧುನಿಕತೆಯನ್ನು ಕಂಡುಬರುವ ದೃಷ್ಟಿ ಸರ್ಕಾರದ್ದಾಗಿದೆ. ಇದರಲ್ಲಿ ಸದುದ್ದೇಶವನ್ನು ನಾವು ಕಾಣಬೇಕಾಗುತ್ತದೆ. ಅವರು ಅಲ್ಲಿಂದ ಬಂದಾದಮೇಲೆ ಪತ್ರಿಕೆಗಳು ಒಂದು ಸಂಗತಿಯನ್ನು ಪ್ರಕಟಿಸಿದವು. ಅಲ್ಲಿಯ 'ದುಡಿಮೆಯೇ ದೇವರು' ಎನ್ನುವ ಜೀವನಮೌಲ್ಯ ಮೆಚ್ಚುವಂಥದ್ದು. ಅಲ್ಲಿಯ ಜೀವನ ರೀತಿಯನ್ನು ಕಂಡುಬರುವ ಶಾಸಕರು ದುಡಿದು ತಿನ್ನುವ ಪ್ರವೃತ್ತಿಯನ್ನು ಮೈಗೂಡಿಸಿಕೊಂಡಿರುವುದನ್ನು ಪತ್ರಿಕೆಗಳ ಮೂಲಕ ಜನರಿಗೆ ತಿಳಿಸಿದರು. ಇದು ನಮ್ಮ ದೇಶಕ್ಕೂ ಅನುಕರಣೀಯವೆಂದುಕೊಳ್ಳಬೇಕು. ಭಾರತಕ್ಕೂ ಇದು ನಿಜವಾಗಿ ಬೇಕಾದದ್ದೇ ಆಗಿದೆ. ಜನ ಕೂಡ ಆ ರೀತಿಯನ್ನು ಮತ್ತು ಈ ಮಾತನ್ನು ಮೆಚ್ಚುತ್ತಾರೆ. ಕರ್ನಾಟಕ ಸರ್ಕಾರ ಇದನ್ನು ಮೆಚ್ಚಲೇಬೇಕು. ಆ ದೇಶದಲ್ಲಿ ಕರ್ತವ್ಯ ನಿಷ್ಠೆ ಸರ್ಕಾರ ಆಡಳಿತದ ಸೂತ್ರ ಹಿಡಿದುಕೊಂಡಿದೆ. ಭಾರತದಲ್ಲಿ ಪ್ರಜಾಪ್ರಭುತ್ವ ಸರ್ಕಾರದ ಆಡಳಿತವಿದೆ. ಅಲ್ಲಿ ಅದೇ ಸರ್ಕಾರ ಇದ್ದರೆ ಇರಲಿ; ಇಲ್ಲಿ ಇದೇ ಸರ್ಕಾರ ಇರಲಿ. ಅಲ್ಲಿಯ ಹಾಗೆ ಇಲ್ಲಿಯೂ ದುಡಿಯುವುದನ್ನು ಕಲಿಸುವ ಸರ್ಕಾರ ಬರಲಿ ಎಂಬುದು ತುಂಬ ಮಹತ್ವದ ಮಾತಾಗುತ್ತದೆ. ಕಮ್ಯುನಿಸ್ಟ್ ಸಿದ್ಧಾಂತಗಳಿಗೂ ಪ್ರಜಾಪ್ರಭುತ್ವದ ಸಿದ್ಧಾಂತಗಳಿಗೂ ವ್ಯತ್ಯಾಸವೇನಿಲ್ಲ. ಆದರೆ ಕಮ್ಯುನಿಸ್ಟ್ ಪಕ್ಷ ದಕ್ಷ ಆಡಳಿತದ, ಬುದ್ಧಿಜೀವಿಗಳ ಪಕ್ಷ. ಪ್ರಜಾಪ್ರಭುತ್ವವಾದಿ ಸರ್ಕಾರದಲ್ಲಿಯೂ ಬುದ್ಧಿಜೀವಿಗಳ ಸೇರ್ಪಡೆಯಾದರೆ ರಾಷ್ಟ್ರನಿಷ್ಠೆ ಅಲ್ಲಿಯ ಮುತ್ಸದ್ದಿಗಳ ಹಾಗೆ ಇಲ್ಲಿಯೂ ಬಂದೀತು. ಸರ್ಕಾರವನ್ನೇ ಆಧರಿಸಿ ಯಾಕೆ ಬದುಕಬೇಕು ? ಬೇಡಿಕೆಯನ್ನು ಅಪೇಕ್ಷಿಸುವ ಕೈಗಳಲ್ಲಿ ಕೊಡುವ ಔದಾರ್ಯದ ಶಕ್ತಿ ಎಂತು ಬಂದೀತು ? ಕೊಡುಗೈ ಔದಾರ್ಯದ ಶಕ್ತಿಯಿರುವುದು ಉತ್ಪಾದಕನಲ್ಲಿ ಮಾತ್ರ. ದುಡಿದು ತಿಂದು ಬದುಕಬೇಕು ಎನ್ನುವ ಸ್ಪಷ್ಟವಾದವನ್ನು ಪ್ರಕಟಿಸಿ ದುಡಿಯಲು ಹಚ್ಚಬೇಕು. ಮನ್ನಾ ಮಾಡುವ ದುಷ್ಟ ಚಾಳಿಯನ್ನು, ಉಚಿತವಾಗಿ ನೀಡುವ ಮೂಲಕ ಆಲಸ್ಯತನವನ್ನು ಹೆಚ್ಚಿಸುವ ಕೆಟ್ಟತನವನ್ನು, ಅಸಹಾಯಕತೆಯ ಅನುಕಂಪವನ್ನು ಪ್ರಜೆಗಳಲ್ಲಿ ಹುಟ್ಟಿಸಲೇಬಾರದು. ಪ್ರತಿಭೆ-ಪುರಸ್ಕಾರಗಳಿಗೆ ಮಾತ್ರ ಸರಕಾರದ ಉಳಿತಾಯವನ್ನು ನೀಡುವ ವಿಶಾಲತನ ಬೆಳೆಯಬೇಕಷ್ಟೆ. ಬಸವಣ್ಣನವರಂಥ ಶರಣರು ದುಡಿದು ತಿನ್ನುವ ದಿವ್ಯಪಥವನ್ನು ಹಾಕಿಕೊಟ್ಟಿದ್ದಾರೆ. ಚೀನಾದ ಮಾವೊ ತ್ಸೆ ತುಂಗನಂಥವರು ಕೂಡ ಈ ಮಾರ್ಗ ಅನುಸರಿಸಿ ಜಗತ್ ಖ್ಯಾತಿ ಪಡೆದಿದ್ದಾರೆ. ಕಾಯಕವೇ ಕೈಲಾಸ ಎನ್ನುವ ಶರಣ ತತ್ವವನ್ನು ಚುನಾವಣೆಯ ಪ್ರಣಾಳಿಕೆಯಲ್ಲಿ ಹಾಕಿಕೊಂಡ ದಕ್ಷ ಆಡಳಿತ ಯಾವುದಾದರೂ ಹುಟ್ಟಿದರೆ, ಇಲ್ಲವೇ ಈ ತತ್ವವನ್ನು ಪ್ರಣಾಳಿಕೆಯಲ್ಲಿ ಸೇರಿಸಿಕೊಂಡರೆ, ಅಂಥ ಪಕ್ಷ ಆಡಳಿತದ ಚುಕ್ಕಾಣಿ ಹಿಡಿದರೆ ಈ ದೇಶಕ್ಕೆ ಖಂಡಿತ ಭವಿಷ್ಯವಿದೆ. ಬಂಡವಾಳಶಾಹಿಗಳ ಕಪಿಮುಷ್ಟಿಯಲ್ಲಿರುವ ಇಂದಿನ ಪ್ರಜಾಪ್ರಭುತ್ವವು ಸಮಾನತೆಯ ಆಧಾರದ ಮೇಲೆ ನಿಜವಾದ ಪ್ರಜಾಪ್ರಭುತ್ವ ಜೀವನವನ್ನು ಸಾರ್ಥಕಪಡಿಸಿಕೊಳ್ಳಬೇಕಾಗಿದೆ. ಒಂದು ದೇಶದ ರಾಷ್ಟ್ರನಿಷ್ಠ ರಾಜಕಾರಣಿಗಳು ಮುತ್ಸದ್ದಿತನ ಮತ್ತು ಬುದ್ಧಿವಂತಿಕೆಯಿಂದ ಎಲ್ಲವನ್ನೂ ಸಾಧಿಸಲು ಸಾಧ್ಯವಿದೆ.

ನಮ್ಮ ವಿಧಾನಸೌಧದ ಮೇಲೆ ಈಗ ಬರೆದಿರುವ ''ಸರಕಾರದ ಕೆಲಸ ದೇವರ ಕೆಲಸ'' ಎಂಬ ನಾಮಧೇಯದ ಮುಂದೆ ''ಕಾಯಕವೇ ಕೈಲಾಸ'', ''ದುಡಿಮೆಯೇ ದೇವರು'' ಎಂದು ಬರೆಯಿಸಿ ಆಡಳಿತವನ್ನು ಕೈಗೆತ್ತಿಕೊಂಡರೆ ಒಳಿತಾದೀತು.

ಈ ದೇಶದ ಚಲಾವಣೆಯ ನಾಣ್ಯದ ಮೇಲೆ, ನೋಟುಗಳ ಮೇಲೆ ಅಂಚೆ ಚೀಟಿಗಳ ಮೇಲೆ ಮಹಾತ್ಮರ, ಹುತಾತ್ಮರ ಭಾವಚಿತ್ರಗಳನ್ನು ಪ್ರಕಟಿಸಿದ್ದೇವೆ. ಈ ದೇಶದ ಪ್ರಮುಖ ವೃತ್ತಗಳಲ್ಲಿ, ವಿಧಾನಸೌಧ, ಸಂಸತ್ ಭವನಗಳ ಮುಂದೆ ಅಂಥವರ ಸ್ಮಾರಕಗಳನ್ನು ನಿರ್ಮಿಸಿಕೊಂಡಿದ್ದೇವೆ. ಆದರೆ ನಾವು ಯಾರಾದರೂ ಒಂದು ದಿನವಾದರೂ ಒಂದು ನಾಣ್ಯವನ್ನು ಒಂದು ಚಲಾವಣೆಯ ನೋಟನ್ನು ಕಣ್‌ದೃಷ್ಟಿಯಲ್ಲಿಟ್ಟುಕೊಂಡು ಆ ಮಹಾತ್ಮರ ತತ್ವ-ವ್ಯಕ್ತಿತ್ವಗಳ ಪಾಲನೆಯ ಕುರಿತು ಯೋಚಿಸಿದ್ದೇವೆಯೆ ? ಇದು ಆತ್ಮಾವಲೋಕನದ ಪ್ರಶ್ನೆ. ನಕಲಿ ನಾಣ್ಯಗಳನ್ನು ಸೃಷ್ಟಿಸುತ್ತಾರೆ. ಇದು ಚಲಾವಣೆಯ ಮಾನ್ಯತೆಯ ನಾಣ್ಯಗಳನ್ನು ಕೆಡಿಸಿ ಮತ್ತೊಂದನ್ನು ತಯಾರಿಸಲು ಬಳಸುತ್ತೇವೆ. ಚಲಾವಣೆಯ ನೋಟುಗಳ ಮಾದರಿಯನ್ನು ನಕಲಿ ನೋಟುಗಳಿಗೆ ಬಳಸಿಕೊಂಡು ದೇಶದ್ರೋಹದ ಕೆಲಸಗಳನ್ನು ಮಾಡುವ ನಾವು ನಿಜವಾಗಿ ಭಾರತೀಯರೇ ! ಅಥವಾ ಈ ದೇಶದ ತತ್ವ ಚಿಂತನೆಗಳ ಬಾಧ್ಯಸ್ಥರೇ ? ನಮಗೆ ನಾವೇ ಪ್ರಶ್ನೆ ಹಾಕಿಕೊಳ್ಳೋಣ.

ನಾಣ್ಯ, ನೋಟು, ಸ್ಮರಣೆ, ಅಂಚೆ ಚೀಟಿ ಮುಂತಾದವುಗಳ ಮೇಲೆ ನಮ್ಮ ಕಣ್ಣು ಕುಕ್ಕುವ ವ್ಯಕ್ತಿಗಳ ಜೀವನ ಆದರ್ಶಗಳು ನಮ್ಮ ಜೀವನದ ಆದರ್ಶಗಳಾಗಬೇಕು. ಪೀಳಿಗೆಯಿಂದ ಪೀಳಿಗೆಗೆ ಅವು ಮುಂದುವರಿಯಬೇಕು – ಸದಾ ಪ್ರಚಲಿತವಾಗಿರಬೇಕು, ಪ್ರಸ್ತುತವಾಗಿರಬೇಕು ಎನ್ನುವ ಸಾಂಸ್ಕೃತಿಕ ಮೌಲ್ಯಗಳು ನಮ್ಮಿಂದ ಮಾಯವಾಗುತ್ತಿವೆ. ಇಂಥ ಮನಃಸ್ಥಿತಿಗಾಗಿಯೇ ಕಲೆ, ಸಾಹಿತ್ಯ, ಸಂಗೀತದಂಥ ಅಮೂಲ್ಯ ಪಥಗಳು ನಿರಂತರಗೊಳ್ಳಬೇಕು. ಈ ನಾಣ್ಯ, ನೋಟು, ಅಂಚೆ ಚೀಟಿಗಳು ನಮ್ಮ ಜೀವನದ ಬೆಳಕುಗಳಾಗಬೇಕೆಂಬುದೇ ಇವುಗಳ ಚಲಾವಣೆಯ ಅರ್ಥ.

'ಭಾರತದ ಆಡಳಿತಕ್ಕೆ ಹಣದ ಅಭಾವವಿಲ್ಲ. ಸಾರ್ವಜನಿಕ ಲೆಕ್ಕಾಚಾರ ಸಮಿತಿಗಳ ವರದಿಗಳನ್ನು ಪರಿಶೀಲಿಸಿದರೆ ಅನುಮೋದಿಸಿದ ಹಣದಲ್ಲಿ ಬಹುಪಾಲು ವೆಚ್ಚಮಾಡದೇ ಹಣ ಉಳಿಯುವ ಅನೇಕ ಸಂದರ್ಭಗಳು ಕಂಡುಬರುತ್ತವೆ. ಇದರಿಂದ ಆಡಳಿತದ ಗುರಿ ಸಾಧನೆ ಅಪೂರ್ಣವಾಗುತ್ತದೆ. ಆದರೆ ಬರಿಯ ಹಣ ವೆಚ್ಚವೊಂದೇ ಏಳ್ಗೆಯ ಮಾನದಂಡವಲ್ಲ. ಆಡಳಿತದಲ್ಲಿ ರಾಜಕಾರಣಿಗಳ ಅನಾವಶ್ಯಕ ಪ್ರವೇಶ, ರಾಜಕಾರಣ ಮತ್ತು ಆಡಳಿತ ಎರಡರಲ್ಲೂ ತುಂಬಿ ತುಳುಕುವ ಲಂಚ, ಭ್ರಷ್ಟಾಚಾರ, ಪಕ್ಷಪಾತ, ನಿಧಾನ ಪ್ರವೃತ್ತಿ – ಇವು ಆಡಳಿತದ ದಕ್ಷತೆಗೆ, ವೈಚಾರಿಕ ನಡವಳಿಕೆಗೆ, ನಿಷ್ಪಕ್ಷಪಾತತೆಗೆ ಮಾರಕವಾಗಿವೆ' (ಕ.ವಿ.ಕೋ. ಸಂ.೧೨., ಭಾ. ಆಡಳಿತ).

ಹೀಗೆ ನಮ್ಮ ದೇಶ, ನಾಡುಗಳ ಮೇಲೆ ಸುಸಂಸ್ಕೃತರು ತಾಯಿ-ತಂದೆಯರ ಮೇಲೆ ಇಡುವಷ್ಟು ಭಕ್ತಿ-ಭಾವಗಳನ್ನಿಡಬೇಕು. ಅಂದಾಗ ಮಾತ್ರ ನಾಡು-ದೇಶ ಪ್ರಗತಿಯತ್ತ ಸಾಗಲು ಸಾಧ್ಯ.

ಅರ್ಜುನ ತಾ. ಕೋರಟಕರ
'ಭಾವಜ್ಞ', ಶ್ರೀ ರಾಘವೇಂದ್ರ ಬೋರ್ಡಿಂಗ್, ಜಮಖಂಡಿ - ೫೮೭ ೩೦೧



# ನಂಜಿನ ನೀರು

ಡಾ|| ಕರವೀರಪ್ರಭು ಕ್ಯಾಲಕೊಂಡ

ನೀರಿನಿಂದ ಹರಡುವ ಸಾಂಕ್ರಾಮಿಕ ರೋಗಗಳಿಗೆ ಕುಡಿಯುವ ನೀರು ಮತ್ತು ಆಹಾರವೇ ಮೂಲ. ಸೂಕ್ಷ್ಮಾಣು ಮತ್ತು ಅತೀ ಸೂಕ್ಷ್ಮಾಣು ಜೀವಿಗಳಿಂದ ಉಂಟಾಗುವ ರೋಗಗಳು ಮಾರಣಾಂತಿಕ ನೆರೆಯಿಂದ ಕಂಗಾಲಾಗಿ ಕಂಗೆಟ್ಟು ಸಂತ್ರಸ್ತರ ಊರಲ್ಲಿ ಸಾಂಕ್ರಾಮಿಕಗಳಿಗೆ ಸಡಗರ, ಸಂಭ್ರಮ. ಸಿಕ್ಕಸಿಕ್ಕಲ್ಲಿಯ ಪಾನೀಯಗಳನ್ನು ಕುಡಿಯುವುದು ಮತ್ತು ತಿಂಡಿ-ತಿನಿಸುಗಳನ್ನು ತಿನ್ನುವುದರ ಮೂಲಕ ರೋಗಾಣುಗಳು ಮನುಷ್ಯನ ದೇಹವನ್ನು ಪ್ರವೇಶಿಸುವವು. ದೇಹದೊಳಗೆ ಸೇರಿಕೊಂಡ ರೋಗಾಣುಗಳು ಕರುಳಿನ ಮೂಲಕ ರಕ್ತಸೇರಿ ಸಂಖ್ಯಾಭಿವೃದ್ಧಿ ಮಾಡಿಕೊಳ್ಳುತ್ತವೆ. ವಿಷಪದಾರ್ಥಗಳನ್ನು ರಕ್ತಕ್ಕೆ ಬಿಡುಗಡೆ ಮಾಡುತ್ತವೆ. ಜಲ ಜನ್ಯ ಕಾಯಿಲೆಗಳು ಹತ್ತು ಹಲವಾರು. ನೀರು ಕಲುಷಿತಗೊಳ್ಳಲು ಹಲವಾರು ಕಾರಣಗಳುಂಟು: ಮಳೆ ಬಂದಾಗ ಹರಿದುಬರುವ ನೀರಿನಲ್ಲಿ ಹೊಲಸು ಪದಾರ್ಥಗಳು ಸೇರಿ ಕಲುಷಿತವಾಗಬಹುದು. ಕಲುಷಿತ ನೀರು ಮತ್ತು ಆಹಾರಗಳಲ್ಲಿ ರುಚಿಯನ್ನಾಗಲಿ, ಬಣ್ಣವನ್ನಾಗಲಿ, ಗುರುತಿಸಲು ಸಾಧ್ಯವಿಲ್ಲ. ನೀರಿಲ್ಲದೆ ಜೀವವಿಲ್ಲ, ಅಂತೆಯೇ ಸೂಕ್ಷ್ಮಾಣು ಜೀವಿಯೂ ಸಹ ನೀರನ್ನೇ ಅವಲಂಬಿಸುವುದು ಸಹಜವಾಗಿದೆ.

ಕಲುಷಿತ ನೀರಿನಿಂದ ಬರಬಹುದಾದ ರೋಗಗಳಲ್ಲಿ ಅತಿಸಾರಕ್ಕೆ ಅಗ್ರಸ್ಥಾನ. ಯಾವುದೇ ವ್ಯಕ್ತಿ ಅತಿಸಾರದಿಂದ ಬಳಲುತ್ತಿದ್ದರೆ ಅವನಲ್ಲಿ ಸ್ವಚ್ಛತೆಯ ಅಭಾವದಿಂದ ಇತರರು ತಿನ್ನುವ ಆಹಾರ ಪದಾರ್ಥ, ಕುಡಿಯುವ ನೀರು ಕಲುಷಿತಗೊಳ್ಳುವುದು ಸಾಮಾನ್ಯ. ರೋಗ ಪ್ರಸಾರಕ್ಕೆ ಇದೂ ಒಂದು ಮೂಲ ಕಾರಣ. ರಸ್ತೆ ಬದಿಯಲ್ಲಿ ಮಾರಾಟಕ್ಕಿಟ್ಟ ತಿನಿಸು, ಹೋಟೆಲ್ ತಿಂಡಿಗಳು ಕಲುಷಿತವಾಗಿ ನೊಣಗಳ ಮೂಲಕ ರೋಗ ಹರಡಬಹುದು. ಕೊಳೆತ ಮಾವಿನ ಹಣ್ಣು, ಪೇರಲ ಹಣ್ಣು, ಕಲ್ಲಂಗಡಿ, ಬಾಳೆಹಣ್ಣುಗಳು ರೋಗಾಣುಗಳ ಆಗರವಾಗಬಹುದು.

ಅತಿಸಾರವಾದಾಗಲೆಲ್ಲ ಔಷಧಿಯ ಅವಶ್ಯಕತೆಯಿಲ್ಲ. ಅತಿಸಾರ ಅಪ್ಪಿಕೊಂಡಾಗ ನೀರು ಮತ್ತಿತರ ಆಹಾರ ಪದಾರ್ಥಗಳನ್ನು ಕೊಡದೆ ಇರುವ ಪದ್ಧತಿ ನಮ್ಮ ಜನರಲ್ಲಿ ಮನೆಮಾಡಿಕೊಂಡಿದೆ. ಇದನ್ನು ಶಿಕ್ಷಣ ನೀಡುವ ಮೂಲಕ ಹೋಗಲಾಡಿಸಬೇಕು. ಎಲ್ಲರ ಮನೆಯಲ್ಲೂ ಸಾಮಾನ್ಯವಾಗಿ ಸಿಗುವ ಸಾಮಗ್ರಿಗಳನ್ನು ಬಳಸಿಕೊಂಡು ಜೀವಜಲವನ್ನು ತಯಾರಿಸಬಹುದು. ಒಂದು ಲೀಟರ್ ನೀರನ್ನು ಕುದಿಸಿ ಆರಿಸಿ ಸೋಸಿ ಹಿಡಿ ಸಕ್ಕರೆ ಸೇರಿಸಿ, ಒಂದು ಚಿಟಕಿ ಉಪ್ಪು ಬೆರೆಸಿ, ಕರಗಿಸಬೇಕು. ಇದ್ದರೆ ಅರ್ಧ ಲಿಂಬೆ ಹಣ್ಣಿನ ರಸವನ್ನು ಹಿಂಡಬೇಕು. ಇದನ್ನು ಮೇಲಿಂದ ಮೇಲೆ ಅತಿಸಾರ ಆದವರಿಗೆ ಕೊಡುತ್ತ ಹೋಗಬೇಕು. 'ಜೀವಜಲ' ಕೊಡುವುದರಿಂದ ಜೀವ ಉಳಿಸಬಹುದಾಗಿದೆ. ಇದನ್ನು ನೀಡದೆ ರೋಗಗಳನ್ನು ನಿಯಂತ್ರಿಸುವ ಔಷಧಿಗಳನ್ನು ಅಥವಾ ಕರುಳು ಹಿಂಡುವುದನ್ನು ತಡೆಗಟ್ಟುವ ಔಷಧಿಗಳನ್ನು ನೀಡುವುದು ಅಪಾಯಕಾರಿ.

ಅತಿಸಾರವನ್ನು ಸಮರ್ಪಕವಾಗಿ ಹತೋಟಿಯಲ್ಲಿಡಲು ಕ್ರಮಗಳಿಲ್ಲದೇನಿಲ್ಲ. ಕುಡಿಯುವ ನೀರನ್ನು ಕುದಿಸಿ, ಸೋಸಿ ಕುಡಿದರೆ ಸಾಕು. ನೀರನ್ನು ಶುಚಿಗೊಳಿಸುವ ಯಂತ್ರಗಳು ಮಾರುಕಟ್ಟೆಯಲ್ಲಿ ಬೇಕಾದಷ್ಟಿವೆ. ನೀರಿನಲ್ಲಿರುವ ಕ್ರಿಮಿಗಳನ್ನು ಕ್ಲೋರಿನ್ ಮಾತ್ರೆಗಳಿಂದ ನಾಶಪಡಿಸಬಹುದು.

ನೆರೆಯಿಂದ ಕಲುಷಿತ ನೀರಿನಲ್ಲಿ ಜಂತಿನ ತತ್ತಿಗಳು ಹರಿದುಬಂದು ಹೊಲದ ಮಣ್ಣಲ್ಲಿ ಬೆರೆಯಬಹುದು. ಬರಿಗಾಲಿನಲ್ಲಿ ಹೊಲದಲ್ಲಿ ಅಡ್ಡಾಡುವ ರೈತಾಪಿ ಜನರ, ಕೂಲಿಗಳ ದೇಹವನ್ನು ಇವು ಸೇರಬಹುದು. ಕಲುಷಿತ ನೀರು ಕುಡಿಯುವುದರಿಂದ ಜಂತಿನ ತತ್ತಿಗಳು ಜನರ ಹೊಟ್ಟೆ ಸೇರಬಹುದು. ಜಂತಿನ ಬಾಧೆ ಅಪ್ಪಿದಾಗ ಹಸಿವು ಇಲ್ಲದಾಗುವುದು.

ಹಾಲನ್ನು ಕಾಯಿಸಿ ಕುಡಿಯುವುದರಿಂದ ಹಾಲಿನಿಂದ ಈ ಕಾಯಿಲೆ ಹೆಚ್ಚಾಗಿ ಹರಡುವುದಿಲ್ಲ. ನೀರನ್ನು ಎಲ್ಲರೂ ಕುದಿಸಿ ಕುಡಿಯುವುದಿಲ್ಲ. ಹರಿಯುವ ನೀರನ್ನು ಹಾಗೆಯೇ ಕುಡಿಯುವುದರಿಂದ, ಅಂತಹ ನೀರಿನಲ್ಲಿ ಅಕಸ್ಮಾತ್ ರೋಗಾಣುಗಳಿದ್ದರೆ, ಸೋಂಕು ತಗಲುತ್ತದೆ. ಈ ರೀತಿ ಹರಡುವ ಸೋಂಕನ್ನು ತೀರ್ಥಕ್ಷೇತ್ರಗಳಲ್ಲಿ, ಜಾತ್ರೆಯಲ್ಲಿ ನೆರೆಹಾವಳಿಗೀಡಾದ ಸಂತ್ರಸ್ತರಲ್ಲಿ ಕಾಣಬಹುದು. ಮಕ್ಕಳು ಐಸ್ಕ್ರೀಮ್ ತಿನ್ನುವುದು ಸಾಮಾನ್ಯ. ಕಲುಷಿತ ನೀರನ್ನು ಐಸ್ಕ್ರೀಮ್ ತಯಾರಿಕೆಯಲ್ಲಿ ಉಪಯೋಗಿಸಿದಾಗಲೂ ಈ ರೋಗ ಬರುತ್ತದೆ. ಕಾಲರಾ ರೋಗದಿಂದ ನರಳುವ ರೋಗಿಗೆ ಬಕೆಟ್‌ಗಟ್ಟಲೆ ಅಕ್ಕಿ ಗಂಜಿಯಂತಹ ಅತಿಸಾರವಾಗಿ ನೀರು ಮತ್ತು ಲವಣಾಂಶಗಳ ಕೊರತೆಯಿಂದ ಅಸು ನೀಗುವುದು ಸಾಮಾನ್ಯ. ಕಾರಣ, ಕಾಯಿಲೆಯಿದೆ ಎಂಬ ಸಂಶಯ ಬಂದ ಕೂಡಲೆ ಆರೋಗ್ಯಾಧಿಕಾರಿಗಳ ಗಮನಕ್ಕೆ ತರುವುದು ಎಲ್ಲ ಸಾರ್ವಜನಿಕರ ಆದ್ಯ ಕರ್ತವ್ಯ.

ರಕ್ತಭೇದಿಯು ಸಿಗೆಲ್ಲಾ ಅಥವಾ ಎಂಟಮಿಬಾ ಹಿಸ್ಟೊಲಿಟಿಕಾ, ಎಂಟರೋ ಇನ್‌ವೆಜಿವ ಇಕೋಲ್ಯಾ ಇತ್ಯಾದಿಗಳಿಂದ ಉಂಟಾಗುತ್ತದೆ. ಇದರಲ್ಲಿ ಅತೀ ಮುಖ್ಯವಾಗಿ ಮಕ್ಕಳಲ್ಲಿ ಕಾಣಿಸುವ ರಕ್ತಭೇದಿ 'ಸಿಗೆಲ್ಲಾ'ದಿಂದ ಹರಡುವುದೇ ಹೆಚ್ಚು. ಈ ರೋಗದಲ್ಲಿ ಭೇದಿ ಆಗುವಾಗ ಹೊಟ್ಟೆನೋವು ಇರುತ್ತದೆ. ಮಲಬದ್ಧತೆ, ಭೇದಿ, ವಾಂತಿ, ತಲೆನೋವು, ಮೈಕೈ ನೋವು, ನಿದ್ರಾಹೀನತೆ, ನಸಿ ನಸಿ ಜ್ವರ, ಬೆವರು, ತಲೆ ಸುತ್ತುವುದು ಇತ್ಯಾದಿ ತೊಂದರೆಗಳು ಕಾಣಿಸಬಹುದು.

ಜಾಗತಿಕ ಆರೋಗ್ಯ ಸಂಸ್ಥೆಯ ಇತ್ತೀಚಿನ ಸಮೀಕ್ಷೆಯ ಪ್ರಕಾರ ಪ್ರತಿವರ್ಷ ಸರಾಸರಿ ೩.೦ ಲಕ್ಷ ಜನರು ಅತಿಸಾರ, ಆಮಶಂಕೆ, ರಕ್ತಭೇದಿಗಳಿಂದ ಅಸು ನೀಗಿದರೆ, ಭಾರತದಲ್ಲಿ ೧೦ ಲಕ್ಷ ಜನರು ಈ ಕಾಯಿಲೆಗಳಿಂದ ಸಾಯುತ್ತಾರೆ. ಜಗತ್ತಿನಲ್ಲಿ ೫ ಲಕ್ಷ ಮಕ್ಕಳು ಅತಿಸಾರಕ್ಕೆ ಬಲಿಯಾಗುತ್ತಾರೆಂದರೆ ಈ ಸಮಸ್ಯೆಯ ಗಂಭೀರತೆಯ ಅರಿವು ಯಾರಿಗಾದರೂ ಆದೀತು. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ತಿಂಗಳಿಗೊಮ್ಮೆಯಾದರೂ ಮಕ್ಕಳನ್ನು ಕಾಡಿಸಿ ಮತ್ತಗೆ ಮಾಡುವ ಅತಿಸಾರವು ಪ್ರತಿಶತ ೨೦ರಿಂದ ೪೦ರಷ್ಟು ಐದು ವರ್ಷದೊಳಗಿನ ಮಕ್ಕಳ ಸಾವಿಗೆ ಕಾರಣವಾಗುತ್ತದೆ.

**ಟೈಫಾಯ್ಡ್**

ಜ್ವರ ಮತ್ತು ಚಳಿಯಿಂದ, ಮೈಕೈ ನೋವು, ತಲೆನೋವು, ಕೆಮ್ಮು, ಹಸಿವೆ ಇಲ್ಲದೆ ದೇಹದ ಉಷ್ಣತೆಗೆ ಅನುಗುಣವಾಗಿ ಹೆಚ್ಚಾಗದೆ ಕಡಿಮೆಯಾಗುವುದು ಟೈಫಾಯ್ಡ್

ರೋಗದ ವಿಶಿಷ್ಟತೆ. ಸಾಲ್ಮೊನೆಲ್ಲಾ ಟೈಫಿ ಎ.ಬಿ. ಮತ್ತು ಸಾಲ್ಮೊನೆಲ್ಲಾ ಪ್ಯಾರಾಟೈಫಿ ಎ.ಬಿ. ಬ್ಯಾಕ್ಟೀರಿಯಾಗಳಿಂದ ಬರುವ ಕಾಯಿಲೆಯಿಂದ ಪ್ರತಿವರ್ಷ ನಮ್ಮ ದೇಶದಲ್ಲೇ ೮೦ ಲಕ್ಷ ಜನ ನರಳುತ್ತಾರೆ. ಕಳೆದ ವರ್ಷ ೧೮,೦೦೦ ಜನರು ನಮ್ಮ ದೇಶದಲ್ಲಿ ಟೈಫಾಯ್ಡ್ ರೋಗದಿಂದಲೇ ಮರಣ ಹೊಂದಿದ್ದಾರೆ.

ಮಾನವ ಕುಲಕ್ಕೆ ಮೂರು ವಿಧವಾದ ಶತ್ರುಗಳಿವೆ – ಯುದ್ಧ, ಬರಗಾಲ ಮತ್ತು ಜ್ವರ. ಈ ಮೂರರಲ್ಲಿ ಜ್ವರವೇ ಅತ್ಯಂತ ಭಯಾನಕವಾದುದು ಎಂದು ಈ ಶತಮಾನದ ಪ್ರತಿಭಾನ್ವಿತ ವೈದ್ಯಕೀಯ ತಜ್ಞರಾಗಿದ್ದ ಸರ್ ವಿಲಿಯಂ ಅಸ್ಲರ್ ವಿಷಮಜ್ವರದಿಂದ ಆಗಬಹುದಾದ ಅನಾಹುತಗಳನ್ನು ವಿವರಿಸುತ್ತ ಹೇಳಿದ್ದಾರೆ. ಜ್ವರ ತನ್ನ ಪರಾಕಾಷ್ಠೆಯನ್ನು ತಲುಪಿದಾಗ ರೋಗಿಯ ಮಾನಸಿಕ ಸ್ಥಿತಿಯಲ್ಲಿ ಮಂಪರು ಕವಿದು ಎಚ್ಚರವಿಲ್ಲದೆ ಬಡಬಡಿಸುವುದರಿಂದ 'ಸನ್ನಿಪಾತ ಜ್ವರ' ಎಂದೂ ಈ ರೋಗವನ್ನು ಗುರುತಿಸುತ್ತಾರೆ. ಮಂಪರು ಕವಿದ ಸ್ಥಿತಿಯ ಕಾರಣದಿಂದಲೇ ಈ ರೋಗವನ್ನು ಇಂಗ್ಲಿಷ್‌ನಲ್ಲಿ ಟೈಫಾಯ್ಡ್ ಎಂದು ಕರೆಯುವುದು.

ಅಸಮರ್ಪಕ ಔಷಧ ಬಳಕೆಯಿಂದ ಟೈಫಾಯ್ಡ್ ರೋಗಾಣು ಈಗಾಗಲೇ ಕ್ಲೋರೋಫಿನಿಕಾಲ್ ಔಷಧಿಗೆ ಪ್ರತಿರೋಧವನ್ನು ತೋರುತ್ತಿದೆ. ತೀರಾ ಇತ್ತೀಚಿನ ಸಂಶೋಧನೆಯಾಗಿರುವ ಸಿಪ್ರೋಪ್ಲಾಕ್ಸಿಲಿನ್, ಸಿಪೆಟಾಕ್ಸಿಮ್, ಸಿಪಿರಾಕ್ಸಿನ್ ಕ್ಲೋರೋಫಿನಿಕಾಲ್ ಔಷಧಿಯ ಕೊರತೆಯನ್ನು ತುಂಬಿದೆ. ಸಾರ್ವಜನಿಕ ಸಾಂಕ್ರಾಮಿಕತೆಯನ್ನು ಹತೋಟಿಯಲ್ಲಿಡಲು ಲಸಿಕೆಗಳ ಬಳಕೆ ಉಪಯುಕ್ತ.

**ಕಾಮಾಲೆ**

ಸುರಕ್ಷಿತ ನೀರು ಸಿಗದ ಸಂತ್ರಸ್ತರ ಊರಲ್ಲಿ ಈ ಕಾಮಾಲೆಗೆ ಸಾಂಕ್ರಾಮಿಕದ ಸಂಭ್ರಮ. ಈ ರೋಗ ಇರುವಿಕೆಯ ಕುರುಹುಗಳನ್ನು ತೋರಿಸದಷ್ಟು ಸೌಮ್ಯ ಸೋಂಕಿನಿಂದ ಹಿಡಿದು ಜೀವಕ್ಕೆ ಅಪಾಯ ಒಡ್ಡುವಷ್ಟು ಉಗ್ರವಾಗಿರುವ ಸೋಂಕಿನ ಮಧ್ಯೆ ರೋಗಿಗಳು ಜೀಕಾ ಹೊಡೆಯುತ್ತಿರುತ್ತಾರೆ. ಕಾಮಾಲೆ ಕಾಣುವುದಕ್ಕಿಂತ ಮೊದಲು ಮೈಕೈನೋವು, ನಸಿ ನಸಿ ಜ್ವರ, ಹೊಟ್ಟೆಹಸಿಯದಿರುವಿಕೆ, ವಾಕರಿಕೆ ವಾಂತಿ ಮುಂತಾದ ತೊಂದರೆಗಳು ತೋರುವವು. ನಂತರ ಕಣ್ಣು, ಬಾಯಿಯ ಲೋಳ್ಪರೆ ಹಳದಿ ಬಣ್ಣಕ್ಕೆ ತಿರುಗುವವು. ಚರ್ಮವು ಹಳದಿ ಆಗುವುದು. ಈ ರೋಗದ ಉಪಶಮನಕ್ಕೆ ಹೇಳಿಕೊಳ್ಳುವಂತಹ ಯಾವುದೇ ಮದ್ದು ಇನ್ನೂ ದೊರೆತಿಲ್ಲ. ಕಾರಣ ಈ ರೋಗದ ತೊಂದರೆಗೆ ತಕ್ಕ ಚಿಕಿತ್ಸೆ ಉಪಚಾರವೇ ಆಗಿದೆ.

ರೋಗಿಗಳು ಸೇವಿಸುವ ಆಹಾರ ಪದಾರ್ಥಗಳು ಪಚನಕ್ಕೆ ಹಗುರಾಗಿರಬೇಕು. ಆದ್ದರಿಂದ ರೋಗಿಗಳು ಹೆಚ್ಚಾಗಿ ಬೆಲ್ಲ, ಸಕ್ಕರೆ, ಕಬ್ಬಿನ ಹಾಲು, ಪಾನಕ ಮುಂತಾದವುಗಳನ್ನು ಸೇವಿಸಬೇಕು. ಜಿಡ್ಡಿನ ಪದಾರ್ಥಗಳನ್ನು, ಕರಿದ ಪದಾರ್ಥಗಳನ್ನು, ವರ್ಜಿಸಬೇಕು. 'ಸಿ' ಜೀವಸತ್ವವನ್ನು ಹೇರಳವಾಗಿ ತೆಗೆದುಕೊಳ್ಳಬೇಕು. ಕಾಮಾಲೆಗೆ ಕಡಿವಾಣ ಹಾಕಲು ಅತೀ ಮುಖ್ಯವಾದ ಸಂಗತಿಯೆಂದರೆ, ಜನರಿಗೆ ಸುರಕ್ಷಿತ ಕುಡಿಯುವ ನೀರನ್ನು ಸರಬರಾಜು ಮಾಡುವುದು, ಕುದಿಸಿ, ಆರಿಸಿ, ಸೋಸಿದ ನೀರನ್ನು ಕುಡಿಯುವಂತೆ ಜನರಲ್ಲಿ ಜಾಗೃತಿ ಉಂಟು ಮಾಡುವುದು.

**ಮಲೇರಿಯ**

ಊಟ ಸೇರದ ಬಾಯಿಗೆ ಏನೂ ರುಚಿಸುವುದಿಲ್ಲ. ಬಾಯಿ ಇಸಾ ಬೇವಿನಕಾಯಿ ಆಗಿರುತ್ತದೆ. ವಾಕರಿಕೆ, ವಾಂತಿ, ನಂತರ ಸಾಯುವ ಸಂಕಟ ಸುರಿಯುತ್ತದೆ. ತಪತಪ ಬೆವರು ಬಸಿಯುತ್ತದೆ. ಆರಾಮಾದ ಅನುಭವ ನೀಡುತ್ತದೆ. ಮತ್ತೆ ಸ್ವಲ್ಪ ಹೊತ್ತಿನ ನಂತರ ಇದು ಆದಿಯಿಂದ ಅಂತ್ಯದವರೆಗೆ ಮರುಕಳಿಸುತ್ತದೆ. ಈ ರೋಗವೇ ಮಲೇರಿಯ.

ಸಂತ್ರಸ್ತರ ನೆತ್ತರು ಹೀರಿ ಸಂತೃಪ್ತಿಗೊಂಡ ಸೊಳ್ಳೆಗಳು ಮಲೇರಿಯ ಹರಡಲು ಸಜ್ಜಾಗುತ್ತವೆ. ''ಚಳಿಜ್ವರ ಬಿಟ್ಟಾವ, ಒಳಜ್ವರ ಬಿಡಲಿಲ್ಲ'' ಎಂಬ ಆಡುಭಾಷೆಯ ಪಡೆನುಡಿ ಮೂಡಿ ಬರಬೇಕಾದರೆ ನಮ್ಮ ಜನರ ಕೂಡ ಇದರ ಒಡನಾಟ ಎಷ್ಟಿರಬಹುದೆಂಬುದು ಸ್ಫಟಿಕದಷ್ಟೇ ಸ್ಪಷ್ಟ. ಈಗ ಒಂದೊಂದು ಊರಲ್ಲಿ ಮಲೇರಿಯ ಮುಚ್ಚಿ ಮುಸುಕಿದೆ. ಮನೆಯಲ್ಲಿ ಎಲ್ಲರೂ ಹಾಸಿಗೆ ಹಿಡಿದಿದ್ದಾರೆ. ಒಲೆ ಹಚ್ಚಿ ಅಡುಗೆ ಮಾಡುವುದನ್ನು ಬಿಡಿ, ಹಟ್ಟಿಯಲ್ಲಿಯ ದನಕರುಗಳಿಗೆ ಮೇವು ಹಾಕುವವರಿಲ್ಲ, ನೀರು ಕುಡಿಸುವವರೂ ದಿಕ್ಕಿಲ್ಲ. ಸೊಳ್ಳೆಗಳ ಇತರ ಪ್ರಭೇದಗಳು ಆನೆಕಾಲುರೋಗ, ಮಿದುಳುಜ್ವರ, ಡೆಂಗೀಜ್ವರ, ರಕ್ತಸ್ರಾವದ ಜ್ವರ, ಹೆಡಮುರಿಗೆ ಹಾಕುವ ಹಳದಿಜ್ವರ ಹರಡಲು ಹಾತೊರೆಯುತ್ತಿವೆ. ಸುದೈವ ಎಂದರೆ ಹುಟ್ಟಿದ ಸೊಳ್ಳೆಗಳಲ್ಲಿ ಶೇಕಡ ಹತ್ತಕ್ಕೆ ಮಾತ್ರ ಮಾನವನ ಮುಖ ನೋಡುವ ಅವಕಾಶ ಸಿಕ್ಕರೆ, ಅವುಗಳ ಪೈಕಿ ಒಂದಕ್ಕೆ ಮಾತ್ರ ಮಾನವನ ರಕ್ತ ಹೀರುವ ಸೌಭಾಗ್ಯ ಸಿಗುತ್ತದೆ. ಅಂದಾಗ ಜಗತ್ತಿನಲ್ಲಿಯ ಸೊಳ್ಳೆಗಳ ಸಂಖ್ಯಾಬಲವನ್ನು ಯಾರಾದರೂ ಊಹಿಸಬಹುದು!




ಸೊಳ್ಳೆಗಳಿಂದ ಹರಡುವ ಈ ರೋಗಗಳಿಂದ ರಕ್ಷಣೆ ಪಡೆಯಲು, ಸೊಳ್ಳೆಗಳನ್ನು ಬಗ್ಗು ಬಡಿಯಲು ಸೂಕ್ತ ಶಕ್ತಿಯುತ ಕ್ರಿಮಿನಾಶಕಗಳನ್ನು ಸಿಂಪಡಿಸಬೇಕು. ವಾಸಿಸುವ ಪ್ರದೇಶದ ಸುತ್ತಮುತ್ತ ನೀರು ನೆಲೆಗಟ್ಟು ನಿಲ್ಲದಂತೆ ನೋಡಿಕೊಳ್ಳಬೇಕು. ಮಲಗುವಾಗ ಸೊಳ್ಳೆ ಪರದೆ ಬಳಸಬೇಕು. ಸೊಳ್ಳೆಗಳು ಮನೆಗೆ ನುಗ್ಗುವುದನ್ನು ನಿಯಂತ್ರಿಸಲು ಕಿಟಕಿಗಳಿಗೆ ಜಾಳಿಗೆಯನ್ನು ಹಾಕಿಸುವುದು, ಸೊಳ್ಳೆಗಳನ್ನು ಓಡಿಸುವ ಘಾಟು ಪದಾರ್ಥಗಳನ್ನು ಉಪಯೋಗಿಸುವುದು, ಕುಟುಂಬ ಯೋಜನೆಯ ಜಾಲಕ್ಕೆ ಸೊಳ್ಳೆಗಳನ್ನು ಕೆಡವುವುದು, ಸೊಳ್ಳೆಗಳ ಮೊಟ್ಟೆ, ಮರಿಗಳನ್ನು ತಿಂದು ಬದುಕುವ 'ಗಾಂಬೂಸಿಯಾ' ಜಾತಿಯ ಮೀನುಗಳನ್ನು ಕರೆ-ಕಟ್ಟೆಯಲ್ಲಿ ನೀರು ಸಾಗರಗಳಲ್ಲಿ ಬೆಳೆಸುವುದು... ಇತರೆ ಸೊಳ್ಳೆ ನಿಯಂತ್ರಣ ಕ್ರಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದು.

**ಪ್ರತಿಬಂಧಕೋಪಾಯಗಳು**

* ಕಲುಷಿತ ನೀರಿನಿಂದ ರೋಗ ಬರಬಹುದಾದ ಸಮಯದಲ್ಲಿ ಕುದಿಸಿ, ಆರಿಸಿ, ಸೋಸಿದ ಸ್ವಚ್ಛ ನೀರನ್ನು ಕುಡಿಯಬೇಕು. ಬಿಸಿ ಬಿಸಿ ಆಹಾರ ಸೇವಿಸಬೇಕು.
* ರಸ್ತೆ ಬದಿಯ ತಿನಿಸುಗಳನ್ನು ತಿನ್ನಬಾರದು.
* ಕೊಳೆತ ಹಣ್ಣು ಸೇವಿಸಬಾರದು.
* ಭೇದಿ ಮಾಡಿದ ನಂತರ ಚೆನ್ನಾಗಿ ಕೈ ಕಾಲುಗಳನ್ನು ಸಾಬೂನಿನಿಂದ ತೊಳೆದುಕೊಳ್ಳಬೇಕು. ಹೊರಗಿನಿಂದ ಬಂದವರೇ ನೇರವಾಗಿ ಊಟ ಮಾಡಬಾರದು. ಕೈಗಳನ್ನು ಸ್ವಚ್ಛಪಡಿಸಬೇಕು. ಕೈಯಲ್ಲಿಯ ಉಗುರುಗಳನ್ನು ಉದ್ದ ಬೆಳೆಸುವುದರಿಂದ ಉಗುರಿನ ಸಂದುಗಳಲ್ಲಿ ಹೊಲಸು ಸಂಗ್ರಹವಾಗಿ ರೋಗಕ್ಕೆ ಕಾರಣವಾದೀತು!
* ತಿನ್ನುವ ಆಹಾರ ಪದಾರ್ಥಗಳನ್ನು ನೊಣಗಳಿಂದ ರಕ್ಷಿಸಬೇಕು. ನೊಣಗಳು ಕುಳಿತ ಆಹಾರಗಳನ್ನು ತಿನ್ನಕೂಡದು, ಸಿಕ್ಕ ಸಿಕ್ಕಲ್ಲಿ ಮಲಮೂತ್ರ ಮಾಡಬಾರದು.
* ಪ್ರತಿ ಆರು ತಿಂಗಳಿಗೊಮ್ಮೆ ಕಾಲರಾ ನಿರೋಧಕ, ಟೈಫಾಯ್ಡ್ ನಿರೋಧಕ ಚುಚ್ಚುಮದ್ದನ್ನು ತೆಗೆದುಕೊಳ್ಳಬೇಕು ಹಾಗೂ ಆರು ತಿಂಗಳಿಗೊಮ್ಮೆ ಜಂತಿನ ಔಷಧ ತೆಗೆದುಕೊಳ್ಳಬೇಕು. ಮಕ್ಕಳಿಗೆ ಕಾಲಕ್ಕೆ ಸರಿಯಾಗಿ ಪೋಲಿಯೊ ಲಸಿಕೆ ಹಾಕಿಸಬೇಕು.
* ಉಗುರು ಕಡಿಯುವುದು, ಬಾಯಲ್ಲಿ ಬೆರಳು ಇಟ್ಟುಕೊಳ್ಳುವ ಅಭ್ಯಾಸವನ್ನು ಮಾಡಬಾರದು. ನೊಣ, ಜೊಂಡಿಗ ಜಿರಲೆಗಳು ಆಗದಂತೆ ಮನೆಯನ್ನು ಸ್ವಚ್ಛ ಇಟ್ಟುಕೊಳ್ಳಬೇಕು. ತಂಗಳು ಆಹಾರ ಸೇವಿಸಬಾರದು.

ಇಷ್ಟು ಅಂಶಗಳನ್ನು ಗಮನದಲ್ಲಿಡುವುದರ ಜೊತೆಗೇ ಪೌಷ್ಟಿಕ ಆಹಾರ ಸೇವಿಸಿ ದೇಹದ ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸಿಕೊಂಡಲ್ಲಿ ಕಲುಷಿತ ನೀರಿನಿಂದ ಬರುವ ಸಾಂಕ್ರಾಮಿಕ ರೋಗಗಳು ನಿಮ್ಮತ್ತ ಸುಳಿಯಲಾರವು.

**ಡಾ|| ಕರವೀರಪ್ರಭು ಕ್ಯಾಲಕೊಂಡ**
ವಿದ್ಯಾನಗರ, ೨ನೇ ಕ್ರಾಸ್, ಬದಾಮಿ - ೫೮೭ ೨೦೧
ಬಾಗಲಕೋಟೆ ಜಿಲ್ಲೆ

# ರಾಯಲಸೀಮೆಯ ಪ್ರಾದೇಶಿಕ ಚಿತ್ರಗಳು

ತೆಲುಗಿನ ಅತ್ಯುತ್ತಮ ಸಣ್ಣಕತೆಗಾರರಲ್ಲಿ ಒಬ್ಬರಾದ ಕೇತು ವಿಶ್ವನಾಥ ರೆಡ್ಡಿಯವರ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತ 'ಕೇತು ವಿಶ್ವನಾಥ ರೆಡ್ಡಿ ಕಥಾಲು' ಕೃತಿಯ ಅನುವಾದವೇ 'ಕೇತು ವಿಶ್ವನಾಥ ರೆಡ್ಡಿ ಕತೆಗಳು' (ಕಥಾ ಸಂಕಲನ). ಈ ಕಥಾಸಂಕಲನ ೧೯೭೫ರಿಂದ ೧೯೯೧ರವರೆಗೆ ತೆಲುಗಿನ ಬೇರೆ ಬೇರೆ ಮಾಸಪತ್ರಿಕೆ, ವಾರಪತ್ರಿಕೆಗಳಲ್ಲಿ ಪ್ರಕಟವಾದ ಮೂವತ್ತು ಕಥೆಗಳನ್ನು ಒಳಗೊಂಡಿದೆ. ಆಂಧ್ರದ ರಾಯಲಸೀಮೆಯ ಪರಿಸರದಲ್ಲಿ ಹುಟ್ಟಿ ಬೆಳೆದು, ಕಂಡುಂಡ ವಿಶ್ವನಾಥ ರೆಡ್ಡಿಯವರು ತಮ್ಮ ಕಥೆಗಳಲ್ಲಿ ಅದೇ ಪರಿಸರವನ್ನು ಸಹಜವೆನ್ನುವಂತೆ ತರುತ್ತಾರೆ. ಅಭಿವ್ಯಕ್ತಿ ಹಾಗೂ ನಿರೂಪಣೆಯಲ್ಲಿ ಹೊಸ ಪ್ರಯೋಗಗಳಿಂದ ಕೂಡಿ ಅವರ ಕಥೆಗಳು ರಾಯಲಸೀಮೆಯ ಜಮೀನ್ದಾರಿ ವ್ಯವಸ್ಥೆ, ದ್ವೇಷ, ಕೊಲೆಗಳು, ಕಾರ್ಖಾನೆಗಳ ದೌರ್ಜನ್ಯ, ಜನರನ್ನು ಹಿಂಡಿ ಹಿಪ್ಪೆ ಮಾಡುತ್ತಿರುವ ಮಟ್ಕಾ ಹಾಗೂ ಕುಡಿತ, ಚುನಾವಣೆಯ ಜಾತಿ ರಾಜಕೀಯ, ಆಡಳಿತಶಾಹಿಯ ಭ್ರಷ್ಟಾಚಾರ ಹಾಗೂ ದೌರ್ಜನ್ಯ, ಹದಗೆಡುತ್ತಿರುವ ಶೈಕ್ಷಣಿಕ ವ್ಯವಸ್ಥೆ, ನಶಿಸುತ್ತಿರುವ ಮಾನವೀಯ ಮೌಲ್ಯಗಳು, ಈ ಎಲ್ಲಾ ಸಮಸ್ಯೆಗಳಿಂದ ಬೇಸತ್ತು ನಕ್ಸಲೀಯ ವಿಚಾರಗಳತ್ತ ವಾಲುತ್ತಿರುವ ಯುವಜನತೆ ಮೊದಲಾದ ವಿಚಾರಗಳನ್ನು ತನ್ನೆಲ್ಲಾ ಆಯಾಮಗಳಲ್ಲಿ ಅನಾವರಣಗೊಳಿಸುತ್ತವೆ.

ವಿಶ್ವನಾಥ ರೆಡ್ಡಿಯವರು ತಮ್ಮದೇ ಆದ ತತ್ವಸಿದ್ಧಾಂತಗಳಿಗೆ ಬದ್ಧರಾದ ವಿಶೇಷ ಕಥೆಗಾರರು. ಸಂಕಲನದ ಮೊದಲ ಕಥೆ 'ಬದಲಾವಣೆ'ಯಲ್ಲಿ ಕಥೆಗಾರ ಜಯಚಂದ್ರ ತಮ್ಮ ಹಕ್ಕುಗಳಿಗಾಗಿ ಹೋರಾಡುವ ರೈತರ ಜೊತೆಗೆ ಗುರುತಿಸಿಕೊಳ್ಳುತ್ತಾನೆ. ಅದನ್ನು ಕಂಡ ನಿರೂಪಕ "ಓದುಗನಾದ ನಾನು ಇನ್ನೂ ರಸ್ತೆ ಬದಿಯಲ್ಲೇ ನಿಲ್ಲಬೇಕೇ?" ಎಂದು ಗಂಭೀರವಾದ ಪ್ರಶ್ನೆಯನ್ನು ಮುಂದಿಡುವುದರ ಜೊತೆಗೆ ಕತೆ ಮುಗಿಯುತ್ತದೆ. ಇಲ್ಲಿ ನಿರೂಪಕನ ಪಾತ್ರ ವಿಶ್ವನಾಥ ರೆಡ್ಡಿಯವರ ಬರವಣಿಗೆಯ ಆಶಯಗಳನ್ನು ವ್ಯಕ್ತಪಡಿಸುತ್ತದೆ. ಎಡಪಂಥೀಯ ವಿಚಾರಗಳತ್ತ ಒಲವು ಹೊಂದಿರುವ ಕೇತು ವಿಶ್ವನಾಥ ರೆಡ್ಡಿಯವರು ತಮ್ಮ ಕಥೆಗಳಲ್ಲಿ ಮೇಲ್ವರ್ಗದಿಂದ ತಲೆತಲಾಂತರಗಳಿಂದ ಸಾಮಾಜಿಕವಾಗಿ, ಆರ್ಥಿಕವಾಗಿ ಶೋಷಣೆ ಅನುಭವಿಸುತ್ತಿರುವ ಕೆಳವರ್ಗದ ಜನಗಳ ಜೊತೆಗೆ ಗುರುತಿಸಿಕೊಳ್ಳುತ್ತಾರೆ ಹಾಗೂ ಆ ಶೋಷಣೆಯ ವಿವಿಧ ಆಯಾಮಗಳನ್ನು ತೆರೆದಿಡುತ್ತಾರೆ. ಅವರ ಕಥೆಗಳಲ್ಲಿನ ಪಾತ್ರಗಳು ಮೌನವಾಗಿ ಶೋಷಣೆ ಅನುಭವಿಸುವುದಿಲ್ಲ; ಬದಲಾಗಿ, ತಮ್ಮ ಶೋಷಕರ ವಿರುದ್ಧ ತಿರುಗಿ ಬೀಳುತ್ತಾರೆ. 'ಆಕ್ರೋಶ' ಕಥೆಯ ರೈತ ಸೋಮಯ್ಯ, 'ಕತ್ತಲೆಯ ನಾಡಿ, ಬೆಳಕಿನ ನೆತ್ತರು' ಕಥೆಯ ಮಲ್ಲಮ್ಮನ ಮಗಳು ಸುಬ್ಬಿ, 'ಸ್ವತಂತ್ರ' ಕಥೆಯ ರಾಮ – ಇವರೆಲ್ಲರೂ ತಮ್ಮನ್ನು ಮೆಟ್ಟಿನಿಂತಿರುವ ವ್ಯವಸ್ಥೆಯನ್ನು ಕಿತ್ತೊಗೆಯುವ ಪ್ರಯತ್ನ ನಡೆಸುತ್ತಾರೆ. ಶೋಷಣೆಗೆ ಬಂಡಾಯ, ಹೋರಾಟವೇ ಪರಿಹಾರ ಎಂಬ ಅಭಿಪ್ರಾಯ ಇಲ್ಲಿ ವ್ಯಕ್ತವಾಗುತ್ತದೆ.

ಸಂಕಲನದ ಕಥೆಗಳು ರಾಯಲಸೀಮೆಯ ಪ್ರಾದೇಶಿಕ ಸಮಸ್ಯೆಗಳ ಜೊತೆಗೆ ಬಹುಸಂಕೀರ್ಣ ಸ್ವರೂಪದ ಅನೇಕ ವಾಸ್ತವಿಕ ಸಮಸ್ಯೆಗಳನ್ನೂ ಚರ್ಚಿಸುತ್ತವೆ. 'ಪದ್ಧತಿ' ಮತ್ತು 'ಖಡ್ಗಗಳೂ ಗೀಜಗನ ಹಕ್ಕಿಗಳೂ' ನಮ್ಮ ಶೈಕ್ಷಣಿಕ ವ್ಯವಸ್ಥೆಯ ಅಧಃಪತನವನ್ನು ಬಿಂಬಿಸಿದರೆ, 'ಪೀರ್ಲಚಾವಡಿ' ಇಂದಿನ ಜಾತಿ ರಾಜಕೀಯ ವ್ಯವಸ್ಥೆಗೆ ಕನ್ನಡಿ ಹಿಡಿಯುತ್ತದೆ. ಸಂಕಲನದ ಇನ್ನು ಕೆಲವು ಕಥೆಗಳು ಇಂದು ಹಣ, ಪ್ರತಿಷ್ಠೆಗಳ ನಡುವೆ ನಶಿಸುತ್ತಿರುವ ಮಾನವೀಯ ಮೌಲ್ಯಗಳ ಬಗ್ಗೆ ಚರ್ಚಿಸುತ್ತವೆ. 'ಆತ್ಮರಕ್ಷಣೆ' ಕಥೆಯಲ್ಲಿ ಶಾಸ್ತ್ರಿ 'ಜೀವನದ ಹರಾಜಿನಲ್ಲಿ ನಾನಾ ದೇವರುಗಳ ಪ್ರಸ್ತಾಪ' ಎಂದು ಧರ್ಮದ ಇಂದಿನ ಪರಿಸ್ಥಿತಿಯನ್ನು ಬಿಂಬಿಸಿದರೆ, 'ದಣಿದ ಕಥೆಯ ಶ್ರೀರಾಮನ "ಪ್ರೀತಿಯನ್ನು ತೋರಿಸುವುದಕ್ಕೆ ಕೂಡ ಶಕ್ತಿ ಬುದ್ಧಿವಂತಿಕೆ ಇರಬೇಕಮ್ಮಾ" ಎಂಬ ಮಾತು ಓದುಗರನ್ನು ಗಂಭೀರ ಚಿಂತನೆಗೆ ಒಳಪಡಿಸುತ್ತದೆ. 'ತಲೆಯಾಡಿಸುವ ಬೊಂಬೆ' ಕಥೆ ತಮ್ಮ ಪೋಷಕರ ಆಸೆ-ಆಕಾಂಕ್ಷೆಗಳನ್ನು ಪೂರೈಸುವ ಯಂತ್ರಗಳಾಗುತ್ತಿರುವ ಇಂದಿನ ಮಕ್ಕಳ ದೀನ ಸ್ಥಿತಿಯನ್ನು ಬಿಂಬಿಸಿದರೆ, 'ವ್ಯತ್ಯಾಸ', 'ಮಹಿಮೆ' ಹಾಗೂ 'ಎಸ್ - 2 ಬೋಗಿ' ಕಥೆಗಳು ನಗರವಾಸಿಗಳ ಆಷಾಢಭೂತಿತನವನ್ನು ಗೇಲಿಮಾಡುತ್ತವೆ. 'ಪ್ರೇಮರೂಪ' ಕಥೆಯಲ್ಲಿ ಪ್ರೇಮ ಕಥೆಗಳನ್ನು ಬರೆಯುವ ಕಥೆಗಾರ ಹಣ್ಣು ಮುದುಕಿ ಅಚ್ಚಮ್ಮನಿಂದ ನಿಜವಾದ ಪ್ರೀತಿ ಪ್ರೇಮ ಏನೆಂಬುದನ್ನು ಕಂಡುಕೊಳ್ಳುತ್ತಾನೆ. ಇಲ್ಲಿ ವಿಶ್ವನಾಥ ರೆಡ್ಡಿಯವರು ವಾಸ್ತವಿಕ ಜಗತ್ತಿನಿಂದ ದೂರವಾಗುತ್ತಿರುವ ಇಂದಿನ ಸಾಹಿತ್ಯದ ಬಗ್ಗೆ ಗಮನ ಸೆಳೆಯುತ್ತಾರೆ.

ಕೇತು ವಿಶ್ವನಾಥ ರೆಡ್ಡಿಯವರ ಈ ಕಥೆಗಳು ಅವರು ಹುಟ್ಟಿ ಬೆಳೆದ ಪರಿಸರದ ಅಗಾಧ ಪ್ರಭಾವವನ್ನು ತೋರುತ್ತವೆ. ರಾಯಲಸೀಮೆಯ ಪರಿಸರ ಹಾಗೂ ಭಾಷೆಯನ್ನು ಚಿತ್ರಿಸಿದರೂ ಈ ಕಥೆಗಳು ಕೇವಲ ಪ್ರಾದೇಶಿಕ ಕಥೆಗಳಾಗಿ ಉಳಿಯುವುದಿಲ್ಲ. ಇಲ್ಲಿ ಚಿತ್ರಿತವಾಗಿರುವ ವಸ್ತು ಹಾಗೂ ಸಮಸ್ಯೆಗಳು ಸಾರ್ವತ್ರಿಕವಾಗಿರುವುದರಿಂದ ಕಥೆಗಳು ದೇಶ-ಭಾಷೆಗಳ ಎಲ್ಲೆಗಳನ್ನು ಮೀರಿ ನಿಲ್ಲುತ್ತವೆ. ಚುರುಕು ಸಂಭಾಷಣೆ ಹಾಗೂ ಪ್ರಾದೇಶಿಕ ಭಾಷೆಯ ಸೊಗಡು ಈ ಕಥೆಗಳ ಮತ್ತೊಂದು ವಿಶೇಷ.

ಕನ್ನಡದ ಹೊಸ ತಲೆಮಾರಿನ ಜಾನಪದ ವಿದ್ವಾಂಸರಲ್ಲಿ ಒಬ್ಬರಾದ ಡಾ॥ ಮೀರಾಸಾಬಿಹಳ್ಳಿ ಶಿವಣ್ಣನವರು ತೆಲುಗಿನಿಂದ ಅನುವಾದಿಸಿದ್ದಾರೆ. ಕೇತು ವಿಶ್ವನಾಥ ರೆಡ್ಡಿಯವರದೇ ಆದ 'ಜಪ್ತಿ' (೨೦೦೧) ಎಂಬ ಬೇರೊಂದು ಕಥಾಸಂಕಲನ ಈಗಾಗಲೇ ಪ್ರಕಟಿಸಿರುವ ಡಾ॥ ಮೀರಾಸಾಬಿಹಳ್ಳಿ ಶಿವಣ್ಣನವರು ಮೂಲ ಲೇಖಕರ ಆಶಯ, ಮೂಲ ಕಥೆಗಳ ಸೊಗಡುಗಳನ್ನು ಉಳಿಸಿಕೊಂಡು ಮತ್ತೊಂದು ಮೇರು ಕೃತಿಯನ್ನು ಸಮರ್ಪಕವಾಗಿ ಕನ್ನಡಕ್ಕೆ ತಂದಿದ್ದಾರೆ.


ಸುದರ್ಶನ ಎನ್.ಪಿ.

ಇಂಗ್ಲಿಷ್ ಮತ್ತು ವಿದೇಶಿ ಭಾಷೆಗಳ ವಿಶ್ವವಿದ್ಯಾನಿಲಯ

ಹೈದರಾಬಾದ್ - [illegible]







ತೆಲುಗು ಮೂಲ

**ಕೇತು ವಿಶ್ವನಾಥ ರೆಡ್ಡಿ**

ಅನುವಾದ

**ಮೀರಾಸಾಬಿಹಳ್ಳಿ ಶಿವಣ್ಣ**

ಪುಟ : xiv + ೨೫೦ ಬೆಲೆ : ರೂ. ೧೨೦

ಸಾಹಿತ್ಯ ಅಕಾಡೆಮಿ

ರವೀಂದ್ರ ಭವನ, ೩೫, ಫಿರೋಜಶಾಹ ರಸ್ತೆ

ನವದೆಹಲಿ – ೧೧೦ ೦೦೧

# ಸಪ್ತ ಸಹೋದರಿಯರ ಮುದ್ದು ಮಕ್ಕಳು ಈ ಬಂಡುಕೋರರು

ಎಂ. ವೆಂಕಟಸ್ವಾಮಿ





ಈಶಾನ್ಯ ರಾಜ್ಯಗಳಲ್ಲಿ ಪರಿಸ್ಥಿತಿ ಹಸನಾಗಿಲ್ಲ. ವರ್ಷಕ್ಕೆ ಎರಡು ಸಲ ನಡೆಯುವ ಸರಕಾರಿ ಹಬ್ಬಗಳಾದ ಸ್ವಾತಂತ್ರ್ಯ ಮತ್ತು ಗಣರಾಜ್ಯ ದಿನಾಚರಣೆಗಳನ್ನು ಯಾವ ರೀತಿ ಆಚರಿಸುತ್ತವೆ ಎಂದರೆ ಯಾವುದೋ ಅಪರಿಚಿತ ದೇಶದಲ್ಲಿ ಅಪರಿಚಿತ ಜನರು ರಾಷ್ಟ್ರ ಧ್ವಜವನ್ನು ಹಾರಿಸುತ್ತಾ ಏನೋ ಅಪರಾಧ ಮಾಡುತ್ತಿರುವಂತೆ ತೋರುತ್ತದೆ. ಟಿವಿ ಚಾನೆಲ್‌ಗಳು ಈ ರಾಜ್ಯಗಳ ರಂಗುರಂಗು ಸಾಂಸ್ಕೃತಿಕ ಕಲೆ ಮತ್ತು ನೃತ್ಯಗಳನ್ನು ಬಿತ್ತರಿಸುತ್ತವೆ. ಅದು ಕೇಂದ್ರ ಸರಕಾರದ ಕುರುಡು ಕಣ್ಣುಗಳಿಗೆ ಹೇಗೆ ಕಾಣಿಸುತ್ತದೆ ಗೊತ್ತಿಲ್ಲ. ಇದು ದೆಹಲಿಯಿಂದ ಬರುವ ಹಣಕ್ಕೆ ರಾಜ್ಯ ಸರಕಾರಗಳು ತೋರಿಸುವ ನಾಟಕೀಯ ಪ್ರತಿಕ್ರಿಯೆಯೆಂದರೆ ತಪ್ಪಾಗುವುದಿಲ್ಲ. ನಾಗಾಲ್ಯಾಂಡ್ ಮತ್ತು ಮೇಘಾಲಯದ ಬಂಡುಕೋರರ ಗುಂಪುಗಳು ಸ್ವಾತಂತ್ರ್ಯ ದಿನವನ್ನು ಪ್ರತಿಭಟಿಸಿ ಆಯಾ ರಾಜ್ಯಗಳ ಬಂದ್ ಘೋಷಿಸಿದ್ದವು. ಅಸ್ಸಾಂನಲ್ಲಿ ಅನೇಕ ಕಡೆ ಕಪ್ಪು ಬಾವುಟಗಳನ್ನು ಹಾರಿಸಲಾಗಿತ್ತು. ಬಂಡುಕೋರರ ಆಸ್ಥಾನಗಳಲ್ಲಿ ದೇಶದ ವಿರುದ್ಧ ಕೆಲವು ನಿರ್ಣಯಗಳನ್ನು ತೆಗೆದುಕೊಳ್ಳಲಾಗಿತ್ತು. ಒಮ್ಮೆ 'ಬಂದ್' ಎಂದ ತಕ್ಷಣ ಸಾರ್ವಜನಿಕರು ಭೀತಿಯಿಂದ ಮನೆಗಳಲ್ಲಿಯೆ ಇದ್ದುಬಿಡುತ್ತಾರೆ. ರಾಜ್ಯ ಸರಕಾರದ ಕಾರ್ಮಿಕರಿಗೆ ಅಂದು ರಜಾ ದಿನ. ಎಲ್ಲೆಲ್ಲೂ ಪೊಲೀಸರ ಬಂದೋಬಸ್ತು. ಭೀತಿಯಿಂದ ಅಲ್ಲಿ ಇಲ್ಲಿ ತ್ರಿರಂಗ ಬಾವುಟಗಳು ಹಾರಾಡುವುದಕ್ಕಿಂತ ಕಪ್ಪು ಬಾವುಟಗಳೇ ಹೆಚ್ಚಾಗಿ ಹಾರಾಡುತ್ತವೆ. ನಮ್ಮ ಕಛೇರಿಯ ಮುಂದೆ ಎರಡು ಸಲ ಬಾವುಟ ಹಾರಿಸಿದಾಗ ನನ್ನಂತಹ ಹೊರ ರಾಜ್ಯಗಳಿಂದ ಬಂದಿದ್ದ ಅಧಿಕಾರಿಗಳು ಮಾತ್ರ ಇದ್ದೆವು. ಸ್ಥಳೀಯ ಅಧಿಕಾರಿಗಳು, ಕಾರ್ಮಿಕರು ಒಬ್ಬರೂ ಬಂದಿರಲಿಲ್ಲ. ಬಂದ್ ಎಂದು ಒಂದೇ ಒಂದು ಈ-ಮೇಲ್ ಬಂದಿದೆ ಎಂದು ಯಾರಾದರೂ ಗುಲ್ಲೆಬ್ಬಿಸಿದರೆ ಸಾಕು, ಇಡೀ ರಾಜ್ಯದಲ್ಲಿ ಒಂದೇ ಒಂದು ಸರಕಾರ, ಖಾಸಗಿ ವಾಹನವೂ ಓಡುವುದಿಲ್ಲ. ಒಂದು ಅಂಗಡಿಯೂ ತೆರೆದಿರುವುದಿಲ್ಲ. ಬಂದ್ ಕರೆದವರು ಯಾವ ಗುಂಪಿನ ಬಂಡುಕೋರರು ಎನ್ನುವುದು ಯಾರಿಗೂ ಗೊತ್ತಿರುವುದಿಲ್ಲ. ನಿಜಕ್ಕೂ ಇವೆಲ್ಲ ಭಾರತಕ್ಕೆ ಸೇರಿದ ರಾಜ್ಯಗಳೇ, ಎನ್ನುವ ಗುಮಾನಿ ಬರುತ್ತದೆ.



ಪುರಾಣಗಳಲ್ಲಿ ಇಂಡೋ-ಮಂಗೋಲಾಯ್ಡ್ ಜನರನ್ನು ಕಿರಾತರು ಎಂದು ಕರೆಯಲಾಗಿದೆ. ಸುಮಾರು ೬೦೦೦ ವರ್ಷಗಳ ಹಿಂದೆ ಮೂಲತಃ ಚೀನಾದ ಹಳದೀ ನದಿಯ ಮುಖಜ ಪ್ರದೇಶದಿಂದ ಇವರ ವಲಸೆ ಪ್ರಾರಂಭವಾಗಿರುವ ಸೂಚನೆಗಳು ಕಂಡುಬಂದಿವೆ. ಮೊದಲ ಗುಂಪು ಅಲ್ಲಿಂದ ದಕ್ಷಿಣ-ಪೂರ್ವ ದಿಕ್ಕಿನಲ್ಲಿ ಸಾಗಿ ಇಂದಿನ ಥಾಯ್‌ಲ್ಯಾಂಡ್ ತಲುಪಿತ್ತು. ಕಾಲಾಂತರದಲ್ಲಿ ಅಲ್ಲಿಂದ ಹೊರಟ ಕೆಲವು ಗುಂಪುಗಳು ಪೂರ್ವ ಹಿಮಾಲಯದ ಮೂಲಕ ಇರುವಾಡಿ-ಚಿಂದ್‌ವಿನ್ ನದಿ ಕಣಿವೆಗಳ ಮೂಲಕ ಈಶಾನ್ಯ ಭಾರತದ ಅಂಚು ಸೇರಿದವು. ಈ ಗುಂಪುಗಳು ಅಲ್ಲಿದ್ದ ಮೂಲ ಹಿಮಾಲಯ ಬುಡಕಟ್ಟು ಜನಾಂಗಗಳಾದ ನೇಪಾಳಿ, ಉತ್ತರ ಅಸ್ಸಾಂನ ಬೋಡೋ ಮತ್ತು ನಾಗಾ, ಕುಕಿ-ಚಿನ್, ಆಹೋಂ, ಭಾರತೀಯ ಟಿಬೆಟ್ಟರು ಮತ್ತು ಮೇಘಾಲಯದ ಕಾಶಿ (ಟಿಬೆಟ್-ಬರ್ಮಾ, ಚೀನಾ-ಟಿಬೆಟ್ ಬುಡಕಟ್ಟು ಜನಾಂಗಗಳು ಕೆಲವು ಇಲ್ಲಿಗೆ ತಲುಪಿದ್ದವು) ಜನಾಂಗಗಳ ಜೊತೆಗೆ ಬೆರೆತುಹೋದವು. ಕೆಲವು ಗುಂಪುಗಳು ಅನಂತರ ಹಿಮಾಲಯ ಪರ್ವತ ಶ್ರೇಣಿಗಳ ಮೂಲಕ ಸಿಕ್ಕಿಂ, ನೇಪಾಳ ಮತ್ತು ಟಿಬೆಟ್ ಕಡೆಗೆ ಸಾಗಿದವು. ಕೆಲವರು ಬಂದ ದಾರಿಯಲ್ಲಿಯೆ ಅಲ್ಲಲ್ಲಿ ನೆಲೆ ನಿಂತರು. ಇದೆಲ್ಲ ಕಳೆದ ೬೦೦೦ ವರ್ಷಗಳ ಅವಧಿಯಲ್ಲಿ ನಡೆದಿರುವ ಚಟುವಟಿಕೆಗಳು. ಕೆಲವು ಗುಂಪುಗಳು ಥಾಯ್-ಕೆಮೂರ್ ಗುಂಪಿನ ಭಾಷೆಗಳನ್ನು ಬಳಸಿದರೆ ಹೆಚ್ಚು ಜನರು ಚೀನಾ-ಥಾಯ್-ಟಿಬೆಟ್ ಗುಂಪಿನ ಭಾಷೆಗಳನ್ನು ಮಾತನಾಡುತ್ತಾರೆ. ಕೆಲವು ಬುಡಕಟ್ಟಿನ ಭಾಷೆಗಳು ತಮ್ಮದೇ ಆದ ಡೈಯಲೆಕ್ಟ್‌ಗಳನ್ನು ಹೊಂದಿವೆ. ೧೬ನೇ ಶತಮಾನದ ನಂತರ ಯೂರೋಪಿನ ಮಿಷನರಿಗಳು, ತೀರ ಇತ್ತೀಚೆಗೆ ದೇಶದ ಇತರ ಭಾಗಗಳ ಜನರು, ಇವರನ್ನು ಸೇರಿಕೊಂಡರು.

ಇಂಡೋ-ಮಂಗೋಲಾಯ್ಡ್ ಮೂಲದ ಜನರ ಜೊತೆಗೆ ನಾಗಾ ಮತ್ತು ಇನ್ನಿತರ ಬುಡಕಟ್ಟುಗಳ ಜನರು ಕ್ರಿ. ಪೂ. ೧೦ನೇ ಶತಮಾನದ (ವೇದಗಳು ಸೃಷ್ಟಿಯಾದ) ಕಾಲದಿಂದಲೂ ಈ ವಲಯದಲ್ಲಿ ನೆಲೆಸಿರುವ ದಾಖಲೆಗಳಿವೆ. ಆಗಿಂದಲೇ ಹಿಮಾಲಯ ಮತ್ತು ಈಶಾನ್ಯ ಪರ್ವತಗಳಲ್ಲಿ ವಾಸಿಸುವ ಆರ್ಯೇತರ ಜನರನ್ನು ಕಿರಾತರು ಎಂದು ಕರೆಯಲಾಗಿದೆ. ಪ್ರಪಂಚದ ಇತರ ಭಾಗಗಳಲ್ಲಿ ಕಾಣಿಸಿಕೊಂಡ ಆಸ್ಟ್ರಿಕ್ ಮೂಲದ ಜನರು, ಸಬರಾರು, ಪುಲಿಂದರು, ನಿಶಾದರು ಮತ್ತು ಬಿಲ್ಲಾಗರಿಂದ ಕಿರಾತರು ಪ್ರತ್ಯೇಕ ಎನ್ನುವುದು ಸಾಬೀತಾಗಿದೆ. ಪ್ರಾಚೀನ ಸಂಸ್ಕೃತದಲ್ಲಿ ಈ ಜನರು ಕಾಡುಗಳಲ್ಲಿ ಪ್ರಾಣಿಗಳನ್ನು ಬೇಟೆಯಾಡುತ್ತ ಗೆಡ್ಡೆ ಗೆಣಸು ಮತ್ತು ಹಣ್ಣುಹಂಪಲುಗಳನ್ನು ಭಕ್ಷಿಸುತ್ತ ಬಿಲ್ಲು ಬಾಣಗಳನ್ನು ಹಿಡಿದು ನಗ್ನರಾಗಿ ಓಡಾಡುತ್ತಿದ್ದರು ಎಂದು ದಾಖಲಾಗಿದೆ. ಬಂಗಾರ ಬಣ್ಣದ ಈ ಬುಡಕಟ್ಟು ಜನಾಂಗಗಳು ಮತ್ತು ಬಯಲಿನ ಆರ್ಯಪೂರ್ವ ಕಪ್ಪು ಮೈಬಣ್ಣದ ಬುಡಕಟ್ಟುಗಳ ನಡುವೆ ಘರ್ಷಣೆಗಳು ನಡೆಯುತ್ತಲೆ ಇದ್ದವು.

ಕಿರಾತರಲ್ಲಿ ಕೆಲವರು ಹಿಂದೂಗಳಾದರೆ, ಇನ್ನು ಕೆಲವರು ಬೌದ್ಧ ಧರ್ಮ ಅಪ್ಪಿಕೊಂಡರು. ೧೭ನೇ ಶತಮಾನದಲ್ಲಿ ಮಿಷನರಿಗಳ ಆಗಮನದಿಂದ ಬಹಳಷ್ಟು ಜನರು ಕ್ರೈಸ್ತ ಮತಾವಲಂಬಿಗಳಾದರು. ಮಹಾಭಾರತ ನಡೆಯುವುದಕ್ಕೆ ಮುಂಚೆಯೆ ಶಿವ ಅಥವಾ ಮಹಾದೇವನು ಕಿರಾತನಾಗಿ ಕಿರಾತಳಾದ ಉಮಾದೇವಿಯೊಂದಿಗೆ ಅರ್ಜುನನನ್ನು ನೋಡಲು ಹೋದ ಘಟನೆ ಪುರಾಣಗಳಲ್ಲಿ ದಾಖಲಾಗಿದೆ. ಬುದ್ಧನು ಮೂಲವಾಗಿ ಇಂಡೋ-ಮಂಗೋಲಾಯ್ಡ್ ಅಥವಾ ಕಿರಾತನೆ ಆಗಿದ್ದು ಆತನ ಮೂಲಕ ಭಾರತ ಆಧ್ಯಾತ್ಮಿಕ ಕೊಂಡಿಯ ಮೂಲಕ ಇಡೀ ಮಂಗೋಲಾಯ್ಡ್ ಪ್ರಪಂಚದೊಂದಿಗೆ ಬೆಸೆದುಕೊಂಡಿತು.

ನಾಗಾಗಳು ನೂರಾರು ವರ್ಷಗಳ ಕಾಲ ಅರಣ್ಯ ಮತ್ತು ಪರ್ವತಗಳಲ್ಲಿ ಬಹಳ ಕಷ್ಟದ ದಿನಗಳನ್ನು ನೂಕಿದ್ದಾರೆ. ೧೩ನೇ ಶತಮಾನದ ಪ್ರಾರಂಭದಲ್ಲಿ ಶಾನ್ ದೊರೆ ಸುಖಪ ಬರ್ಮಾ ಮತ್ತು ಭಾರತವನ್ನು ಪ್ರತ್ಯೇಕಿಸುವ ಪಟ್ಕಾಯ್ ಪರ್ವತ ಸರಣಿಯನ್ನು ದಾಟಿಕೊಂಡು ಬರುವಾಗ ನಾಗಾ ಮತ್ತು ಇತರ ಬುಡಕಟ್ಟು ಜನರನ್ನು ಎದುರಿಸಿ ಮುಂದೆ ಬರಬೇಕಾಯಿತು. ಸುಖಪ ಸೈನಿಕರು ತಾವು ಸೆರೆಹಿಡಿದ ನಾಗಾಗಳನ್ನು ಕತ್ತರಿಸಿ ಬೆಂಕಿಯಲ್ಲಿ ಸುಟ್ಟು ಅವರ ಸಂಬಂಧಿಗಳಿಗೆ ತಿನ್ನಿಸಿದ ದಾಖಲೆಗಳಿವೆ. ನಾಗಾಗಳು ಮತ್ತು ಆಹೋಂಗಳ ನಡುವಿನ ಸಂಬಂಧ ಬಹಳ ಕುತೂಹಲದ ಶತ್ರುತ್ವ ಮತ್ತು ಆಪ್ಯಾಯಮಾನದಿಂದ ಬೆಸೆದುಕೊಂಡಿದೆ. ಒಂದು ಕಾಲದಲ್ಲಿ ಆಹೋಂ ರಾಜರು ನಾಗಾಗಳಿಂದ ಕಪ್ಪ ಕಾಣಿಕೆಗಳನ್ನು ಸೇವಕರು, ಆನೆದಂತ, ಭರ್ಚಿಗಳು, ಕೈಯಿಂದ ನೇಯ್ದ ಬಟ್ಟೆ ಇತ್ಯಾದಿಗಳ ಮೂಲಕ ಪಡೆಯುತ್ತಿದ್ದರು. ಇದರ ಬದಲಿಗೆ ಆಹೋಂಗಳು ನಾಗಾಗಳಿಗೆ ಅಲ್ಲಿ ಇಲ್ಲಿ ಒಂದಷ್ಟು ನೆಲವನ್ನು ಕಾಣಿಕೆಯಾಗಿ ನೀಡುತ್ತಿದ್ದರು. ಆಹೋಂಗಳ ತೋಟಗಳಲ್ಲಿ ನಾಗಾ-ಕಕಾಟಿಗಳು ಅಧಿಕಾರಿಗಳಾಗಿ ಕೆಲಸ ನೋಡಿಕೊಳ್ಳುತ್ತಿದ್ದರು. ಕೆಲವೊಮ್ಮೆ ಆಹೋಂ ಮುಖ್ಯಸ್ಥರ ನಡುವೆ ಕಾದಾಟಗಳು ನಡೆದು ಅವರು ಪರ್ವತಗಳ ಕಡೆಗೆ ಓಡಿಹೋಗಿ ನಾಗಾಗಳ ಮಧ್ಯೆ ತಲೆಮರೆಸಿಕೊಳ್ಳುತ್ತಿದ್ದರು.

೧೬ ಮತ್ತು ೧೭ನೇ ಶತಮಾನಗಳಲ್ಲಿ ನಾಗಾ ಮತ್ತು ಆಹೋಂಗಳ ನಡುವೆ ಹಲವಾರು ಕಲಹಗಳು ನಡೆದಿವೆ. ೧೫೩೦ರಲ್ಲಿ ನಾಗಾಗಳು ಆಹೋಂ ಪಡೆಗಳ ಮೇಲೆ ದಾಳಿ ಮಾಡಿ ಅವರಲ್ಲಿದ್ದ ನೂರಾರು ಗನ್ನುಗಳನ್ನು ಹಾರಿಸಿಕೊಂಡು ಹೋಗಿದ್ದರು. ೧೬೯೨ರಲ್ಲಿ ನಾಗಾಗಳು ೨೩ ಅಸ್ಸಾಮಿಗಳನ್ನು ಸಾಯಿಸಿದ್ದರು. ಆಹೋಂ ರಾಜ ಗದಾದರ ಸಿಂಗ್ ಒಬ್ಬ ನಾಗಾ ಮುಖ್ಯಸ್ಥನನ್ನು ಕೊಂದು ಇತರ ನಾಗಾ ಮುಖ್ಯಸ್ಥರೆಲ್ಲ ರಾಜಧಾನಿಗೆ ಬಂದು ಬೇಡಿಕೊಳ್ಳುವಂತೆ ಮಾಡಿದ್ದ. ನಾಗಾ ಮುಖ್ಯಸ್ಥರು ತಮ್ಮ ಕನ್ನೆಯರನ್ನು ಗದಾದರ ಸಿಂಗ್‌ಗೆ ಮದುವೆ ಮಾಡಿಕೊಟ್ಟು ಜೊತೆಗೆ ಬಹಳಷ್ಟು ಸೇವಕರನ್ನು ಬಿಟ್ಟುಹೋದರು. ಇದೆಲ್ಲ ಅಸ್ಸಾಂ ಮತ್ತು ನಾಗಾ ರಾಜ್ಯದ ಗಡಿಗಳಲ್ಲಿ ನಡೆಯುತ್ತಿದ್ದವರ ಜೊತೆಗಿನ ಕಾದಾಟವಾಗಿತ್ತು, ಆದರೆ ಇನ್ನೂ ದಕ್ಷಿಣದ ಕಡೆಗೆ ಪರ್ವತಗಳ ಮೇಲಿದ್ದ ನಾಗಾಗಳು ಯಾರ ಹಿಡಿತಕ್ಕೂ ದೊರಕದೆ ಜೀವನ ನಡೆಸಿದ್ದರು.

ಪ್ರಸ್ತುತ, ಅಸ್ಸಾಮಿಗಳು ಇಡೀ ಈಶಾನ್ಯ ವಲಯ ನಮ್ಮದು, ನಾವೇ ಮೂಲಸ್ಥರು ಎಂದರೆ, ನಾಗಾಗಳು, ಈ ಆಹೋಂ ಜನರು ನಮ್ಮನ್ನೆಲ್ಲ ಪವರ್ತಗಳಿಗೆ ಅಟ್ಟಿ ಫಲವತ್ತಾದ ಬ್ರಹ್ಮಪುತ್ರಾ ನದಿ ದಡಗಳಲ್ಲಿ ನೆಲೆಸಿಬಿಟ್ಟರು ಎಂದು ದೂರುತ್ತಾರೆ. ಇನ್ನು ಬ್ರಹ್ಮಪುತ್ರಾ ನದಿಯ ಪೂರ್ವದಲ್ಲಿ ನೆಲೆಸಿರುವ ಬುಡಕಟ್ಟು ಜನರು ಗೌಹಾತಿಯಲ್ಲಿರುವ ಪಟ್ಟಣದ ಜನ ನಮಗೆ ಭಾರಿ ಮೋಸ ಬಗೆದರು ಎನ್ನುತ್ತಾರೆ. ಮೊಘಲರ ಮೀರ್ ಜುಮ್ಲಾನ ಜೊತೆಗೆ ೧೬೬೨ರಲ್ಲಿ ಚರಿತ್ರೆಕಾರ ಶಿಹಾಬುದ್ದೀನ್ ಅಸ್ಸಾಂಗೆ ಯುದ್ಧ ಯಾತ್ರೆ ಹೋಗಿದ್ದಾಗ ಹೀಗೆ ದಾಖಲಿಸಿದ್ದಾನೆ: ಅಸ್ಸಾಂ ಸುತ್ತಮುತ್ತಲಿನ ಪರ್ವತಗಳಲ್ಲಿ ವಾಸಿಸುವವರಲ್ಲಿ ಹೆಚ್ಚಾಗಿ ನಾಗಾಗಳಿದ್ದು, ಅಸ್ಸಾಂ ರಾಜರಿಗೆ ಯಾವುದೇ ಕಪ್ಪ ನೀಡುತ್ತಿಲ್ಲ. ಆದರೂ ಇವರೆಲ್ಲ ಅಸ್ಸಾಮ್ ರಾಜರ ಆಜ್ಞೆಗೆ ಎದುರು ಹೇಳುವುದಿಲ್ಲ. ಆಹೋಂ ಜನರು ಅನುಸರಿಸುತ್ತಿದ್ದ ಸಮಾನತೆಯಿಂದ, ಅಂದರೆ ಜಾತಿಭೇದಗಳನ್ನು ತೋರದಿದ್ದ ಕಾರಣ ಇದನ್ನೆಲ್ಲ ಸಾಧಿಸಿದ್ದರು. ಹಾಗಾಗಿ ಅಸ್ಸಾಮಿ, ನಾಗಾ ಇತರ ಬುಡಕಟ್ಟು ಜನರು ಒಟ್ಟಾಗಿ ಕುಳಿತು ಊಟ ಮಾಡುತ್ತಿದ್ದರು. ಮೀಕಿರ್ ಜನಾಂಗದ ಜನರು ನಾವು ತಿನ್ನುವ ಆಹಾರವನ್ನೆ ತಿನ್ನುತ್ತಿದ್ದರು. ಹಾಗಾಗಿ ಅವರು ನಮ್ಮದೆ ಭ್ರಾತೃತ್ವಕ್ಕೆ ಸೇರಿದವರು ಎನ್ನುತ್ತಿದ್ದರು. ಇದು ಈಶಾನ್ಯ ವಲಯದ ವಿಶೇಷತೆಯೂ ಹೌದು. ಇಲ್ಲಿ ಎಲ್ಲ ರೀತಿಯ ತೊಡಕುಗಳಿದ್ದರೂ ಪರ್ವತಗಳಲ್ಲಿ ಜಾತಿ, ಅಸ್ಪೃಶ್ಯತೆ ಎನ್ನುವ ಭೇದಭಾವ ಇಂದಿಗೂ ವರದಿಯಾಗಿಲ್ಲ. ಇದು ಮೈನ್‌ಲ್ಯಾಂಡ್ ಭಾರತಕ್ಕೆ ನುಂಗಲಾರದ ಒಂದು ತುತ್ತಾಗಿ ಪರಿಣಮಿಸಿದೆ. ಮತೀಯ ಗಲಭೆಗಳನ್ನು ಹುಟ್ಟುಹಾಕಿ ಮನುಷ್ಯ ಮನುಷ್ಯರ ನಡುವೆ ಕೊಳ್ಳಿ ಇಡುವ ಶಕ್ತಿಗಳು ಈ ಕಡೆಗೆ ಇನ್ನೂ ತಲೆ ಇಟ್ಟು ಮಲಗುವ ಯೋಚನೆಯನ್ನು ಮಾಡಿಲ್ಲ. ಆದರೆ ಬಿಜೆಪಿ ಎಂಬ ಕೇಸರಿನ ಕಮಲದ ಪಕ್ಷ ಕಳ್ಳ ಹೆಜ್ಜೆಗಳನ್ನಿಟ್ಟು ಅಸ್ಸಾಂವರೆಗೂ ತಲೆ ಹಾಕಿ ಕುಳಿತಿದೆ. ಆದರೆ ಒಂದಂತೂ ಗ್ಯಾರಂಟಿ. ಇದು ಯಾವುದೇ ಮತೀಯ ಕಲಹಗಳನ್ನು ತೆರೆಮರೆಯಲ್ಲಿ ಹೆಣೆದರೂ ಎದೆಯಲ್ಲಿ ಗುಂಡು ನಾಟಿಕೊಳ್ಳುತ್ತದೆ.



**ಈಶಾನ್ಯ ಉಗ್ರ ಗುಂಪುಗಳು**

ದೇಶದ ಈಶಾನ್ಯ ಭಾಗ ಚೀನಾ, ಭೂತಾನ್, ಮಿಯಾನ್ಮಾರ್ ಮತ್ತು ಬಾಂಗ್ಲಾ ದೇಶಗಳ ಗಡಿಗಳಿಂದ ಸುತ್ತುವರಿದಿದ್ದು ಬಾಂಗ್ಲಾದೇಶೀಯರ ವಲಸೆ ಹಂತ ಹಂತವಾಗಿ ಈ ವಲಯಕ್ಕೆ ಹರಿದು ಬರುತ್ತಿದೆ. ಈ ಭಾಗ ಹಿಮಾಲಯದ ಒಂದು ತುಂಡಾಗಿದ್ದು ಮತ್ತು ದೇಶದ ಮೈನ್‌ಲ್ಯಾಂಡ್‌ನಿಂದ ಭೌಗೋಳಿಕವಾಗಿ ಪ್ರತ್ಯೇಕಗೊಂಡಿದ್ದು, ಭಾವನಾತ್ಮಕವಾಗಿಯೂ ಪರಕೀಯವಾಗಿ ನರಳುತ್ತಿದೆ. ಈ ವಲಯ ಸ್ವಾತಂತ್ರ್ಯ ಪೂರ್ವದಿಂದಲೂ ಉಗ್ರವಾದಿಗಳ ಕೋಟೆಯಾಗಿದ್ದು ಮಿಲಿಟರಿ ಕೂಡ ನಿಯಂತ್ರಿಸಲಾಗದೆ ದೊಡ್ಡ ಸಮಸ್ಯೆಯಾಗಿ ಪರಿಣಮಿಸಿದೆ.

ಪ್ರಸ್ತುತ ಮುಖ್ಯವಾಗಿ ನಾಲ್ಕು ರಾಜ್ಯಗಳಲ್ಲಿ (ಅಸ್ಸಾಂ, ಮಣಿಪುರ, ನಾಗಾಲ್ಯಾಂಡ್

ಮತ್ತು ತ್ರಿಪುರಾಗಳಲ್ಲಿ) ಹೆಚ್ಚು ಕಡಿಮೆ ಸಣ್ಣ ಪ್ರಮಾಣದ ಯುದ್ಧವೆ ನಡೆಯುತ್ತಿದೆ. ಬಂಡುಕೋರರ ಉದ್ದೇಶಗಳು ಮತ್ತು ಸಮಸ್ಯೆಗಳು ರಾಜ್ಯದಿಂದ ರಾಜ್ಯಕ್ಕೆ ಬೇರೆ ಬೇರೆಯಾಗಿವೆ. ಕೆಲವರು ಪ್ರತ್ಯೇಕ ರಾಜ್ಯಗಳನ್ನು ಕೋರಿದರೆ, ಇನ್ನು ಕೆಲವರು ಸರಕಾರದ ಎಲ್ಲ ವ್ಯವಹಾರಗಳನ್ನು ಹೊರಗಿಟ್ಟು ತಾವೇ ಎಲ್ಲವನ್ನು ಕೈಗೆ ತೆಗೆದುಕೊಳ್ಳಲು ಹವಣಿಸುತ್ತಿದ್ದಾರೆ. ಇನ್ನೂ ಕೆಲವರು ತಮ್ಮದೆ ದೇಶಗಳನ್ನು ಸ್ಥಾಪಿಸಿಕೊಳ್ಳಲು ಹೋರಾಟ ನಡೆಸುತ್ತಿರುವುದಾಗಿ ಹೇಳಿಕೊಳ್ಳುತ್ತಾರೆ. ಕೆಲವು ಗುಂಪುಗಳು ರಾಜಕೀಯವಾಗಿ ಸಂಧಾನ ಮಾಡಿಕೊಳ್ಳಲು ಯೋಚಿಸುತ್ತಿದ್ದರೂ ಯಾವುದೇ ಸಾಧನೆಯೂ ಆಗದು ಎಂಬ ತೀರ್ಮಾನಕ್ಕೆ ಬಂದಿವೆ. ಕೇಂದ್ರ ಸರಕಾರದ ಎಲ್ಲ ರೀತಿಯ ಪ್ರಯತ್ನಗಳು ಇದುವರೆವಿಗೂ ಸೋಲನ್ನೆ ಕಂಡಿವೆ. ಸರಕಾರ ನಡೆಸಿದ ಮಿಲಿಟರಿ ಕಾರ್ಯಾಚರಣೆಗಳೂ ಯಶಸ್ವಿಯಾಗಿಲ್ಲ. ಕಾರಣ: ಇದು ಕಾಡು ಮೇಡುಗಳ ಪ್ರದೇಶವಾಗಿದ್ದು ಸ್ಥಳೀಯರ ಅಸಹಕಾರ, ಬಂಡುಕೋರರಿಗೆ ಆಶ್ರಯ ನೀಡುವುದು, ಗಡಿ ಭಾಗಗಳಲ್ಲಿ ಉಗ್ರರು ಹೊಂದಿರುವ ಸಂಬಂಧಗಳು, ರಾಜಕೀಯ ಅಸ್ಥಿರತೆಗಳು. ಇದರ ಜೊತೆಗೆ ಈಗಾಗಲೆ ಈ ಭಾಗದಲ್ಲಿನ ಗೊಂದಲದ ಸ್ಥಿತಿ ಮತ್ತು ಸ್ಥಳೀಯರ ವಿರೋಧ, ೧೯೪೭ರಿಂದಲೂ ಕುಂಟುತ್ತ ನಡೆಯುತ್ತಿರುವ ಅಭಿವೃದ್ಧಿ ಯೋಜನೆಗಳು, ನಿರಂತರವಾಗಿ ಬಾಂಗ್ಲಾ ದೇಶ ಮತ್ತು ಇತರ ರಾಜ್ಯಗಳಿಂದ ಬರುತ್ತಿರುವ ವಲಸೆಗಾರರ ಸಮಸ್ಯೆಗಳು ಇತ್ಯಾದಿ ಹಾಗೂ ಹೊಸ ಹೊಸ ರಾಜ್ಯಗಳು ಸೃಷ್ಟಿಯಾದಾಗಲೂ ಸರಿಯಾದ ನಿರ್ಣಯಗಳನ್ನು ತೆಗೆದುಕೊಳ್ಳದೆ ಹೋಗಿದ್ದು. ೧೯೫೦ರಲ್ಲಿ ಸಂಭವಿಸಿದ ಭೀಕರ ಭೂಕಂಪನದಿಂದ ಈಶಾನ್ಯ ವಲಯದ ನೂರಾರು ಅಣೆಕಟ್ಟುಗಳು ಮುರಿದು ಬಿದ್ದವು. ಬ್ರಹ್ಮಪುತ್ರಾ ನದಿಯೆ ಹತ್ತಾರು ಕಡೆ ತನ್ನ ದಿಕ್ಕನ್ನು ಬದಲಿಸಿಕೊಂಡದ್ದರಿಂದಾಗಿ ಅಪಾರ ಆಸ್ತಿ ಮತ್ತು ಪ್ರಾಣ ಹಾನಿಯಾಗಿತ್ತು.

ದಿಲ್ಲಿಯಲ್ಲಿ ರೂಪಗೊಳ್ಳುತ್ತಿದ್ದ ಅಭಿವೃದ್ಧಿ ಯೋಜನೆಗಳ ಬಗ್ಗೆ ಸ್ಥಳೀಯರಿಗೆ ಏನೇನೂ ಮಾಹಿತಿ ದೊರಕುತ್ತಿರಲಿಲ್ಲ. ಸ್ಥಳೀಯರ ಸಹಕಾರ ಮತ್ತು ಸಲಹೆಗಳನ್ನು ಪಡೆಯದ ಕಾರಣ ಯೋಜನೆಗಳೆಲ್ಲ ಸಾಮಾನ್ಯ ಜನರಿಂದ ದೂರವಾಗಿಯೇ ಉಳಿದುಕೊಂಡವು. ಕಾರಣ ಕೇಂದ್ರ ಸರಕಾರದ ಯಾವುದೇ ಅಣೆಕಟ್ಟು, ಗಣಿಗಾರಿಕೆ, ಕಾರ್ಖಾನೆ ಮತ್ತು ಮೂಲಭೂತ ಸೌಕರ್ಯ ಯೋಜನೆಗಳಿಗೆ ಸ್ಥಳೀಯರ ಸಹಕಾರದ ಬದಲಿಗೆ ವಿರೋಧಗಳು ಹುಟ್ಟಿಕೊಳ್ಳುತ್ತಿದ್ದವು. ಕಳೆದ ೫-೬ ದಶಕಗಳಿಂದಲೂ ವಿಧ ವಿಧ ಕೋನಗಳಿಂದ ಸಾಂಸ್ಕೃತಿಕ, ರಕ್ಷಣೆ, ರಾಜಕೀಯ ಮತ್ತು ಅಭಿವೃದ್ಧಿ ಯೋಜನೆಗಳನ್ನು ರೂಪಿಸಿದರೂ ಯಾವುದೇ ಒಂದು ಯೋಜನೆಯೂ ಪೂರ್ಣಗೊಂಡು ಜನರನ್ನು ಮುಟ್ಟಲಿಲ್ಲ. ಸರಕಾರದ ಸೋಲಿನ ಆಡಳಿತ ಮತ್ತು ಜನರ ಅತ್ಯಂತ ಹತಾಶೆಯ ಕಾರಣ ಬಂಡುಕೋರರ ವಿರೋಧ ಇಂದಿಗೂ ಮುಂದುವರಿದಿದ್ದು ಅಭಿವೃದ್ಧಿಗೆ ಹಿನ್ನಡೆಯಾಗಿದೆ. ಈಶಾನ್ಯ ಭಾಗದ ವಿಶಾಲತೆ ಮತ್ತು ಅದರ ಆಯಕಟ್ಟಿನ ಪ್ರಾಮುಖ್ಯತೆಯನ್ನು ಸರಿಯಾಗಿ ನಿರ್ಧರಿಸದ ಕಾರಣ ಕೇವಲ ೨೪ ಎಂಪಿಗಳನ್ನು ಮಾತ್ರ ಲೋಕಸಭೆಗೆ ಆಯ್ಕೆ ಮಾಡುತ್ತದೆ. ಮತದ ರಾಜಕಾರಣದಿಂದ ಈ ಭಾಗವನ್ನು ನಿರ್ಲಕ್ಷಿಸಲಾಗಿದೆ. ಲೋಕಸಭೆಗೆ ಆಯ್ಕೆಯಾಗುವವರ ಸಂಖ್ಯೆಯನ್ನು ಆಯಾ ರಾಜ್ಯಗಳ ಜನಸಂಖ್ಯೆಯ ಆಧಾರದಿಂದ ನಿರ್ಣಯಿಸಲಾಗಿದ್ದು ಬಿಹಾರ್ ಮತ್ತು ಉತ್ತರ ಪ್ರದೇಶ ರಾಜ್ಯಗಳಿಗೆ ಹೋಲಿಸಿದಾಗ ಇದು ತೀರ ನಗಣ್ಯ.

ಈಶಾನ್ಯ ಭಾಗದಲ್ಲಿ ಕೆಲಸ ನಿರ್ವಹಿಸುವ ಹೊರ ರಾಜ್ಯಗಳ ಅಧಿಕಾರಿಗಳು ಈ ಭಾಗದಲ್ಲಿ ಕೆಲಸ ಮಾಡುವುದೆಂದರೆ ಅದೊಂದು ಶಿಕ್ಷೆ ಎಂದೇ ಭಾವಿಸುವಾಗ ಅವರಿಂದ ಏನು ತಾನೆ ನಿರೀಕ್ಷಿಸಲು ಸಾಧ್ಯ, ಎಂಬಂತಹ ಪ್ರಶ್ನೆಗಳು ಕೇಳಿಬರುತ್ತವೆ. ಸ್ಥಳೀಯರಲ್ಲಿ ಅಧಿಕಾರಿಗಳ ಸಂಖ್ಯೆ ತೀರ ಕಡಿಮೆ ಇರುವ ಕಾರಣ ಕೇಂದ್ರ ಸರಕಾರ, ಮೆತ್ತಗಿರುವ ಅಧಿಕಾರಿಗಳನ್ನು (ರಾಜಕೀಯ ಸಂಬಂಧ ಇರುವವರು ಯಾರೂ ಬರುವುದಿಲ್ಲ) ೨-೩ ವರ್ಷಗಳ ಕಾಲ ಈಶಾನ್ಯಕ್ಕೆ ಕಡ್ಡಾಯವಾಗಿ ಕಳುಹಿಸುತ್ತದೆ. ಇದರ ಜೊತೆಗೆ ಸರಕಾರದ ಯಾವ ಕಾನೂನುಗಳೂ ಇಲ್ಲಿ ನಡೆಯುವುದಿಲ್ಲ. ಅಧಿಕಾರಿಗಳಿಗೆ ರಕ್ಷಣೆಯೂ ದೊರಕುವುದಿಲ್ಲ. ಎಲ್ಲವೂ ಸ್ವಯಂ ಆಡಳಿತದ ರಾಜ್ಯಗಳು. ವಿಚಿತ್ರ ಮತ್ತು ಆಶ್ಚರ್ಯ ಎಂದರೆ ಸರಕಾರಕ್ಕೆ ಸೇರಿದ ಆಸ್ತಿ ಯಾವುದೂ ಇಲ್ಲ. ಭೂಮಿ ಅರಣ್ಯ ಎಲ್ಲವೂ ಆಯಾ ಹಳ್ಳಿಗೆ ಸೇರಿದ ಆಸ್ತಿ. ಜನರೇ ಎಲ್ಲವನ್ನೂ ತೀರ್ಮಾನಿಸುತ್ತಾರೆ. ಸರಕಾರ ಯಾವುದಾದರೂ ಕಟ್ಟಡ ಕಟ್ಟಬೇಕಾದರೂ ಹಳ್ಳಿಯ ಜನರಿಂದ ಒಪ್ಪಿಗೆ ಪಡೆದು ಕೇಳಿದಷ್ಟು ಹಣ ನೀಡಿ ಭೂಮಿಯನ್ನು ಕೊಂಡುಕೊಳ್ಳಬೇಕು, ೯೯ ವರ್ಷ ಲೀಸ್ ಕರಾರಿನಂತೆ. ಹಳ್ಳಿಗರು ತಮ್ಮ ಜಮೀನು ಎಂದು ಗೆರೆಗಳನ್ನು ಹಾಕಿ ಕೊಂಡಿರುವ ಕಾಡನ್ನು ಕಡಿದು ಯಾರಿಗೆ ಬೇಕಾದರೂ ಮಾರಬಹುದು. ಖನಿಜ ಸಂಪತ್ತಿದ್ದರೂ ಅವರೇ ವಾರಸುದಾರರು. ಮೇಘಾಲಯ ರಾಜ್ಯದಲ್ಲಿ ಹೇರಳ ಕಲ್ಲಿದ್ದಲಿರುವ ಜಮೀನು ಒಡೆಯರಿಂದ ವ್ಯಾಪಾರಿಗಳು ಕೊಂಡುಕೊಂಡು ಹೋಗುತ್ತಾರೆ. ಕೇಂದ್ರ ಸರಕಾರದ ಅಧೀನದಲ್ಲಿರುವ ಯುರೇನಿಯಂ ಖನಿಜ ನಿಕ್ಷೇಪಗಳನ್ನು ಸಹ ಮೇಘಾಲಯದಲ್ಲಿ ಸ್ಥಳೀಯ ರಾಜಕಾರಣಿಗಳು ಮತ್ತು ವ್ಯಾಪಾರಿಗಳು ಬಾಂಗ್ಲಾದೇಶದ ಮೂಲಕ ಬೇರೆ ದೇಶಗಳ ಏಜಂಟರಿಗೆ ರಾಜಾರೋಷವಾಗಿಯೇ ಮಾರುತ್ತಿದ್ದಾರೆ. ಕೇಂದ್ರ ಸರಕಾರ ಏನೂ ಗೊತ್ತಿಲ್ಲದಂತೆ ಕಣ್ಣು ಮುಚ್ಚಿ ಕುಳಿತುಕೊಂಡಿದೆ. ಸರಕಾರದ ನೀತಿಯಂತೆ ಹೊರ ರಾಜ್ಯಗಳ ಜನರು ಒಂದು ಚೂರು ನೆಲವನ್ನೂ ಇಲ್ಲಿ ಕೊಂಡುಕೊಳ್ಳುವಂತಿಲ್ಲ. ಸ್ಥಳೀಯ ಅಧಿಕಾರಿಗಳು, ವ್ಯಾಪಾರಿಗಳು, ಹಣವಂತರು, ರಾಜಕಾರಣಿಗಳು ಯಾರೂ ಒಂದು ರೂ. ತೆರಿಗೆ ನೀಡುವಂತಿಲ್ಲ. ಆದರೆ ಇತರೆ ರಾಜ್ಯಗಳಿಂದ ವರ್ಗವಾಗಿ ಬರುವ ಅಧಿಕಾರಿಗಳು ಮಾತ್ರ ತೆರಿಗೆ ನೀಡಬೇಕಾಗುತ್ತದೆ. ಇನ್ನು ಈ ರಾಜ್ಯಗಳು ಅಭಿವೃದ್ಧಿ ಹೊಂದುವುದಾದರೂ ಹೇಗೆ? ಕೆಲವರಂತೂ ದೇಶದ ಇತರ ಭಾಗಗಳಲ್ಲಿ ಇರುವ



ವೃಂದಗಾನ - ಸ್ವಾತಂತ್ರ್ಯ ದಿನಾಚರಣೆ



ಬಿಹೂ ನೃತ್ಯ

ಕುಬೇರರಂತೆ ಇಲ್ಲಿಯೂ ರಾರಾಜಿಸುತ್ತಿದ್ದಾರೆ. ಅವರ ಮಕ್ಕಳು ದೇಶದ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಮಸ್ತಿ ಮಾಡುತ್ತಿದ್ದಾರೆ. ಶಿಲ್ಲಾಂಗ್‌ನ ಪ್ರತಿ ಎರಡನೇ ಮನೆಯ ಒಬ್ಬ ವಿದ್ಯಾರ್ಥಿ ಬೆಂಗಳೂರಿನಲ್ಲಿ ವ್ಯಾಸಂಗ ಮಾಡುತ್ತಿದ್ದಾನೆ.

ಕೇಂದ್ರ ಸರಕಾರ ನೂರಾರು ಮಿಲಿಟರಿ ತುಕಡಿಗಳನ್ನು ನೇಮಿಸಿ ಎಲ್ಲವನ್ನು ಹಿಡಿತದಲ್ಲಿ ಇಡುವಂತೆ ಆದೇಶ ನೀಡಿದ್ದರೂ ಅವುಗಳಿಗೆ ಸರಿಯಾದ ಹಕ್ಕುಗಳನ್ನು ಮಾತ್ರ ನೀಡಿಲ್ಲ. ಎಲ್ಲ ಕಾನೂನುಗಳನ್ನು ಮಹಾತ್ಮಾ ಗಾಂಧಿಜೀ ಅವರ ನೆಚ್ಚಿನ ಮೂರು ಕೋತಿಗಳ ದೃಷ್ಟಿಕೋನಗಳಿಗನುಸಾರವಾಗಿ ಅನ್ವಯಿಸಲಾಗುತ್ತದೆ. ೧೯೪೭ರಿಂದ ೨೦೦೭ರವರೆಗೆ ಮಿಲಿಟರಿ, ಪೊಲೀಸರು ಮತ್ತು ಉಗ್ರರ ಘರ್ಷಣೆಗಳಿಂದ ಈಶಾನ್ಯದಲ್ಲಿ ೫೦,೦೦೦ ಜನರು ಪ್ರಾಣ ಕಳೆದುಕೊಂಡಿದ್ದಾರೆ. ೨೮,೫೦೦ಕ್ಕಿಂತ ಹೆಚ್ಚು ಜನರು ಇವರ ಸಹವಾಸವೇ ಬೇಡವೆಂದು ಸ್ಥಳ ಬಿಟ್ಟು ಬೇರೆ ಕಡೆಗೆ ವಲಸೆ ಹೋಗಿದ್ದಾರೆ. ಮಿಲಿಟರಿ ತುಕಡಿಗಳನ್ನು ಹೆಚ್ಚಿಸಿ ಬಂಡುಕೋರರನ್ನು ಮಟ್ಟಹಾಕುವ ಆಲೋಚನೆ ಫಲಿಸುವಂತೆ ತೋರುತ್ತಿಲ್ಲ. ಉಗ್ರರು ದಂಗೆ ಏಳುತ್ತಿರುವುದು ಕಾನೂನಿನ ಸಡಿಲತೆಯಿಂದ ಎನ್ನುವುದು ಆಡಳಿತದ ಅಭಿಪ್ರಾಯ. ಆದರೆ ಸಮಸ್ಯೆಯ ಬೇರುಗಳಿರುವುದು ಚಾರಿತ್ರಿಕವಾಗಿ ನಡೆದಿರುವ ಸಾಮಾಜಿಕ ಅನ್ಯಾಯದಿಂದ. ಬುಡಕಟ್ಟು ಜನರ ಸೂಕ್ಷ್ಮ ಜನಾಂಗೀಯ ಸಮತೋಲನೆಯನ್ನು ದೇಶದ ಆಡಳಿತ ಇದುವರೆಗೂ ಗಮನಿಸಿಲ್ಲ. ಇಲ್ಲಿನ ಚಾರಿತ್ರಿಕ ಸಮಸ್ಯೆಗಳು ಬಂಡುಕೋರರನ್ನು ಹುರಿದುಂಬಿಸುತ್ತಲೇ ಬಂದಿವೆ. ಮೂಲಭೂತ ಸಮಸ್ಯೆಗಳನ್ನು ಇಲ್ಲಿನ ಜನರೊಂದಿಗೆ ನೇರವಾಗಿ ಚರ್ಚಿಸಬೇಕಿದೆ. ಆದರೆ ಅದರ ಬದಲು ಕೇಂದ್ರ ಮತ್ತು ರಾಜ್ಯ ಸರಕಾರಗಳ ಅಧಿಕಾರಿಗಳು ಮುಚ್ಚುಮರೆಯಲ್ಲಿ ಬಂಡುಕೋರರ ಜೊತೆಗೆ ತಾತ್ಕಾಲಿಕ ಒಪ್ಪಂದಗಳನ್ನು ಮಾಡಿಕೊಳ್ಳುತ್ತಿರುವುದರಿಂದ ಯಾವ ಫಲಿತಾಂಶವೂ ದೊರಕಿಲ್ಲ.

ಉಗ್ರರ ಕೆಲವು ಗುಂಪುಗಳು ಸ್ವಯಂ ಆಡಳಿತವನ್ನು ಅಪೇಕ್ಷಿಸುವುದರೊಂದಿಗೆ ರಾಜ್ಯ, ಜಿಲ್ಲೆ ಅಥವಾ ಒಂದು ಬುಡಕಟ್ಟು ಜನರು ವಾಸಿಸುವ ಪ್ರದೇಶವನ್ನು ಆಯ್ಕೆ ಮಾಡಿಕೊಂಡು ಘರ್ಷಣೆಗೆ ಇಳಿದರೆ, ಇನ್ನು ಕೆಲವು ಜನಾಂಗೀಯ ಗುಂಪುಗಳು ನೆಲಕ್ಕಾಗಿ ರಕ್ತ ಸುರಿಸಲು ಅಂಜದೆ ಹೋರಾಡುತ್ತಿವೆ. ಕೆಲವು ಕಡೆ ವಲಸೆ ಬಂದಿರುವ ಬಾಂಗ್ಲಾ ದೇಶಿಯರ ವಿರುದ್ಧ ಸ್ಥಳೀಯರು ಹೋರಾಡುತ್ತಿದ್ದಾರೆ. ೨೦೦೭ ರಲ್ಲಿ ಅಸ್ಸಾಂ ಜನರು ಹಿಂದಿ ಮಾತನಾಡುವ ಬಿಹಾರಿಗಳ ವಿರುದ್ಧ ಹಿಂಸೆ ನಡೆಸಿದ್ದರು. ಇವರೆಲ್ಲ ದಶಕಗಳ ಹಿಂದಿನಿಂದಲೂ ಇಲ್ಲಿ ನೆಲೆಯೂರಿದ್ದು ಅವರಿಗೆ ಬಿಹಾರದಲ್ಲಿ ಯಾವುದೇ ನೆಲವಿಲ್ಲ. ೨೦೦೮ರಲ್ಲಿ ಬಾಂಗ್ಲಾ ದೇಶಿಯರ ವಿರುದ್ಧ ಹೋರಾಟಗಳು ನಡೆದವು. ಅವರೆಲ್ಲ ಸ್ಥಳೀಯರ ಕೆಲಸಗಳನ್ನು ಕಸಿದುಕೊಂಡು ವ್ಯಾಪಾರದಲ್ಲಿ ತೊಡಗಿದ್ದಾರೆ ಎನ್ನುವುದು ಇಲ್ಲಿಯವರ ದೂರು. ಒಟ್ಟಿನಲ್ಲಿ ಘರ್ಷಣೆಗೆ ಕಾರಣಗಳು ಅನೇಕ ಮತ್ತು ವಿವಿಧ. ಜೊತೆಗೆ ಈಶಾನ್ಯ ವಲಯ ಮೈನ್‌ಲ್ಯಾಂಡ್‌ನಿಂದ ದೂರ ಇರುವುದಲ್ಲದೆ ನವದೆಹಲಿಯ ನೀತಿಗಳು ವಿಚಿತ್ರವಾಗಿ ಇರುತ್ತವೆ. ಬುಡಕಟ್ಟು ಜನರ ಸಂಸ್ಕೃತಿ, ವಿಭಿನ್ನ ಸಾಮಾಜಿಕ ಕಟ್ಟಳೆಗಳು, ಜನಾಂಗೀಯ ಭಿನ್ನತೆಗಳು ವಿವಿಧತೆಯಿಂದ ಕೂಡಿವೆ. ಮತಾಂತರ ಚಟುವಟಿಕೆಗಳು ನಿರಂತರವಾಗಿ ನಡೆದಿವೆ. ನಾಗಾಲ್ಯಾಂಡ್, ಮೇಘಾಲಯ, ಮಣಿಪುರ (ಲೋಕ್‌ಟಕ್ ಕಣಿವೆ ಬಿಟ್ಟು)ಗಳಲ್ಲಿ ಹೆಚ್ಚು ಕ್ರೈಸ್ತರೆ ಇದ್ದಾರೆ. ತ್ರಿಪುರಾ, ಮಿಜೋರಾಂ ರಾಜ್ಯಗಳಲ್ಲೂ ಬಹಳಷ್ಟು ಜನರು ಈಗಾಗಲೆ ಕ್ರೈಸ್ತರಾಗಿದ್ದಾರೆ. ಅಸ್ಸಾಂ ಮತ್ತು ಅರುಣಾಚಲ ಪ್ರದೇಶದಲ್ಲೂ ಕ್ರೈಸ್ತರಿದ್ದು ಈಗಲೂ ಮತಾಂತರ ನಡೆಯುತ್ತಿದೆ. ಒಟ್ಟಿನಲ್ಲಿ ಈಶಾನ್ಯ ವಲಯವು ಭಾಷೆ ಕುರಿತ ಘರ್ಷಣೆಗಳು, ಜನಾಂಗೀಯ ಕಲಹಗಳು ಮತ್ತು ಮತಾಂತರ ಚಟುವಟಿಕೆಗಳ ಸಂಕೀರ್ಣ ಮತ್ತು ಅತಿ ಕ್ಲಿಷ್ಟ ವಲಯವಾಗಿದೆ.

**ಚಾರಿತ್ರಿಕ ಹಿನ್ನೆಲೆ**

ಚರಿತ್ರೆಯನ್ನು ಕೆದುಕುತ್ತಾ ಹೋದಂತೆ ಇಲ್ಲಿನ ಜಟಿಲ ಸಮಸ್ಯೆಗಳ ಮೂಲ ಹಂತಹಂತವಾಗಿ ತೆರೆದುಕೊಳ್ಳುತ್ತದೆ. ೧೮೨೬ರಲ್ಲಿ ಬ್ರಿಟಿಷರು ಇಲ್ಲಿಗೆ ಕಾಲಿಟ್ಟಾಗಿನಿಂದ ಎಲ್ಲವೂ ನಿಖರವಾಗಿ ದಾಖಲಾಗಿದೆ. ೧೯೪೭ರಲ್ಲಿ ವಿಭಾಗಗೊಂಡ ಪೂರ್ವ ಪಾಕಿಸ್ತಾನದಿಂದ ಇನ್ನಷ್ಟು ಸಮಸ್ಯೆಗಳು ಉಲ್ಬಣಗೊಂಡವು. ಪ್ರಾರಂಭದಿಂದಲೂ ಈ ವಲಯ ನವದೆಹಲಿಯ ಹಿಡಿತಕ್ಕೆ ಒಳಗೊಳ್ಳಲಿಲ್ಲ. ಬ್ರಿಟಿಷರ ಕಾಲದಿಂದಲೂ ಈ ವಲಯವನ್ನು ಒಂದು ಮೃಗಾಲಯವಾಗಿ ಮಾರ್ಪಡಿಸಲಾಗಿದೆ. ಅಂತಹ ಪ್ರದೇಶಗಳಿಗೆ ಅಲ್ಲಿನ ಬುಡಕಟ್ಟು ಜನರು ತಾವೇ ಸಂಪೂರ್ಣ ವಾರಸುದಾರರು. ಬ್ರಿಟಿಷರ ಕಾಲದಿಂದಲೂ ಈ ಪ್ರದೇಶಗಳಿಗೆ ಸ್ವಾಯತ್ತತೆ ನೀಡಿ ಭಾರತದ ಇತರರು ಈ ಭಾಗಗಳಿಗೆ ಹೋಗದಂತೆ ನಿರ್ಬಂಧ ವಿಧಿಸಲಾಗಿತ್ತು. ಅದೇ ರೀತಿ ಬುಡಕಟ್ಟು ಜನಾಂಗಗಳು ಭಾರತದ ಇತರ ಭಾಗಗಳಿಗೆ ಹೋಗದಂತೆ ನೋಡಿಕೊಳ್ಳಲಾಯಿತು. ಅಂದರೆ ಇವರನ್ನು ಮುಖ್ಯ ಭಾರತದಿಂದ ದೂರ ಇಡಲಾಯಿತು. ಇದಕ್ಕೆ ಕಾರಣ ಇಂಗ್ಲೆಂಡಿನಲ್ಲಿ ನಿರ್ಧಾರವಾಗುತ್ತಿದ್ದ ಬ್ರಿಟಿಷರ ಆರ್ಥಿಕ ಹಿತಾಸಕ್ತಿಯ ಮೋಸಗಾರಿಕೆ. ಒಟ್ಟಿನಲ್ಲಿ ಬುಡಕಟ್ಟು ಜನರು ಮತ್ತು ಭಾರತದ ಇತರ ಭಾಗಗಳ ನಡುವೆ ಅಜಗಜಾಂತರ ವ್ಯತ್ಯಾಸವನ್ನು ನಿರ್ಮಾಣ ಮಾಡಲಾಯಿತು. ಹಾಗಾಗಿ ಈಶಾನ್ಯ ವಲಯವನ್ನು ಬಯಲು ಪ್ರದೇಶಗಳಿಗೆ ಹೋಲಿಸಿದಾಗ ಯಾವುದೇ ಆರ್ಥಿಕ ಅಭಿವೃದ್ಧಿ ಇಲ್ಲದೆ ತೀರ ಹಿಂದುಳಿದಿರುವುದು ಕಂಡುಬರುತ್ತದೆ. ಇಲ್ಲಿಂದಲೇ ಇಬ್ಬರ ನಡುವೆ ಈರ್ಷೆ ಮತ್ತು ಅಸೂಯೆ ಬೆಳೆಯುತ್ತಾ ಹೋಯಿತು. ಈಶಾನ್ಯದಲ್ಲಿ ಸ್ವಲ್ಪಮಟ್ಟಿಗಿನ ಬೆಳವಣಿಗೆ ಕಂಡಿದ್ದರೆ ಅದು ಬ್ರಹ್ಮಪುತ್ರಾ ನದಿಯ ಇಕ್ಕೆಲಗಳಲ್ಲಿ ಮಾತ್ರ ಕ್ರೋಡೀಕರಣಗೊಂಡಿತು. ಸಾವಿರಾರು ಎಕರೆಗಳ ಚಹಾ ತೋಟಗಳನ್ನು ಕೆಳತಪ್ಪಲುಗಳ ಮೇಲೆ ಬೆಳೆಸಲಾಯಿತು. ಬ್ರಿಟಿಷರಿಗೆ ಇದು ವರವಾಗಿ ಪರಿಣಮಿಸಿತ್ತು. ಪರ್ವತಗಳ ವಿವಿಧ ಬುಡಕಟ್ಟು ಜನರ ಜೊತೆಗೆ ಹೋರಾಡುವ ಬದಲು ಈಶಾನ್ಯದ ಬ್ರಹ್ಮಪುತ್ರಾ ಬಯಲು ಪ್ರದೇಶದಲ್ಲಿ ನೆಲೆ ನಿಂತರು. ಕೂಲಿ ಕೆಲಸಕ್ಕೆ ಭಾರತದ ಇತರೆ ಭಾಗಗಳಿಂದ ಜನರನ್ನು ಕರೆಸಿಕೊಳ್ಳಲಾಯಿತು. ಬ್ರಿಟಿಷರಿಗೆ ದಟ್ಟ ಅರಣ್ಯ ಹಾಗೂ ಪರ್ವತಗಳನ್ನು ಮತ್ತು ಬುಡಕಟ್ಟು ಜನರನ್ನು ದಾಟಿ ಎದುರಾಳಿ ದೇಶಗಳಾದ ಚೀನಾ ಮತ್ತು ಜಪಾನ್‌ಗೆ ಬರುವುದು ಕಷ್ಟದ ಕೆಲಸವಾಗಿತ್ತು.

ಬ್ರಿಟಿಷರ ನೀತಿಯನ್ನೇ ಭಾರತವು ಮುಂದುವರಿಸಿಕೊಂಡು ಬಂದಿದೆ. ಬಿಳಿಯರ ನಂತರ ಭಾರತ ತನ್ನ ಯೋಜನೆಗಳನ್ನು ಪರಿಶೀಲಿಸಿ ತೀವ್ರ ಸೂಕ್ಷ್ಮ ಭೌಗೋಳಿಕ ವಲಯ ಮತ್ತು ಇಲ್ಲಿನ ಜನಾಂಗಗಳ ಸಂಕೀರ್ಣ ಸಮಸ್ಯೆಗಳನ್ನು ಸರಿಯಾದ ರೀತಿಯಲ್ಲಿ ನಿರ್ವಹಿಸಬೇಕಾಗಿತ್ತು. ಈಶಾನ್ಯದ ಶೇ. ೭೫ರಷ್ಟು ಭಾಗ ಅರಣ್ಯ ಮತ್ತು ಪರ್ವತಗಳಾದರೆ ಉಳಿದ ೨೫ ಭಾಗ ನಾಲ್ಕು ಬಯಲು ಪ್ರದೇಶಗಳಿಂದ ಕೂಡಿದೆ. ಅಸ್ಸಾಂನಲ್ಲಿ ಬ್ರಹ್ಮಪುತ್ರಾ ಬರಾಕ್ ಕಣಿವೆ ಇದೆ ಹಾಗೂ ತ್ರಿಪುರಾ ಮತ್ತು ಮಣಿಪುರ ಲೋಕ್‌ಟಕ್ ಬಯಲು ಪ್ರದೇಶಗಳನ್ನು ಹೊಂದಿವೆ. ಬಯಲು ಪ್ರದೇಶಗಳಲ್ಲಿ ಶೇ. ೮೦ರಷ್ಟು ಜನಸಂಖ್ಯೆ ಇದ್ದರೆ, ಪರ್ವತಗಳಲ್ಲಿ ೨೦ರಷ್ಟು ಜನಸಂಖ್ಯೆ ನೆಲೆಸಿದೆ. ಸರಕಾರ ಬುಡಕಟ್ಟು ಜನರಿಗಾಗಿ ಅನೇಕ ಯೋಜನೆಗಳನ್ನು ರೂಪಿಸುತ್ತಿದ್ದು ಅವೆಲ್ಲ ತಿರುಗು ಬಾಣದಂತಾಗಿ ಸರಕಾರದ ವಿರುದ್ಧವೆ ಎದ್ದುನಿಂತಿವೆ.



ಈಶಾನ್ಯದ ಯುವಜನರು



ನಾಗಾ ಬಿತ್ತನೆ ನೃತ್ಯ

ಜನಾಂಗೀಯ ದೃಷ್ಟಿಯಿಂದ ಬುಡಕಟ್ಟು ಜನರು ಎಂದು ಅವರನ್ನು ಕರೆಯುವುದೇ ತಪ್ಪು. ಅವರನ್ನು ಬುಡಕಟ್ಟು ಜನರು, ಅವರು ವಾಸಿಸುವ ನೆಲವನ್ನು ಬುಡಕಟ್ಟು ಪ್ರದೇಶ ಎಂದು ಕರೆಯುವುದರಿಂದಲೇ ಅವರಲ್ಲಿ ಇತರರು ಪರಕೀಯರು ಅಥವಾ ಶತ್ರುಗಳು ಎಂಬ ಭಾವನೆ ಹುಟ್ಟುತ್ತದೆ ಎನ್ನುತ್ತಾರೆ ಕೆಲವು ವಿದ್ವಾಂಸರು. ಪ್ರತ್ಯೇಕತೆ, ಸ್ವಯಂ ಆಡಳಿತ, ಸ್ವಾತಂತ್ರ್ಯ ಇತ್ಯಾದಿಯ ಜೊತೆಗೆ ತಮ್ಮ ಸಾಂಸ್ಕೃತಿಕ ವಿಶೇಷತೆ, ಪದ್ಧತಿ ಮತ್ತು ಬಲಿದಾನಗಳನ್ನು ಕಾಯ್ದುಕೊಳ್ಳಲು ಹಲವು ಜನಾಂಗೀಯ ಗುಂಪುಗಳು ಒಂದಾಗಿ ಹೋರಾಡುತ್ತಿವೆ. ಆಧುನಿಕತೆಯ ಆಗಮನ ಮತ್ತು ನಿರುದ್ಯೋಗ ಸಮಸ್ಯೆಗಳಿಂದಾಗಿ ಯುವಕರು ತಮ್ಮದೇ ಆದ ದಾರಿಗಳಲ್ಲಿ ಹೆಜ್ಜೆ ಹಾಕುತ್ತಿದ್ದಾರೆ. ಬುಡಕಟ್ಟು ಜನರು ತಮ್ಮತನವನ್ನು ಕಂಡುಕೊಳ್ಳಲು ಇತರೆ ಬುಡಕಟ್ಟುಗಳ ಜೊತೆಗೆ ಸೇರಿ ಹೊರಗಿನವರ ವಿರುದ್ಧ ದಂಗೆ ಎದ್ದಿದ್ದಾರೆ. ಚರಿತ್ರೆಯಲ್ಲೂ ಬುಡಕಟ್ಟು ಮತ್ತು ಉಪಬುಡಕಟ್ಟು ಜನರ ಮಧ್ಯೆ ಭಯಾನಕ ಯುದ್ಧಗಳೇ ನಡೆದಿವೆ.

ಪೂರ್ವ ಪಾಕಿಸ್ತಾನ ಹುಟ್ಟಿದ ದಿನದಿಂದಲೂ ಈ ವಲಯದಲ್ಲಿ ಇನ್ನಷ್ಟು ತೊಂದರೆಗಳು ಕಾಣಿಸಿಕೊಂಡವು. ಭಾರತದ ಇತರೆ ಭಾಗಗಳಿಂದ ಈಶಾನ್ಯ ವಲಯಕ್ಕೆ ಸುಗಮವಾಗಿ ಸಾಗುತ್ತಿದ್ದ ಸಾರಿಗೆ ಮತ್ತು ಆರ್ಥಿಕ ಸಂಬಂಧಗಳ ಸರಪಳಿ ಕಡಿದುಕೊಂಡಿತು. ಕಲಕತ್ತಾದಿಂದ ಈಶಾನ್ಯ ಭಾಗಕ್ಕೆ ಹೋಗಬೇಕಾದರೆ ಬಾಂಗ್ಲಾದೇಶ ಸುತ್ತಿಕೊಂಡು ಸುಮಾರು ೧೦೦೦-೧೫೦೦ ಕಿ.ಮೀ. ದೂರ ರಸ್ತೆ ಮತ್ತು ರೈಲು ರಸ್ತೆ ಸಾಗಬೇಕಿದೆ. ಬಾಂಗ್ಲಾ ದೇಶಕ್ಕೆ ಸ್ವಾತಂತ್ರ್ಯ ಗಳಿಸಿಕೊಟ್ಟ ಭಾರತ ಆ ದೇಶದ ಮೂಲಕ ಈಶಾನ್ಯಕ್ಕೆ ರಸ್ತೆ ಉಳಿಸಿಕೊಂಡಿದ್ದರೆ ಕೋಟ್ಯಂತರ ರೂ.ಗಳನ್ನು ಉಳಿಸಬಹುದಾಗಿತ್ತು. ನಮ್ಮ ದೇಶದ ರಾಜಕಾರಣಿಗಳು ಮತ್ತು ಆಡಳಿತಶಾಹಿಗಳಿಗೆ ಮುಂದಾಲೋಚನೆ ಎಂಬುದೇ ಇಲ್ಲ. ಪ್ರಸ್ತುತ ಈಶಾನ್ಯ ವಲಯ ಮುಖ್ಯವಾಗಿ ಮೂರು ತೊಂದರೆಗಳಿಂದ ನರಳುತ್ತಿದೆ. ಅವೆಂದರೆ ಬುಡಕಟ್ಟು ಜನರು/ರಾಜ್ಯಗಳು, ಬುಡಕಟ್ಟು ಜನರು/ಇತರೆ ಭಾಗಗಳ ಜನರು ಮತ್ತು ಬುಡಕಟ್ಟು/ಬುಡಕಟ್ಟುಗಳ ನಡುವಿನ ವಿಧ್ವಂಸಕರ ಕೃತ್ಯಗಳು.

ನೂರಾರು ಬಂಡುಕೋರ ಗುಂಪುಗಳ ಹೋರಾಟ, ಸಾರ್ವಜನಿಕರು ಮತ್ತು ಸಾರ್ವಜನಿಕ ಆಸ್ತಿಯ ಮೇಲೆ ಆಕ್ರಮಣ, ಜನರ ನಡುವೆ ದೊಂಬಿ ಎಬ್ಬಿಸುವುದು ಮಾಮೂಲಿನ ವಿಷಯವಾಗಿಬಿಟ್ಟಿದೆ. ಮಿಲಿಟರಿ, ಪೊಲೀಸರ ಆಕ್ರಮಣ ಮತ್ತು ಗೆರಿಲ್ಲಾ ಯುದ್ಧಗಳಿಗೆ ಏಳು ರಾಜ್ಯಗಳೂ ತುತ್ತಾಗಿವೆ. ಮುಖ್ಯವಾಗಿ ನಾಗಾಲ್ಯಾಂಡ್, ಅಸ್ಸಾಂ, ಮಣಿಪುರ ಮತ್ತು ತ್ರಿಪುರಾ ರಾಜ್ಯಗಳು ಭಯಾನಕ ಪರಿಸ್ಥಿತಿಯಲ್ಲಿ ಸಿಲುಕಿಕೊಂಡಿದ್ದು ಬಂಡುಕೋರರ ಗುಂಪುಗಳು ಈಶಾನ್ಯದ ಅಭಿವೃದ್ಧಿಗೆ ಮಾರಕವಾಗಿ ಪರಿಣಮಿಸಿವೆ. ಪರಿಸ್ಥಿತಿಯನ್ನು ನಿಯಂತ್ರಣದಲ್ಲಿಡುವುದಕ್ಕಾಗಿ ಮಿಲಿಟರಿ ಮತ್ತು ಪ್ಯಾರಾಮಿಲಿಟರಿಯ ಹೆಚ್ಚು ತುಕಡಿಗಳನ್ನು ಇಲ್ಲಿ ನೆಲೆಗೊಳಿಸಲಾಗಿದೆ. ಈ ಬಂಡುಕೋರ ಗುಂಪುಗಳು ಇರುವವರೆಗೂ ಈ ವಲಯದಲ್ಲಿ ಯಾವುದೇ ಕ್ಷೇತ್ರದಲ್ಲಿ ಪ್ರಗತಿಯನ್ನು ಸಾಧಿಸುವ ಸೂಚನೆಗಳಿಲ್ಲ.

*(ಫೆಬ್ರವರಿ ೨೦೦೯ರ ಸಂಚಿಕೆಯಲ್ಲಿ ಮುಂದುವರೆಯುತ್ತದೆ.)*

**ಎಂ. ವೆಂಕಟಸ್ವಾಮಿ**
ಸಂಖ್ಯೆ ಡಿ ೧೧, ಸಿಸಿಜ ಹಾಸ್ಟೆಲ್, ಸಿಪಿಡಬ್ಲ್ಯು ಕ್ವಾರ್ಟರ್ಸ್ ದೊಮ್ಮಲೂರು ಅಂಚೆ
ಬೆಂಗಳೂರು - ೭೧

ಸುದ್ದಿ ಚಿತ್ರ



## ನವಕರ್ನಾಟಕಕ್ಕೆ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ

ದಿಲ್ಲಿಯ ಭಾರತೀಯ ಪ್ರಕಾಶಕರ ಹಾಗೂ ಪುಸ್ತಕ ಮಾರಾಟಗಾರರ ಸಂಘಗಳ ಒಕ್ಕೂಟ (ಎಫ್‌ಪಿಬಿಎ) ಪ್ರತಿ ವರ್ಷ ನೀಡುತ್ತ ಬಂದಿರುವ ಅತ್ಯುತ್ತಮ ಪ್ರಾದೇಶಿಕ ಭಾಷಾ ಪ್ರಕಾಶಕ ಪ್ರಶಸ್ತಿ ಈ ವರ್ಷ ನವಕರ್ನಾಟಕ ಪ್ರಕಾಶನಕ್ಕೆ ಲಭಿಸಿದೆ. ದಿನಾಂಕ ೨೧-೧೧-೨೦೦೮ರಂದು ಬೆಂಗಳೂರು ಪುಸ್ತಕೋತ್ಸವದಲ್ಲಿ ಈ ಪ್ರಶಸ್ತಿಯನ್ನು ಒಕ್ಕೂಟದ ಅಧ್ಯಕ್ಷರಾದ ಶ್ರೀ ಎಸ್. ಸಿ. ಸೇಥಿ ಅವರು ಪ್ರದಾನ ಮಾಡಿದರು. ನವಕರ್ನಾಟಕ ಪ್ರಕಾಶನದ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಆರ್. ಎಸ್. ರಾಜಾರಾಮ್ ಪ್ರಶಸ್ತಿ ಸ್ವೀಕರಿಸಿದರು. ಕನ್ನಡ ಪುಸ್ತಕ ಪ್ರಾಧಿಕಾರದ ಹಿಂದಿನ ಅಧ್ಯಕ್ಷರಾದ ಪ್ರೊ|| ಎಸ್. ಜಿ. ಸಿದ್ಧರಾಮಯ್ಯ ಪ್ರಶಸ್ತಿ ಪುರಸ್ಕೃತ ಸಂಸ್ಥೆಯ ಕಾರ್ಯ ಚಟುವಟಿಕೆಗಳನ್ನು ಶ್ಲಾಘಿಸಿ ಪ್ರಶಸ್ತಿ ಸಲ್ಲುತ್ತಿರುವ ಬಗ್ಗೆ ಅಭಿನಂದಿಸಿದರು. ಬೆಂಗಳೂರು ಪುಸ್ತಕ ಮಾರಾಟಗಾರರ ಮತ್ತು ಪ್ರಕಾಶಕರ ಸಂಘದ ಪದಾಧಿಕಾರಿಗಳು ಹಾಗೂ ಇತರ ಪುಸ್ತಕ ಪ್ರಿಯರು ಭಾಗವಹಿಸಿದ್ದರು.



# ಕಡೆಗಣಿಸಲ್ಪಟ್ಟ ರಾಷ್ಟ್ರೀಯ ಕ್ರಿಯಾ ಯೋಜನೆ

**ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ನಮ್ಮ ಅಭಿವೃದ್ಧಿಯನ್ನು ಹೊಸಕಿ ಹಾಕಬಲ್ಲ, ವಿಸರ್ಜನ ನಿರ್ಬಂಧಗಳನ್ನು ಹೇರುವ, ಅಂತರರಾಷ್ಟ್ರೀಯ ಹುನ್ನಾರಗಳಿಂದ ದೇಶವನ್ನು ಪಾರುಮಾಡಿ ದೇಶದ ಸಾರ್ವಭೌಮತೆಯನ್ನು ಎತ್ತಿ ಹಿಡಿಯಬೇಕಾಗಿದೆ. ಇದರಲ್ಲೂ ವಿದೇಶಿ ತಂತ್ರಜ್ಞಾನ ವರ್ಗಾವಣೆ, ಅಭಿವೃದ್ಧಿಯ ನೆರವಿನ ಮಹತ್ವಪೂರ್ಣ ಪ್ರಶ್ನೆಗಳು ಅಡಗಿವೆ. ದೇಶದ ಅಭಿವೃದ್ಧಿಯ ನೀಲನಕ್ಷೆಯಾಗಬಹುದಾದ ಈ ಕ್ರಿಯಾಯೋಜನೆ ಸಮರ್ಥವಾಗಿ ಜಾರಿಯಾಗಬೇಕಾದರೆ ಇದರ ಬಗ್ಗೆ ವ್ಯಾಪಕ ಚರ್ಚೆ ಮತ್ತು ವಿವಿಧ ಜನ ವಿಭಾಗಗಳ ಪಾಲ್ಗೊಳ್ಳುವಿಕೆ ಅತ್ಯಂತ ಮಹತ್ವಪೂರ್ಣ.**

ಸಿ. ಯತಿರಾಜು

ಇಡೀ ದೇಶ ಭಾರತ - ಅಮೆರಿಕಾ ಅಣು ಒಪ್ಪಂದದ ಚರ್ಚೆಯಲ್ಲಿ ಮುಳುಗಿಹೋಗಿದ್ದಾಗ ಭಾರತ ಸರ್ಕಾರ ಪರಿಸರಕ್ಕೆ ಸಂಬಂಧಿಸಿದ ಅತ್ಯಂತ ಪ್ರಮುಖವಾದ ಕಾರ್ಯಯೋಜನೆಯೊಂದನ್ನು ತಣ್ಣಗೆ ಸದ್ದಿಲ್ಲದೆ ಬಿಡುಗಡೆ ಮಾಡಿತು. ಪ್ರಧಾನ ಮಂತ್ರಿಗಳು ಜಪಾನಿನ ಹೋಕೈಡೋನಲ್ಲಿ ನಡೆಯಲಿದ್ದ ಜಿ-೮ ಶೃಂಗ ಸಮ್ಮೇಳನದಲ್ಲಿ ಭಾಗವಹಿಸಲು ತೆರಳುವ ಮುನ್ನ 'ಹವಾಮಾನ ಬದಲಾವಣೆಯ ರಾಷ್ಟ್ರೀಯ ಕ್ರಿಯಾ ಯೋಜನೆ' (ಎನ್‌ಎಪಿಸಿಸಿ)ಯನ್ನು ಬಿಡುಗಡೆಮಾಡಿದರು.

ಜಾಗತಿಕ ಬಿಸಿಯೇರುವಿಕೆಯಿಂದ ಉಂಟಾಗುವ ಹವಾಮಾನದ ಏರುಪೇರು ನಮ್ಮ ಭೂಗ್ರಹ ಎದುರಿಸುತ್ತಿರುವ ಅತ್ಯಂತ ಪ್ರಮುಖವಾದ ಜಾಗತಿಕ ಪರಿಸರ ಸವಾಲು. ಇದು ಇಂದು ಕೇವಲ ಪರಿಸರ ಸಂಬಂಧಿತ ಬಿಕ್ಕಟ್ಟಾಗಿ ಉಳಿಯದೇ ಮನುಕುಲದ ಬಿಕ್ಕಟ್ಟಾಗಿ ಪರಿವರ್ತನೆಗೊಂಡಿದೆ. ಸಮುದ್ರ ಮಟ್ಟದ ಹೆಚ್ಚಳದಿಂದ ಕಡಲ ತೀರವಾಸಿಗಳು ಮಿಲಿಯಾಂತರ ಸಂಖ್ಯೆಯಲ್ಲಿ ನಿರಾಶ್ರಿತರಾಗಿ ಗುಳೇ ಹೋಗಬೇಕಾಗುವದೇ ಅಲ್ಲದೆ ಪ್ರವಾಹ ಮತ್ತು ಬರಗಾಲಗಳಂತಹ ಪ್ರಾಕೃತಿಕ ವಿಕೋಪಗಳಿಂದ ಕೃಷಿ ಬಿಕ್ಕಟ್ಟು ಉಂಟಾಗಿ ಜೀವನೋಪಾಯ ನಷ್ಟದಿಂದ ವಿಶ್ವಾದ್ಯಂತ ವಿಶಾಲ ಜನಸಮೂಹಗಳು ಸಂಕಷ್ಟಗಳ ಸರಮಾಲೆಗೆ ಬಲಿಯಾಗಲಿದ್ದಾರೆ. ಇತಿಹಾಸದಲ್ಲಿ ಕಂಡುಕೇಳರಿಯದ ಪ್ರಮಾಣದಲ್ಲಿ ಜನ ನೆಲೆ ಕಳೆದುಕೊಂಡು ನಿರಾಶ್ರಿತರಾಗಲಿದ್ದಾರೆ. ಗುಜರಾತ್, ಒರಿಸ್ಸಾ, ಬಂಗಾಳ, ಮಹಾರಾಷ್ಟ್ರ ಮುಂತಾದೆಡೆಗಳಲ್ಲಿ ಸಮುದ್ರದಿಂದ ಸಾವಿರಾರು ಜನ ಮನೆ ಕಳೆದುಕೊಂಡಿದ್ದಾರೆ. ಕೃಷಿ, ಮೀನುಗಾರಿಕೆ ಅಪಾರವಾಗಿ ಬಾಧಿಸಲ್ಪಟ್ಟು ಆಹಾರ ಸುರಕ್ಷತೆಯೇ ಹಾಳಾಗಲಿದೆ. ಸದಾ ಹರಿವ ಹಿಮಾಲಯದ ನದಿಗಳು ಅಪಾರ ಪ್ರವಾಹದಿಂದ ಹರಿದು ಕೆಲವು ಋತುಗಳಲ್ಲಿ ಮಾತ್ರ ಹರಿಯುವ ನದಿಗಳಾಗಿ ರೂಪಾಂತರಗೊಂಡು ಆಹಾರೋತ್ಪಾದನೆ ಕುಸಿಯಲಿದೆ. ಅನೇಕ ಸಾಂಕ್ರಾಮಿಕ ರೋಗಗಳು ಜನಸಮೂಹಗಳನ್ನು ಬಾಧಿಸಲಿವೆ. ಒಟ್ಟಾರೆಯಾಗಿ, ಹವಾಮಾನ ವೈಪರೀತ್ಯಗಳು ನಮ್ಮ ದೇಶದ ಜನತೆ, ಪರಿಸರ ಮತ್ತು ಆರ್ಥಿಕತೆಯ ಭವಿಷ್ಯವನ್ನು ನಿರ್ಧರಿಸುತ್ತವೆ. ಇಂತಹ ಒಂದು ಸವಾಲನ್ನು ರಾಷ್ಟ್ರೀಯವಾಗಿ ಹೇಗೆ ಎದುರಿಸಬೇಕೆಂಬ ನೀತಿಯೊಂದನ್ನು ರೂಪಿಸುವಾಗ ಸಾರ್ವಜನಿಕ ಚರ್ಚೆ ಅತ್ಯಗತ್ಯ. ಇದರಿಂದ ಬಾಧಿಸಲ್ಪಡುವ ಪಣದಾರ ಜನ ವಿಭಾಗಗಳು, ಪರಿಣತರು, ಪರಿಸರವಾದಿಗಳು ಹಾಗೂ ಎಲ್ಲಾ ಆಸಕ್ತರಿಗೂ ಇಂತಹ ಪ್ರಮುಖ ವ್ಯಾಪಕ ರಾಷ್ಟ್ರೀಯ ನೀತಿಯನ್ನು ರೂಪಿಸುವ ಹಂತದಲ್ಲಿ ಸಾರ್ವಜನಿಕವಾಗಿ ಚರ್ಚೆಗೆ, ಸಮಾಲೋಚನೆಗೆ, ಅವಕಾಶವನ್ನು ಕಲ್ಪಿಸಬೇಕಾಗಿತ್ತು. ಆದರೆ ಈ ನೀತಿಯನ್ನು ಅಂತಹ ಸಾರ್ವಜನಿಕ ಚರ್ಚೆಗೆ ಒಳಪಡಿಸದೇ ಅಪಾರದರ್ಶಕ ರೀತಿಯಲ್ಲಿ ಪ್ರಕಟಿಸಿರುವುದು ಅನೇಕ ಅನುಮಾನಗಳಿಗೆ ಎಡೆಮಾಡಿಕೊಟ್ಟಿದೆ. ಸುಮಾರು ೨೭ ನಾಗರಿಕ ಸಮಾಜ ಗುಂಪುಗಳು ಈ ಬಗ್ಗೆ ತಮ್ಮ ಪ್ರತಿಭಟನೆಯನ್ನು ದಾಖಲಿಸಿವೆ

ಜಾಗತಿಕವಾಗಿ ಅಪಾರ ಪ್ರಮಾಣದಲ್ಲಿ ಹಸಿರುಮನೆ ಅನಿಲಗಳನ್ನು ವಾತಾವರಣಕ್ಕೆ ವಿಸರ್ಜಿಸಿ ಮನುಕುಲಕ್ಕೆ ಈ ಬಿಕ್ಕಟ್ಟನ್ನು ಉಂಟುಮಾಡಿರುವ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಾದ ಅಮೆರಿಕಾ, ಐರೋಪ್ಯ ಒಕ್ಕೂಟ, ಜಪಾನ್‌ಗಳು ತಮ್ಮ ಅಪರಾಧಗಳನ್ನು ಮರೆಮಾಚಿಕೊಳ್ಳಲು ಅಭಿವೃದ್ಧಿಶೀಲ ರಾಷ್ಟ್ರಗಳಾದ ಭಾರತ ಮತ್ತು ಚೀನಾ ದೇಶಗಳತ್ತ ಬೆರಳು ಮಾಡಿ ತೋರಿಸಿ ತಮ್ಮ ಜವಾಬ್ದಾರಿಯಿಂದ ನುಣುಚಿಕೊಳ್ಳಲು ಯತ್ನಿಸುತ್ತಿವೆ. ವಿಶ್ವದ ಕಾಲುಭಾಗ ಹಸಿರುಮನೆ ಅನಿಲಗಳನ್ನು ಅಮೆರಿಕಾ ದೇಶವೊಂದೇ ವಾತಾವರಣಕ್ಕೆ ವಿಸರ್ಜಿಸುತ್ತಿದೆ. ಭಾರತದ ತಲಾವಾರು ವಿಸರ್ಜನೆಯ ಪ್ರಮಾಣ ಅತ್ಯಂತ ಕಡಿಮೆ ಇದೆ. ಅಮೆರಿಕಾಗಿಂತ ೨೦ಪಟ್ಟು, ಐರೋಪ್ಯ ಒಕ್ಕೂಟಕ್ಕಿಂತ ೧೦ಪಟ್ಟು, ಕಡಿಮೆ ಪ್ರಮಾಣದಲ್ಲಿ ಭಾರತ ಹಸಿರುಮನೆ ಅನಿಲಗಳನ್ನು ವಾತಾವರಣಕ್ಕೆ ಬಿಡುಗಡೆ ಮಾಡುತ್ತದೆ. ತಲಾವಾರು ವಿಸರ್ಜನೆಯಲ್ಲಿ ಭಾರತ ಕೇವಲ ಶೇ. ೪ರ ಪ್ರಮಾಣದಲ್ಲಿ ವಿಸರ್ಜನೆ ಮಾಡುತ್ತಿದ್ದರೂ ಒಟ್ಟು ಪ್ರಮಾಣದಲ್ಲಿ ಭಾರತ ೪ನೇ ಸ್ಥಾನದಲ್ಲಿರುವುದರಿಂದ ಅದು ವಿಸರ್ಜನಾ ನಿರ್ಬಂಧ ಗುರಿಯನ್ನು ನಿಗದಿಪಡಿಸಿಕೊಳ್ಳಬೇಕೆಂದು ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಒತ್ತಾಯಿಸುತ್ತಿವೆ. ಭಾರತ ಈ ವಾದವನ್ನು ಸಂಪೂರ್ಣವಾಗಿ ತಿರಸ್ಕರಿಸಿರುವುದು ಸ್ವಾಗತಾರ್ಹವಾದರೂ ಅದು ಕ್ಯೋಟೋ ಒಪ್ಪಂದದಂತೆ ಸಮಸ್ಯೆಯ ಸೃಷ್ಟಿಗೆ ಕಾರಣವಾಗಿ ಈಗಾಗಲೇ ಹಸಿರುಮನೆ ಅನಿಲಗಳನ್ನು ಅಪಾರ ಪ್ರಮಾಣದಲ್ಲಿ ವಾತಾವರಣಕ್ಕೆ ತುಂಬಿ ಬೇರೆ ರಾಷ್ಟ್ರಗಳು ಈ ಅನಿಲಗಳನ್ನು ವಿಸರ್ಜಿಸಲು ಅವಕಾಶವಿಲ್ಲದಂತೆ ಮಾಡಿದೆ. ಆದ್ದರಿಂದ ಆ ರಾಷ್ಟ್ರಗಳು "ಸಾಮಾನ್ಯ, ಆದರೆ ವ್ಯತ್ಯಾಸಗಳುಳ್ಳ ಜವಾಬ್ದಾರಿ" ಸಿದ್ಧಾಂತವನ್ನು ಮಾನ್ಯ ಮಾಡಿ ಜಾರಿಗೊಳಿಸಬೇಕೆಂಬ ಒತ್ತಾಯ ಈ ಕ್ರಿಯಾ ಯೋಜನೆಯಲ್ಲಿ ಸ್ಪಷ್ಟವಾಗಿ ವ್ಯಕ್ತಪಡಿಸಿಲ್ಲ. ಬಿಕ್ಕಟ್ಟಿನ ಸೃಷ್ಟಿಗೆ ನಾವು ಕಾರಣರಲ್ಲ, ಅದಕ್ಕೆ ನಾವು ನೀಡುತ್ತಿರುವ ಕೊಡುಗೆ ಅತ್ಯಲ್ಪ. ಆದರೆ ನಾವೇ ಅವರು ಸೃಷ್ಟಿಸಿರುವ ಸಮಸ್ಯೆಗೆ ಬಲಿಯಾಗುತ್ತಿರುವುದರಿಂದ ಅಭಿವೃದ್ಧಿ ಹೊಂದಿದ ರಾಷ್ಟ್ರಗಳೇ ಇದರ ಶಮನಕ್ಕೆ ಜವಾಬ್ದಾರರಾಗಬೇಕೆಂಬ ಪ್ರಬಲ ಒತ್ತಾಯ ತರುವುದರ ಮೂಲಕ ಅವರು ಭಾರತವನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುವ ಪ್ರಯತ್ನಗಳನ್ನು ಹಿಮ್ಮೆಟ್ಟಿಸುವ ದೃಢನಿಲುವು ಇದರಲ್ಲಿ ನಾಪತ್ತೆಯಾಗಿದೆ. ಅವರು ವಿಸರ್ಜನಾ ನಿರ್ಬಂಧ ಗುರಿಗಳನ್ನು ಹಾಕಿಕೊಳ್ಳದಿದ್ದರೆ ಮನುಕುಲವೇ ಅವಸಾನ ಹೊಂದಬೇಕಾಗುತ್ತದೆಂಬ ಸ್ಪಷ್ಟ ಎಚ್ಚರಿಕೆಯ ಧ್ವನಿ ಇದರಲ್ಲಿ ಇಲ್ಲ.

ಬಹಳ ಮುಖ್ಯವಾಗಿ ಈ ಕ್ರಿಯಾ ಯೋಜನೆ ಸುಸ್ಥಿರ ಅಭಿವೃದ್ಧಿಯ ಕಾರ್ಯತಂತ್ರದ ಭಾಗವಾಗಿ ೮ ಮಿಷನ್‌ಗಳನ್ನೊಳಗೊಂಡ ವಿಶಾಲ ಕಾರ್ಯಕ್ರಮಗಳನ್ನು ಪ್ರಸ್ತಾಪಿಸಿದೆ. ಅವುಗಳೆಂದರೆ (೧) ಸೌರಶಕ್ತಿ (೨) ಇಂಧನದ ಸಮರ್ಥತೆಯನ್ನು ಹೆಚ್ಚಿಸುವುದು (೩) ಸುಸ್ಥಿರ ಆವಾಸ (೪) ಜಲ ಸಂರಕ್ಷಣೆ (೫) ಹಿಮಾಲಯ ಪರಿಸರ ವ್ಯವಸ್ಥೆಯನ್ನು ಸುಸ್ಥಿರಗೊಳಿಸುವುದು (೬) ಹಸಿರು ಭಾರತ ನಿರ್ಮಾಣ (೭) ಸುಸ್ಥಿರ ಕೃಷಿ (೮) ಹವಾಮಾನ ವೈಪರೀತ್ಯದ ನಿರ್ಣಾಯಕ ಜ್ಞಾನವೇದಿಕೆಯ ನಿರ್ಮಾಣ ಎಂಟು ಮಿಷನ್‌ಗಳನ್ನು ರೂಪಿಸಿದ್ದರೂ ಅವುಗಳ ವ್ಯಾಪ್ತಿ ಮತ್ತು ಗುರಿಗಳನ್ನು ನಿಖರವಾಗಿ ನಿಗದಿಪಡಿಸಲಾಗಿಲ್ಲ. ಆಧಾರ ರೇಖೆಯನ್ನಾಧರಿಸಿ ಗುರಿಸಾಧನೆಗಳನ್ನು ಗುರುತಿಸ

ಲಾಗಿಲ್ಲ. ಒಟ್ಟು ಇಂಧನ ಬಳಕೆಯಲ್ಲಿ ನವೀಕರಿಸ ಬಹುದಾದ ಇಂಧನದ ಪ್ರಮಾಣವನ್ನು ಹೆಚ್ಚಿಸುವ ಆಶಯವಿದೆಯೇ ಹೊರತು ಯಾವ ಪ್ರಮಾಣದಲ್ಲಿ ಅದನ್ನು ಸಾಧಿಸಲಾಗುವುದೆಂಬುದರ ಪ್ರಮಾಣ ನಿಗದಿ ಯಾಗಿಲ್ಲ. ನಗರ ಪ್ರದೇಶಗಳಲ್ಲಿ, ಕಡಿಮೆ ಉಷ್ಣತಾ ವಲಯದಲ್ಲಿ ಶೇ. ೪೦, ಮಧ್ಯಮಾವಧಿ ಉಷ್ಣತೆಯಲ್ಲಿ ಶೇ. ೬೦ರಷ್ಟು ಸೌರಶಕ್ತಿ ಬಳಕೆಯನ್ನು ಪ್ರೋತ್ಸಾಹಿಸ ಲಾಗುವುದೆಂಬ ಗುರಿಯಿದ್ದರೂ ಅದರ ಸಾಧನೆಗಳ ನಿಗಾವಣೆಗೆ ಬೇಕಾದ ಆಧಾರ ಗುರಿಗಳೂ ನಿಗದಿ ಯಾಗಿಲ್ಲ. ಹಸಿರು ಭಾರತದಲ್ಲಿ ೬ ಮಿಲಿಯನ್ ಹೆಕ್ಟೇರ್ ಬರಡು ಭೂಮಿಯನ್ನು ಹಸಿರೀಕರಣಗೊಳಿಸುವ ಗುರಿಯನ್ನು ಮಾತ್ರ ನಿಗದಿಪಡಿಸಲಾಗಿದೆ. ಸಾರಿಗೆ ಕ್ಷೇತ್ರದಲ್ಲಿ ಸಾರ್ವಜನಿಕ ಸಾರಿಗೆ ವ್ಯವಸ್ಥೆಯನ್ನು ಪ್ರೋತ್ಸಾಹಿಸಿ ಖಾಸಗಿ ಸಾರಿಗೆ ವ್ಯವಸ್ಥೆಯನ್ನು ನಿಯಂತ್ರಿಸುವ ಪ್ರಸ್ತಾಪವೇ ಇಲ್ಲ. ಸಾಂಪ್ರದಾಯಿಕ ಶಕ್ತಿ ಉತ್ಪಾದನೆಯ ಅನೇಕ ಸಾಧ್ಯತೆಗಳ ಬಗ್ಗೆ ಉದ್ದುದ್ದನೆಯ ಪ್ರಸ್ತಾಪಗಳಿದ್ದರೂ ಅದರ ಸಮರ್ಥಕತೆಯನ್ನು ಹೆಚ್ಚಿಸುವ ಪ್ರಸ್ತಾಪಗಳಿಲ್ಲ. ಜಲಸಂರಕ್ಷಣೆಯ ಬಗ್ಗೆ ಮಾತನಾಡುತ್ತ ಅದರ ಬಳಕೆಯ ಶೇ. ೨೦ರಷ್ಟು ಸಾಮರ್ಥ್ಯ ಹೆಚ್ಚಳ ಮಾಡುವುದಾಗಿ ಹೇಳಿಕೊಂಡರೂ ಬಳಕೆಯ ನಿಯಂತ್ರಣ ವನ್ನು ಶಾಸನಾತ್ಮಕವಾಗಿ ಮಾಡುವ ಭರವಸೆಯಿಲ್ಲ. ಕೃಷಿ ಉತ್ಪಾದಕತೆಯನ್ನು ಹೆಚ್ಚಿಸಲು ಅಗತ್ಯವಾದ ಮಣ್ಣಿನ ಆರೋಗ್ಯ, ಗೊಬ್ಬರ ಬಳಕೆ, ಹವಾಮಾನ ವೈಪರೀತ್ಯ ತಾಳಿಕೊಳ್ಳುವ ತಳಿಗಳ ಅಭಿವೃದ್ಧಿ ಮುಂತಾದವುಗಳ ಬಗ್ಗೆ ಸ್ಪಷ್ಟ ಗುರಿಗಳಿಲ್ಲ. ನಗರ ಪ್ರದೇಶಗಳ ಗಟ್ಟಿ ಕಸ ನಿರ್ವಹಣೆಯನ್ನು ''ಸಾರ್ವಜನಿಕ ಒಳಿತು'' ಎಂದು ಪರಿಗಣಿಸಿರುವುದು ಒಂದು ಸ್ವಾಗತಾರ್ಹ ಬೆಳವಣಿಗೆ. ಇದರಿಂದ ಕಸ ವಿಲೇವಾರಿ ಸಾರ್ವಜನಿಕ ಜವಾಬ್ದಾರಿಯಾಗಿ ಅದರಿಂದ ಶಕ್ತಿ ಉತ್ಪಾದನೆಗೆ ಆದ್ಯತೆ ದೊರಕುವ ಹಾಗೂ ಅದರ ಹೊರೆಯನ್ನು ನಾಗರಿಕರ ತಲೆಗೆ ಕಟ್ಟುವ ಪರಿಪಾಟ ತಪ್ಪಬಹುದಾದ ಸಾಧ್ಯತೆ ಇದೆ. ಅರೆಬರೆಯಾಗಿ ನಿಗದಿ ಪಡಿಸಲಾಗಿರುವ ಗುರಿಗಳನ್ನು ಸಾಧಿಸಲು ಸಹ ಆರ್ಥಿಕ ಸಂಪನ್ಮೂಲಗಳನ್ನು ಅಗತ್ಯ ಪ್ರಮಾಣದಲ್ಲಿ ನಿಗದಿಪಡಿಸ ಲಾಗಿಲ್ಲ. ಇದಿಲ್ಲದೆ ಹೋದರೆ ಗುರಿ ಸಾಧನೆಯೆಂಬುದು ಕೇವಲ ಅಕ್ಷರ ಅಂಕೆ ಸಂಖ್ಯೆಗಳ ದೊಂಬರಾಟವಾಗಿ ಹವಾಮಾನ ವೈಪರೀತ್ಯಗಳು ತೀವ್ರಗೊಂಡು ಜನರ ಬದುಕು ಮೂರಾಬಟ್ಟೆಯಾಗುವುದು ಅತ್ಯಂತ ನಿಚ್ಚಳ. ದೇಶದ ಅಭಿವೃದ್ಧಿಯ ದಾರಿಯನ್ನು ನಿರ್ದೇಶಿಸುವ ಹಾಗೂ ಜನರ ಮೂಲಭೂತ ಅಗತ್ಯಗಳನ್ನು ಪೂರೈಸುವ ಜನಕಲ್ಯಾಣ ಕಾರ್ಯಕ್ರಮಗಳ ಸ್ವರೂಪ ಮತ್ತು ಗುರಿಗಳನ್ನು ನಿರ್ಧರಿಸುವ ಹವಾಮಾನ ವೈಪರೀತ್ಯಗಳ ಕ್ರಿಯಾ ಯೋಜನೆ ಅಣು ಒಪ್ಪಂದಕ್ಕಿಂತಲೂ ಅತ್ಯಂತ ಮಹತ್ವಪೂರ್ಣವಾದ ದಾಖಲೆ. ಅಣು ಒಪ್ಪಂದ ಶಕ್ತಿ ಸುರಕ್ಷೆ ಯನ್ನೊದಗಿಸಲು ಪೂರಕವಾಗಬಲ್ಲ ಕ್ರಮ ಎನ್ನಲಾಗಿದೆ. ಅದರ ಬಗ್ಗೆ ಅಪಾರವಾದ ದೇಶವ್ಯಾಪಿ ಬಿರುಸಿನ ಚರ್ಚೆ ನಡೆಯಿತು. ಅದು ಸರ್ಕಾರದ ಅಳಿವು ಉಳಿವಿನ ಪ್ರಶ್ನೆ ಯಾಯಿತು. ಆದರೆ ಅದಕ್ಕಿಂತಲೂ ಮಹತ್ವಪೂರ್ಣವಾದ ಈ ಕ್ರಿಯಾ ಯೋಜನೆಯ ಬಗ್ಗೆ ಯಾರೂ ತಲೆಕೆಡಿಸಿ ಕೊಳ್ಳದಿರುವುದು ಅತ್ಯಂತ ವಿಷಾದಕರ. ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ನಮ್ಮ ಅಭಿವೃದ್ಧಿಯನ್ನು ಹೊಸಕಿ ಹಾಕಬಲ್ಲ, ವಿಸರ್ಜನ ನಿರ್ಬಂಧಗಳನ್ನು ಹೇರುವ ಅಂತರರಾಷ್ಟ್ರೀಯ ಹುನ್ನಾರಗಳಿಂದ ದೇಶವನ್ನು ಪಾರು ಮಾಡಿ ದೇಶದ ಸಾರ್ವಭೌಮತೆಯನ್ನು ಎತ್ತಿಹಿಡಿಯ ಬೇಕಾಗಿದೆ. ಇದರಲ್ಲೂ ವಿದೇಶಿ ತಂತ್ರಜ್ಞಾನ ವರ್ಗಾವಣೆ, ಅಭಿವೃದ್ಧಿಯ ನೆರವಿನ ಮಹತ್ವಪೂರ್ಣ ಪ್ರಶ್ನೆಗಳು ಅಡಗಿವೆ. ದೇಶದ ಅಭಿವೃದ್ಧಿಯ ನೀಲನಕ್ಷೆಯಾಗಬಹುದಾದ ಈ ಕ್ರಿಯಾ ಯೋಜನೆ ಸಮರ್ಥವಾಗಿ ಜಾರಿಯಾಗಬೇಕಾದರೆ ಇದರ ಬಗ್ಗೆ ವ್ಯಾಪಕ ಚರ್ಚೆ ಮತ್ತು ವಿವಿಧ ಜನ ವಿಭಾಗಗಳ ಪಾಲ್ಗೊಳ್ಳುವಿಕೆ ಅತ್ಯಂತ ಮಹತ್ವಪೂರ್ಣ.

**ಸಿ. ಯತಿರಾಜು**
ಪ್ರಾಚಾರ್ಯರು, ಕಾಳಿದಾಸ ಪದವಿಪೂರ್ವ ಕಾಲೇಜು
ತುಮಕೂರು - ೫೭೨ ೨೧೦೬

# ನೀನು ಬರುವುದಾದರೆ...



ನೀನು ಬರುವುದಾದರೆ ಕಣ್ಣೀರಿನ ಬದಲು
ಬೆಂಕಿಯಲ್ಲಿ ಅರಳುವ ಹೂವಾಗಿ ಬಾ

ಉಡಲು - ತೊಡಲು ಹರಕು-ಮುರುಕು ಇದ್ದರೂ
ಅದಕ್ಕೆ ನೀನು ಹಾಕಬೇಕು ಗಂಟಿಗೆ ಗಂಟು

ಬದುಕಿನ ದುಡಿಮೆಯ ಮಧ್ಯೆ ಸಿಕ್ಕ ಬಿಡುವನ್ನು
ಕಟ್ಟಿಕೊಳ್ಳಬೇಕು ನಿನ್ನ ಬಿಚ್ಚಿದ ಮುಡಿಯನ್ನು

ಘಲಘಲಿಸುವ ಕಾಲಿನ ಗೆಜ್ಜೆಗಳನ್ನು ತೆಗೆದಿಡು
ಜೀವನದಲ್ಲಿ ಘಟಿಸಬಹುದಾದ ಕಷ್ಟಗಳಿಗೆ ಎದೆಯೊಡ್ಡು

ಕತ್ತಲ ಕವಿದಿರುವ ನನ್ನ ಬಾಳೆಂಬ ಗುಡಿಸಲಿಗೆ
ಬರುವಾಗ, ಬೆಳಕಿನ ದಿವ್ಯಜ್ಯೋತಿ ಹಿಡಿದುಕೊಂಡು ಬಾ

ಸಂಸಾರದಲ್ಲಿ ಅಳಬೇಡ; ಮೋಹದಲ್ಲಿ ಸಿಲುಕಬೇಡ
ಕೆಲಸಕ್ಕೆ ಬಾರದ ಅನ್ಯರ ಕಾಲಿಗೂ ಬೀಳಬೇಡ

ಬರುವುದೇ... ಆದರೆ ಸ್ವಾಭಿಮಾನ ಮಾತ್ರ ಹೊತ್ತು ಬಾ
ಬದುಕಿನ ಕೊನೆಯವರೆಗೂ ನಾನು ನಿನ್ನ ಜೊತೆಗೆಯೇ

ಈ ನನ್ನ ತತ್ವದ ಸಾರ ತಿಳಿದುಕೊ
ನನ್ನ ಮನದಾಸೆಯನ್ನು ಅರ್ಥೈಯಿಸಿಕೊ

ಮರಾಠಿ ಮೂಲ
**ದತ್ತಾಂಕುರ (ಡಾ|| ಬಾಬುರಾವ್ ಗಾಯಕವಾಡ)**
ಅನುವಾದ
**ವಿಜಯ ಆರ್. ಕಾಂಬಳೆ**
ಮಲಪ್ರಭ ಹಾಸ್ಟೆಲ್, ರೂ.ನಂ. ೩೪, ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ - ೫೮೦ ೦೦೩



ನಭಾವಲೋಕನ

# ಎರಡು ಬಾರಿ ಜೋಡಿ ಗ್ರಹಣ ??

ಡಿಸೆಂಬರ್ ೧ರಂದು ಯಾರೂ ಹೇಳದಿದ್ದರೂ ನಿಮ್ಮ ಕಣ್ಣುಗಳು ಪಶ್ಚಿಮಕ್ಕೆ ಹೊರಳುತ್ತವೆ. ಆ ಸಂಜೆ ಚಂದ್ರನಿಗೆ ಎರಡು ಆಭರಣಗಳ ಅಲಂಕಾರ. ಒಂದು ಶುಕ್ರ ಮತ್ತೊಂದು ಗುರು. ಅವುಗಳ ಚಲನೆಯನ್ನು ಹಾಗೆಯೇ ತಿಂಗಳ ಉದ್ದಕ್ಕೂ ಗಮನಿಸುತ್ತಾ ಬನ್ನಿ. ಕ್ರಮೇಣ ಶುಕ್ರ ಗುರುವನ್ನು ದಾಟಿ ಮುಂದೆ ಬರುತ್ತದೆ. ಕಳೆದ ತಿಂಗಳು ಈ ಎರಡು ಚುಕ್ಕೆಗಳನ್ನು ಗಮನಿಸುತ್ತಾ ಬಂದಿದ್ದ ಮಹನೀಯರೊಬ್ಬರು ನನ್ನ ಈ ಪದಪುಂಜಕ್ಕೆ ಆಕ್ಷೇಪ ಎತ್ತಿದರು. ಶುಕ್ರ ಮುಂದೆ ಬಂದಿಲ್ಲ; ಇದ್ದಲ್ಲಿಯೇ ಇದೆ; ಗುರು ಮುಂದೆ ಸರಿದಿದೆ ಎಂಬುದು ಅವರ ವಾದ. ಇಲ್ಲಿ ಮುಂದೆ - ಹಿಂದೆ ಈ ಪದಗಳ ಗೊಂದಲ ಉಂಟಾಗಿದೆ ಅಷ್ಟೇ. ಮುಂದೆ ಎಂದರೆ ಧನುವಿನಿಂದ ಮಕರ, ಮಕರದಿಂದ ಕುಂಭ, ಕುಂಭದಿಂದ ಮೀನ – ಹೀಗೆ. ಹಿಂದೆ ಎಂದರೆ ಮಕರದಿಂದ ಧನುವಿನತ್ತ ಚಲಿಸುವುದು ಎನ್ನಬಹುದು. ಆದ್ದರಿಂದ ಶುಕ್ರ ಮುಂದೆ ಚಲಿಸಿತೆಂದರೆ ವೃಶ್ಚಿಕದಿಂದ ಧನುವಿಗೆ, ಅಲ್ಲಿಂದ ಮುಂದೆ ಮಕರಕ್ಕೆ ಚಲಿಸಿತು ಎಂದರ್ಥ. ಆದರೆ ಇದೇ ಅವಧಿಯಲ್ಲಿ ಗುರು ಇದ್ದಲ್ಲೇ ಇದ್ದಿತು. ಇದನ್ನು ತಿಳಿಯಲು ನಕ್ಷತ್ರಪುಂಜಗಳ ಪರಿಚಯ ಇರಬೇಕು. ಈ ತಿಂಗಳಲ್ಲಿ ಇವೆರಡೂ ಚುಕ್ಕೆಗಳು ಸಂಜೆ ಪಶ್ಚಿಮದ ಸಂಜೆಗೆಂಪಿನಲ್ಲಿ ಕಾಣುವುವು. ಹಿನ್ನೆಲೆಯ ನಕ್ಷತ್ರಗಳು ಕಾಣುವ ಸಾಧ್ಯತೆಯೇ ಇಲ್ಲ. ಆದ್ದರಿಂದ ಶುಕ್ರ ಪ್ರತಿಸಂಜೆ ಅದೇ ಎತ್ತರದಲ್ಲಿ ಕಾಣುತ್ತದೆ, ಗುರು ದಿನೇ ದಿನೇ ಪಶ್ಚಿಮಕ್ಕೆ ಸರಿದ ಹಾಗೆ ಕಾಣುತ್ತದೆ. ವಾಸ್ತವದಲ್ಲಿ ಇದು, ಶುಕ್ರ ಹಾಗೂ ಸೂರ್ಯ ಎರಡರ ಚಲನೆಗಳ ಪ್ರಾತ್ಯಕ್ಷಿಕೆ. ಸೂರ್ಯ ವೃಶ್ಚಿಕದಿಂದ ಧನುವಿಗೆ ಬಂದಿದೆ. ಶುಕ್ರ ಧನುವಿನಿಂದ ಮಕರದವರೆಗೂ ಓಡಿದೆ. ಆದರೆ ಗುರು ಮಾತ್ರ ಧನು ಮತ್ತು ಮಕರದ ನಡುವೆಯೇ ಇದೆ.

ಒಂದನೆಯ ತಾರೀಖು ಚಂದ್ರ ಶುಕ್ರವನ್ನು ಮರೆಮಾಡುವ ಆಚ್ಛಾದನೆ ಎಂಬ ಘಟನೆ ನಡೆಯಲಿದೆಯಾದರೂ ಅದರ ನೋಟ ನಮಗೆ ಇಲ್ಲ. ಗುರು ಮತ್ತು ಶುಕ್ರದ ಜೊತೆಗೂಡುವಂತೆ ಮಾತ್ರ ಕಾಣುತ್ತದೆ. ಆ ಮುಂದಿನ ಸಂಜೆಗಳಲ್ಲಿ ಚಂದ್ರ ''ಮುಂದೆ'' ಓಡುತ್ತದೆ. ೧೨ರ ಸಂಜೆ ಹುಣ್ಣಿಮೆ ಚಂದ್ರನ ಪಕ್ಕದಲ್ಲಿ ಮಹಾವ್ಯಾಧ ಪುಂಜವನ್ನು ಕಾಣಬಹುದು. ಅದರಲ್ಲಿಯ ನಕ್ಷತ್ರವೊಂದರ ಹೆಸರು ಮೃಗಶಿರಾ. ಈ ಕಾರಣದಿಂದ ಈ ತಿಂಗಳ ಹೆಸರು ಮಾರ್ಗಶಿರಾ. ೧೯ರಂದು ಶನಿಯ ಪಕ್ಕ ಕಾಣುತ್ತದೆ.



ಡಿಸೆಂಬರ್ ೦೧ರ ಸಂಜೆ ಚಂದ್ರ, ಶುಕ್ರ ಮತ್ತು ಗುರು



ಡಿಸೆಂಬರ್ ೨೯ರ ಮುಸ್ಸಂಜೆ ಗುರು ಮತ್ತು ಬುಧ




ಮಂಗಳ ಗ್ರಹ ಸೂರ್ಯನ ದಿಕ್ಕಿನಲ್ಲೇ ಇರುವುದರಿಂದ ಈ ತಿಂಗಳು ನೋಡಲು ಸಿಗುವುದಿಲ್ಲ. ಬುಧ ತಿಂಗಳ ಕೊನೆಗೆ ಸಂಜೆ ಪಶ್ಚಿಮದಲ್ಲಿ ಕಾಣುತ್ತದೆ. ೨೯-೩೧ರ ಅವಧಿಯಲ್ಲಿ ಗುರು ಮತ್ತು ಬುಧ ಇವುಗಳ ಸಮಾಗಮವನ್ನು ನೋಡಬಹುದು. ರೇಖಾ ಚಂದ್ರನೂ ಜೊತೆಗೂಡಿ ಆಮೇಲೆ ಮುಂದೆ ಸಾಗಿ ಶುಕ್ರನ ಜೊತೆಗೂಡುವುದನ್ನು ಕಾಣಬಹುದು. ಚಂದ್ರ, ಬುಧ ಮತ್ತು ಗುರುಗಳೆರಡನ್ನೂ ಮರೆಮಾಡುವ ಆಚ್ಛಾದನೆ ನಡೆಯಲಿದೆ. ಈ ಅಪೂರ್ವ ನೋಟ ಆಸ್ಟ್ರೇಲಿಯಾದವರಿಗೆ ಮಾತ್ರ. ಆದರೆ ನಮಗೂ ಸ್ವಲ್ಪ ಪಾಲಿದೆ. ಕ್ಯಾಮೆರಾಗಳಿಗೆ ಕೆಲಸ ಕೊಡಬಹುದು. ಇದನ್ನು ಜೋಡಿ ಗ್ರಹಣ ಎಂದು ಕರೆಯಬಹುದಲ್ಲವೆ ?

ಈ ತಿಂಗಳು ಭೂಮಿ ತನ್ನ ಕಕ್ಷೆಯ ಪ್ರಮುಖ ಹಂತವೊಂದನ್ನು ದಾಟುವುದು. ೨೧ರಂದು ಉತ್ತರಾಯಣ. ಗರಿಷ್ಠ ಅವಧಿಯ ರಾತ್ರಿ. ಇನ್ನು ಮುಂದೆ ಸೂರ್ಯ ಮತ್ತೆ ಉತ್ತರಕ್ಕೆ ಹೊರಡುವುದು.

ಮೊದಲವಾರದಲ್ಲಿ ಉಲ್ಕಾವೃಷ್ಟಿ ಇದೆ. ಫೇತಾನ್ ಎಂಬ ಹೆಸರಿನ ಕಾಯ ಬಿಟ್ಟು ಹೋದ ಧೂಳು ೧೪ರಂದು ಭೂಮಿಯ ಮೇಲೆ ಬೀಳಲಿದೆ. ಅದೇ ಹೊತ್ತಿಗೆ ಚಂದ್ರನ ಬೆಳಕೂ ಗರಿಷ್ಠವಾಗುವುದರಿಂದ ಹೆಚ್ಚಿನ ಉಲ್ಕೆಗಳು ಕಾಣಲಾರವು.

ಹುಣ್ಣಿಮೆ ಎಂಬ ಘಟನೆಯಾದ ಐದು ಗಂಟೆಗಳೊಳಗೆ ಚಂದ್ರ - ಭೂಮಿ ನಡುವಿನ ದೂರ ಕನಿಷ್ಠವಾಗುವುದರಿಂದ ಕಡಲತೀರದವರು ಅಂದು ಪ್ರತಿ ಹುಣ್ಣಿಮೆಗಿಂತ ಹೆಚ್ಚಿನ ಉಬ್ಬರ ಇಳಿತಗಳನ್ನು ಕಾಣಬಹುದು.

**ಖಗೋಳ ದಿನಚರಿ**

| | |
|---|---|
| ಡಿಸೆಂಬರ್ ೧ | ಶುಕ್ರ ಗುರು ಚಂದ್ರ ಸಮಾಗಮ * (ಶುಕ್ರದ ಆಚ್ಛಾದನೆ ಕಾಣುವುದಿಲ್ಲ) |
| ೪ | ನೆಪ್ಚೂನ್ ಚಂದ್ರ ಸಮಾಗಮ |
| ೫ | ಚಾಂದ್ರಮಾಸದ ಮೊದಲ ಪಾದ |
| ೧೨ | ಹುಣ್ಣಿಮೆ ೨೨:೦೭ಕ್ಕೆ |
| ೧೩ | ಚಂದ್ರ - ಭೂಮಿ ನಡುವೆ ಕನಿಷ್ಠ ದೂರ ೦೪:೧೦ಕ್ಕೆ |
| ೧೪ | ಜೆಮಿನಿಡ್ಸ್ ಉಲ್ಕಾ ವೃಷ್ಟಿ * |
| ೧೯ | ಚಾಂದ್ರಮಾಸದ ಕೊನೆಯ ಪಾದ. ಚಂದ್ರ - ಶನಿ ಸಮಾಗಮ * |
| ೨೧ | ಉತ್ತರಾಯಣ |
| ೨೬ | ಚಂದ್ರ - ಭೂಮಿ ನಡುವೆ ಗರಿಷ್ಠ ದೂರ |
| ೨೬ | ಮಂಗಳ - ಚಂದ್ರ ಸಮಾಗಮ |
| ೨೭ | ಅಮಾವಾಸ್ಯೆ ೧೭:೦೨ಕ್ಕೆ |
| ೨೮ | ಚಂದ್ರ - ಜ್ಯೇಷ್ಠಾ ಸಮಾಗಮ * |
| ೨೯ | ಬುಧ, ಚಂದ್ರ, ಗುರು ಸಮಾಗಮ (ಆಚ್ಛಾದನೆಗಳು ಕಾಣುವುದಿಲ್ಲ) |
| ೨೯ | ಮಂಗಳ - ಬುಧ - ಜ್ಯೇಷ್ಠಾ ಸಮಾಗಮ * |
| ೩೧ | ಬುಧ - ಗುರು ನಡುವೆ ಕನಿಷ್ಠ ಕೋನ *; ಚಂದ್ರ - ಶುಕ್ರ ಸಮಾಗಮ * |
| ಜನವರಿ ೧ | ಶನಿ ಹಿನ್ನಡೆ ಆರಂಭ |

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧



## ಬೆಳ್ಳಕ್ಕಿ ಹಿಂಡು

(ಸುಬ್ಬಣ್ಣ ರಂಗನಾಥ ಎಕ್ಕುಂಡಿ ಸಮಗ್ರ ಕಾವ್ಯ)

ಸಂ. : ವಿ. ಎ. ಪ್ರಹ್ಲಾದ್

**ಪುಟ :** ೧೬ + ೫೩೬ **ಬೆಲೆ :** ರೂ. ೩೫೦

**ಸಂಚಯ,** ನಂ. ೧೦೦, ೨ನೇ ಮುಖ್ಯರಸ್ತೆ, ೬ನೇ ಬ್ಲಾಕ್, ೩ನೇ ಸ್ಟೇಜ್, ಬನಶಂಕರಿ, ಬೆಂಗಳೂರು - ೫೬೦ ೦೮೫

ಇತ್ತೀಚಿನ ಮುಖ್ಯ ಕವಿಗಳಾದ ಸು. ರಂ. ಎಕ್ಕುಂಡಿಯವರ ಸಮಗ್ರ ಕಾವ್ಯ ಸಂಕಲನವಿದು. ಅವರ ಮೊದಲ ಸಂಕಲನ 'ಸಂತಾನ'ದ ರೊಮ್ಯಾಂಟಿಕ್ ಮನೋಭಾವದ ಕಾವ್ಯದಿಂದ ಹಿಡಿದು 'ಗೋದಿಯ ತೆನೆಗಳು'ವರೆಗಿನ ಕಾವ್ಯ ಬೆಳವಣಿಗೆಯ ದಿಕ್ಕನ್ನು, ಹರಹನ್ನು ತೋರುವ ಅಪರೂಪದ ಸಂಗ್ರಹವಿದು. 'ಕಥನ ಕವನ'ಗಳ ದೃಷ್ಟಿಯಿಂದ ಎಕ್ಕುಂಡಿಯವರ ಕಾವ್ಯಪ್ರಯೋಗ ಅನನ್ಯವಾದುದು. ''ಮಧ್ವ-ಮಾರ್ಕ್ಸ್ ಇಬ್ಬರೂ ಕೈಕೊಟ್ಟ ಜಗತ್ತಿನಲ್ಲಿ ಎಲ್ಲಿ ಈ ಎರಡೂ ಆದರ್ಶಗಳಾಚೆಗಿನ ಸೌಂದರ್ಯ-ಸತ್ಯಗಳು ಸಾಧಾರಣೀಕರಣವನ್ನು ಪಡೆದುಕೊಳ್ಳುತ್ತವೋ ಅಲ್ಲಿ ಅವರ ಕವಿತೆ ಮಿಥಿಲೆಯಾಗಿ, ಬೆಳ್ಳಕ್ಕಿಯಾಗಿ, ಬಕುಲದ ಹೂವಾಗಿ ಹಲಬಗೆಯ ಒಳಸೊಗಡುಗಳಿಂದ ನಮ್ಮ ಜನಸಾಂತರ ಸ್ಥಾಯಿಗಳನ್ನು ಕೆದಕುತ್ತದೆ. ಇದೇ ಅವರ ಕೃತಿಯ ಮಿಗಿಲಾದ ಗುಣ'' – ಎಂದು ಎಚ್. ಎಸ್. ಶಿವಪ್ರಕಾಶ್ ಹೇಳಿದ್ದಾರೆ. ಮಾರ್ಕ್ಸ್ ಯಾರಿಗೆ ಕೈಕೊಟ್ಟನೋ ತಿಳಿಯುವುದಿಲ್ಲ!

## ಯಾರು ನಾನು (ಜೀವನ ಕಥನ)

ಫ. ಶಿ. ಭಾಂಡಗೆ



**ಪುಟ :** xii + ೩೭೦ **ಬೆಲೆ :** ರೂ. ೨೦೦

**ವಿವೇಕ ಪ್ರಕಾಶನ,** ಕಾಗದಗೇರಿ ಓಣಿ, ಗದಗ - ೫೮೨ ೧೦೧

ಕರ್ನಾಟಕದ ಮುದ್ರಣೋದ್ಯಮದಲ್ಲಿ ಫಕೀರಸಾ ಶಿವಣಸಾ ಭಾಂಡಗೆಯವರ ಹೆಸರು ಗಮನಾರ್ಹವಾದುದು. ಸ್ವಪ್ರಯತ್ನದಿಂದ ಬದುಕನ್ನು ರೂಪಿಸಿಕೊಂಡು, ಪತ್ರಿಕಾಲಯ, ಪುಸ್ತಕ ಪ್ರಕಾಶನಗಳಲ್ಲಿ ವೃತ್ತಿದಾರರಾಗಿದ್ದುಕೊಂಡು, ಶಾಲೆಯಲ್ಲಿ ನಾಲ್ಕನೇ ತರಗತಿವರೆಗೆ ಮಾತ್ರ ಓದಿ, ಸ್ವಂತ ಪ್ರಯತ್ನದಿಂದ ಹಿಂದಿ, ಇಂಗ್ಲಿಷ್ ಕಲಿತು ಸಾಹಿತ್ಯ, ನಾಟಕರಚನೆ, ಅಭಿನಯವನ್ನು ಹವ್ಯಾಸ ಮಾಡಿಕೊಂಡು ಜೀವನಪೂರ್ತಿ ಸಂವೇದನಶೀಲರಾದ ಕ್ರಿಯಾಶೀಲರಾಗಿರುವ ಭಾಂಡಗೆಯವರ ಜೀವನಗಾಥೆಯಿದು. ಬದುಕಿನ ನಿರ್ವಹಣೆ ಮತ್ತು ಸಾಹಿತ್ಯ, ನಾಟಕದ ಹವ್ಯಾಸವನ್ನು ಒಟ್ಟಿಗೆ ನಿಭಾಯಿಸಲು ಸತತವಾಗಿ ಹೆಣಗಿದ ಕರ್ಮಯೋಗಿಯ ಕತೆಯಿದು. ಈ ಜೀವನ ಕಥನವು ನೆನಪುಗಳ ಸುರುಳಿ ಬಿಚ್ಚಿಕೊಂಡಂತೆ ಸಾಗುವ, ಕ್ರಮಾನುಗತಿಯಿಲ್ಲದ, ಆದರೆ ಅನುಭವ ಸಾಂದ್ರತೆಯಿಂದ ಕೂಡಿದ ಒಂದು ತಲೆಮಾರಿನ ಸಾಂಸ್ಕೃತಿಕ ವಿದ್ಯಮಾನದ ಕಥನವೂ ಆಗಿ ಮೂಡಿಬಂದಿದೆ. 'ಜೀವನ ಕಥನ' ವಿಭಾಗಕ್ಕೆ ಹೊಸ ಬಗೆಯ ಸೇರ್ಪಡೆಯಿದು.

## ಮುಖಾಮುಖಿ (ಸಮಾಜ ಸಂಸ್ಕೃತಿ ಚಳುವಳಿ)

ಡಾ// ಬಿ. ಎಂ. ಪುಟ್ಟಯ್ಯ



**ಪುಟ :** xii + ೨೧೪ **ಬೆಲೆ :** ರೂ. ೧೪೦

**ಸಿದ್ಧಾರ್ಥ ಪ್ರಕಾಶನ,** ಶಂಕರ ಕಾಲೋನಿ, ಎಂ. ಪಿ. ಪ್ರಕಾಶ್ ನಗರ, ಹೊಸಪೇಟೆ - ೫೮೩ ೨೦೧

ಕನ್ನಡದ ಪ್ರಗತಿಪರ ಚಿಂತಕ ಮತ್ತು ಹೋರಾಟಗಾರರಾದ ಡಾ// ಬಿ. ಎಂ. ಪುಟ್ಟಯ್ಯನವರ ವಿಮರ್ಶಾ ಸಂಕಲನವಿದು. ಇದರಲ್ಲಿ ಸಮಾಜ, ರಾಜಕೀಯ, ಆರ್ಥಿಕ, ಶಿಕ್ಷಣ, ಅಂಬೇಡ್ಕರ್, ಜನಪದ ಮತ್ತು ಹೋರಾಟಗಳಿಗೆ ಸಂಬಂಧಿಸಿದ ವಿಮರ್ಶಾ ಲೇಖನಗಳಿವೆ. ಜಾಗತೀಕರಣದ ಗಾಢ ಪರಿಣಾಮವನ್ನು ಸಮಕಾಲೀನ ಬದುಕಿನ ಜತೆಯಲ್ಲಿ ವಿಮರ್ಶಿಸುವ, ದಲಿತ ಚಿಂತನೆ ಮತ್ತು ಹೋರಾಟವನ್ನು ವಿಮರ್ಶಾತ್ಮಕವಾಗಿ ನೋಡುವ, ಶಿಕ್ಷಣದ ಬಗ್ಗೆ ಆರೋಗ್ಯಕರವಾಗಿ ಚಿಂತಿಸುವ, 'ಅಂಬೇಡ್ಕರ್' ವ್ಯಕ್ತಿತ್ವವನ್ನು ಮುಗ್ಧತೆಯಿಂದ ಆರಾಧಿಸದೆ ವಸ್ತುನಿಷ್ಠವಾಗಿಯೇ ವಿವರಿಸಿಕೊಂಡು ಪ್ರಸ್ತುತಗೊಳಿಸುವ, ಜನಪದ ಸಾಹಿತ್ಯ ಮತ್ತು ಬದುಕನ್ನು ಜಾಗತಿಕ ಹಿನ್ನೆಲೆಯಲ್ಲಿ ಗಮನಿಸುವ – ಹೀಗೆ ವೈವಿಧ್ಯಮಯ ಬರಹ ಈ ಸಂಕಲನದಲ್ಲಿದೆ.

## ಸೌಹಾರ್ದ ಸಾಹಿತ್ಯ ಸಂಗಮ

ಸಂ. : ಗೋಪಾಲ ಬಿ. ಶೆಟ್ಟಿ

**ಪುಟ :** ೧೩೮ **ಬೆಲೆ :** ರೂ. ೭೫

**ಸ್ವಾಗತ ಸಮಿತಿ, ಸೌಹಾರ್ದ ಸಾಹಿತ್ಯ ಸಮ್ಮೇಳನ - ೨೦೦೭, ಉಡುಪಿ,** ''ಶ್ರೀ ಲಕ್ಷ್ಮೀ ನರಸಿಂಹ'' ಕರಂಬಳ್ಳಿ, ಜನತಾ ಕಾಲನಿ ರಸ್ತೆ, ದೊಡ್ಡಣಗುಡ್ಡೆ, ಅಂಚೆ : ಕುಂಜಿಬೆಟ್ಟು, ಉಡುಪಿ-೨

ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ಉಡುಪಿಯಲ್ಲಿ ನಡೆದಿದ್ದ ಅಖಿಲ ಭಾರತ ೭೪ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಪ್ರತಿಭಟನೆಯಾಗಿ ಪ್ರಗತಿಪರ ಚಿಂತಕರೂ, ಸಮಾನ ಮನಸ್ಕರೂ ಸೇರಿದ ಒಕ್ಕೂಟದಿಂದ ನಡೆದ ವಿಚಾರ ಸಂಕಿರಣದ ಸಂಕಲನವಿದು. ಕೋಮು ಸೌಹಾರ್ದತೆ, ಸ್ವಾತಂತ್ರ್ಯ ಮತ್ತು ಜಾತ್ಯತೀತತೆಯ ಮೌಲ್ಯಗಳನ್ನು ಎತ್ತಿಹಿಡಿಯುವಂತಹ ವಿಚಾರಗಳಿರುವ ಇಲ್ಲಿನ ಭಾಷಣಗಳು ನಮ್ಮಲ್ಲಿ ಆಗಬೇಕಾದ ಕ್ರಿಯಾಶೀಲ ಬೆಳವಣಿಗೆ ಕುರಿತ ಚಿಂತನೆಗಳಾಗಿವೆ. ಕೆಲವು ಸಮ್ಮೇಳನಗಳಲ್ಲಿನ ಯಾಂತ್ರಿಕ ಆಚಾರ-ವಿಚಾರ, ವೈಭವವನ್ನು ಖಂಡಿಸುತ್ತಾ, ಪ್ರಗತಿಪರ ಆಲೋಚನೆಗಳ ಮೂಲಕ ಸದ್ಯದ ಸಮಸ್ಯೆಗಳನ್ನು ಗುರುತಿಸಿ ಸಾಹಿತ್ಯದ ಹೊಣೆಗಾರಿಕೆಯನ್ನು ನೆನಪಿಸುತ್ತವೆ.

## ಗಾಂಧಿಚಿತ್ರದ ನೋಟು (ಕಥಾ ಸಂಕಲನ)

ಸುನಂದಾ ಪ್ರಕಾಶ ಕಡಮೆ

**ಪುಟ :** ೯೬ **ಬೆಲೆ :** ರೂ. ೭೦

**ಅಕ್ಷರ ಪ್ರಕಾಶನ,** ಹೆಗ್ಗೋಡು, ಸಾಗರ - ೫೭೭ ೪೧೭

ಸುನಂದಾ ಪ್ರಕಾಶ ಕಡಮೆಯವರ ಎರಡನೆಯ ಕಥಾಸಂಕಲನವಿದು. ಉತ್ತರ ಕನ್ನಡ ಭಾಷಾ ಸೊಗಡಿನಿಂದ ಜೀವನಾನುಭವಗಳನ್ನು ಗಾಢವಾಗಿ ನವುರಾಗಿ ಹೆಣೆವ ಸುನಂದಾರವರ 'ಕಥಾ' ಪ್ರಪಂಚ ಈಗಾಗಲೇ ನಾಡಿಗೆ ಪರಿಚಿತವಾದದ್ದು. ಈ ಕಥಾಸಂಕಲನದಲ್ಲಿ ಸೂಕ್ಷ್ಮವಾಗಿ ಚಿತ್ರಿತವಾದ ಪ್ರಬುದ್ಧಗೊಂಡ ಕಥನಕೌಶಲ್ಯದಿಂದ ಕೂಡಿದ ಹದಿಮೂರು ಕತೆಗಳಿವೆ. ಸಂಸಾರನಿತ್ಯದ ವಿವರಗಳೇ ಸುನಂದಾ ಅವರ ಬಹುಪಾಲು ಕತೆಗಳ ಮೂಲವಸ್ತು. 'ಪತ್ರೊಡೆ', 'ಚಿನ್ನಿದಾಂಡು', 'ಚೌಕ ಮತ್ತು ಗೋಲ', 'ನಿನ್ನದೊಂದು ನೋಟ ಬೇಕು', 'ತಂತಿ', 'ಗಾಂಧಿಚಿತ್ರದ ನೋಟು' – ಮೊದಲಾದ ಕತೆಗಳ ಶಕ್ತಿ ಇರುವುದು ಅವುಗಳ ನಿರೂಪಣೆಯ ಹೊಸತನದಲ್ಲಿ. ''ಸಾವಧಾನವಾಗಿ ಕಥಾಪಾತ್ರಗಳ ಒಳಬದುಕನ್ನು ನೋಡಿ, ಅವರ ಮಾತುಗಳನ್ನು ಆಲಿಸಿ, ಅವುಗಳೊಂದಿಗೆ ತಾದಾತ್ಮ್ಯವನ್ನು ಬೆಳೆಸುವ ಸುನಂದಾರವರು ತಮ್ಮ ಕಥನಲೋಕದ ವಿಸ್ತಾರವನ್ನು ಅರಿಯಬಲ್ಲರು ಮತ್ತು ಅದನ್ನು ನಮಗೂ ಮನಮುಟ್ಟುವಂತೆ ಕಾಣಿಸಬಲ್ಲರು'' – ಎಂದು ಪ್ರಸ್ತಾವನೆಯಲ್ಲಿರುವ ವಿವೇಕ ಶಾನಭಾಗರ ಮಾತುಗಳು, ಇಲ್ಲಿ ಉತ್ಪ್ರೇಕ್ಷೆ ಎನಿಸದೆ ವಾಸ್ತವವಾದವು ಎನಿಸುತ್ತವೆ.

## ಸೃಜನೆಯ ಮೂಡು

ಡಾ// ಪ್ರೀತಿ ಶುಭಚಂದ್ರ




**ಪುಟ :** ೩೬೮ **ಬೆಲೆ :** ರೂ. ೧೮೫

**ರೂಪ ಪ್ರಕಾಶನ,** ನಂ. ಬಿ-೨೧, ಮಹಡಿ, ಮಲ್ಲಿಗೆ ರಸ್ತೆ, ಕುವೆಂಪು ನಗರ, ಮೈಸೂರು - ೫೭೦ ೦೨೩

ಕನ್ನಡ ಸಾಹಿತ್ಯದ ಗಂಭೀರ ಚಿಂತಕರಾದ ಡಾ// ಪ್ರೀತಿ ಶುಭಚಂದ್ರರವರ ವಿಮರ್ಶಾ ಸಂಕಲನವಿದು. ಇಲ್ಲಿನ ವಿಮರ್ಶಾ ಲೇಖನಗಳ ವಸ್ತು ವೈವಿಧ್ಯ ವಿಸ್ತಾರವಾಗಿದ್ದು ಗಂಭೀರ ಅಧ್ಯಯನದಿಂದ ಕೂಡಿದೆ. ಆಧುನಿಕ ಕನ್ನಡ ಮಹಿಳಾ ಸಾಹಿತ್ಯ, ಕನ್ನಡ ಮಹಿಳಾ ವಿಮರ್ಶೆ, ಜನಪ್ರಿಯ ಸಾಹಿತ್ಯದಲ್ಲಿ ಮಹಿಳೆಯ ಅಭಿವ್ಯಕ್ತಿ, ವಡ್ಡಾರಾಧನೆ, ಜನಪದ ಸಾಹಿತ್ಯದಲ್ಲಿ ಮಹಿಳೆ, ಗಾಂಧಿವಾದ ಮತ್ತು ಸ್ತ್ರೀವಾದ, ವಿಜಯಾ ದಬ್ಬೆಯವರ ಸಂಸ್ಕೃತಿ ಕಥನ – ಹೀಗೆ ಬಹಳಷ್ಟು ಲೇಖನಗಳು 'ಸಾಹಿತ್ಯದಲ್ಲಿ ಮಹಿಳೆ'ಯನ್ನು ಮುಖ್ಯವಾಗಿಸಿಕೊಂಡು ಚರ್ಚಿಸಿದಂತಹವು. ಇಲ್ಲಿನ ಎಲ್ಲಾ ಲೇಖನಗಳಲ್ಲಿ ಸ್ತ್ರೀವಾದಿ ಚಿಂತನೆಯ ನೆಲೆಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಹಾಗಾಗಿ ಸಾಮಾನ್ಯ ಓದಿಗೆ ಹೊರತಾದ ಹಲವಾರು ಒಳನೋಟಗಳನ್ನು ವಿಮರ್ಶಿಸಿ ಕಾಣಿಸಿದ್ದಾರೆ. ವಿಮರ್ಶಾ ಪರಿಕಲ್ಪನೆಗಳ ಹಾಗೂ ಸೈದ್ಧಾಂತಿಕ ಚಿಂತನೆಗಳ ಭಾರವಿಲ್ಲದೆ ಓದಿಸಿಕೊಳ್ಳುವ ವಿಮರ್ಶಾ ಬರಹಗಳಿವು.

– ಡಾ// ಸುಜಾತ ಲಕ್ಷ್ಮೀಪುರ

ನಂ. ೩೨೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು - ೫೬೦ ೦೧೯

# ಆದರ್ಶ ಮಹಿಳೆ : ಸಾವಿತ್ರಿಬಾ ಫುಲೆ

ಡಾ|| ಎಸ್. ನರೇಂದ್ರಕುಮಾರ್

ಸಾವಿತ್ರಿಬಾ ಫುಲೆಯವರು ಭಾರತದ ಮೊಟ್ಟಮೊದಲ ಶಿಕ್ಷಕಿ, ಸಮಾಜ ಸುಧಾರಕಿ, ಮಹಿಳಾ ಹೋರಾಟಗಾರ್ತಿ ಹಾಗೂ ಮಹಾಮಾನವತಾವಾದಿಯಾಗಿದ್ದಾರೆ. ಹೀಗೆ ಎಲ್ಲವರಲ್ಲೂ ಮೊದಲಿಗರಾದ ಸಾವಿತ್ರಿಬಾ ಅವರು ತಮ್ಮ ಜೀವಿತದ ಕೊನೆ ಕ್ಷಣದವರೆಗೂ ಈ ಬದ್ಧತೆಯಲ್ಲೇ ಬಾಳಿ ಬದುಕಿದವರು. ಬಿಡುಗಡೆಗಾಗಿ ತವಕಿಸುವ ಹಾಗೂ ಸಮಾಜ ಸುಧಾರಣೆಗಾಗಿ ಹಾತೊರೆಯುವ ಪ್ರತಿಯೊಬ್ಬ ಮಹಿಳೆಗೂ ಇವರದು ನಿಜಕ್ಕೂ ಮಾದರಿ ವ್ಯಕ್ತಿತ್ವವಾಗಿದೆ.

ಸಾವಿತ್ರಿಬಾ ಫುಲೆಯವರು ಹುಟ್ಟಿದ್ದು ಜನವರಿ ೩, ೧೮೩೧ರಲ್ಲಿ. ಮಹಾರಾಷ್ಟ್ರದ ಸತಾರಾ ಜಿಲ್ಲೆಯ ನಾಯಗಾಂವ್ ಊರಿನ ನಿವಾಸಿಯಾದ ನೇವಸೆ ಪಾಟೀಲ್ ಎಂಬುವರ ಮಗಳು ಸಾವಿತ್ರಿ. ಅಂದು ಸಮಾಜದಲ್ಲಿ ಸಹಜವೆಂಬಂತೆ ಚಾಲ್ತಿಯಲ್ಲಿದ್ದ ಬಾಲ್ಯ ವಿವಾಹ ಇವರದು. ಸತಾರ ಜಿಲ್ಲೆಯ ಕಟಗುಣ ಎಂಬ ಹಳ್ಳಿಯ ಜ್ಯೋತಿಬಾ ಫುಲೆಯವರೊಂದಿಗೆ ೧೮೪೦ರಲ್ಲಿ ವಿವಾಹ ನಡೆದಾಗ ಇವರಿಗೆ ಕೇವಲ ಒಂಭತ್ತು ವರ್ಷದ ಹರೆಯ. ವಿಶಾಲ ಮನಸ್ಸಿನ ಹಾಗೂ ಪ್ರಗತಿಪರ ಕಾಳಜಿಯ ಮಹಾತ್ಮ ಜ್ಯೋತಿಬಾ ಫುಲೆಯವರ (೧೮೨೭-೧೮೯೦) ಬಾಳಸಂಗಾತಿಯಾದ್ದರಿಂದ ಸಾವಿತ್ರಿಬಾ ಅವರು ಭಾರತೀಯ ಸಮಾಜಕ್ಕೆ ಅವಿಸ್ಮರಣೀಯ ಕೊಡುಗೆಗಳನ್ನು ನೀಡಲು ಸಾಧ್ಯವಾಯಿತು. ಈ ದಂಪತಿಗಳಿಬ್ಬರೂ ಸಮಾನ ಮನಸ್ಕರಾಗಿದ್ದರು. ಇಬ್ಬರೂ ವ್ಯವಸ್ಥೆಯ ಜಡತೆಗಳ ಬಗೆಗೆ ಮುಕ್ತವಾಗಿ ಚರ್ಚಿಸುತ್ತಿದ್ದರು. ಮೂಢನಂಬಿಕೆಗಳನ್ನು ನಾಶಗೊಳಿಸುವ ಬೆಳಕಿನ ಮಾರ್ಗಗಳನ್ನು ಯಾವಾಗಲೂ ಹುಡುಕುತ್ತಿದ್ದರು ಹಾಗೂ ಸಕ್ರಿಯವಾಗಿ ತೊಡಗುತ್ತಿದ್ದರು. ಈ ಕಾರಣಗಳಿಂದಲೇ ಸಾವಿತ್ರಿಬಾ ಅವರ ಬಗೆಗೆ ಹೇಳುವಾಗ ಜ್ಯೋತಿಬಾ ಅವರನ್ನು ಒಟ್ಟೊಟ್ಟಿಗೇ ನೆನಪಿಸಿಕೊಳ್ಳಬೇಕಾಗುತ್ತದೆ. ಶೂದ್ರ ವರ್ಗದ ಮಾಲಿ ಜಾತಿಗೆ ಸೇರಿದ ಇವರಿಬ್ಬರದೂ ಆದರ್ಶ ದಾಂಪತ್ಯ.

ಇಂಡಿಯಾದ ಬಹುಪಾಲು ಸಾಮಾಜಿಕ ಅನಿಷ್ಟಗಳಾದ ಅಸ್ಪೃಶ್ಯತೆ, ಜಾತಿ ಪದ್ಧತಿ ಹಾಗೂ ಮಹಿಳಾ ಶೋಷಣೆಗೆ ಮಾತ್ರವಲ್ಲದೆ ಬಾಲ್ಯವಿವಾಹ, ಸತಿ ಪದ್ಧತಿ, ವಿಧವಾ ಪದ್ಧತಿ, ದೇವದಾಸಿ ಪದ್ಧತಿ ಮುಂತಾದವುಗಳಿಗೆ ಜನಸಮುದಾಯಗಳು ಶಿಕ್ಷಣದಿಂದ ಶತ ಶತಮಾನಗಳ ಕಾಲ ವಂಚಿತರಾಗಿರುವುದೇ ಕಾರಣವೆಂಬ ಸ್ಪಷ್ಟ ಅರಿವು ಈ ಇಬ್ಬರಿಗೂ ಇತ್ತು. ಧರ್ಮ ಹಾಗೂ ದೇವರ ಹೆಸರಿನಲ್ಲಿ ಆಚರಣೆಯಲ್ಲಿರುವ ಎಲ್ಲ ಬಗೆಯ ನೀಚ ಪದ್ಧತಿಗಳನ್ನು ಇನ್ನಿಲ್ಲವಾಗಿಸಬೇಕಾದರೆ ಶಿಕ್ಷಣ ಮಾತ್ರವೇ ಸಿದ್ಧೌಷಧ ಎಂದು ಇವರು ತಿಳಿದಿದ್ದರು.

ಬ್ರಿಟಿಷ್ ಸರ್ಕಾರದ ಆಡಳಿತವಿದ್ದ ಭಾರತದಲ್ಲಿ ಆದಾಗಲೇ ಲಾರ್ಡ್ ಮೆಕಾಲೆ ಕಾರಣವಾಗಿ ಮುಕ್ತ ಶಿಕ್ಷಣ ಪದ್ಧತಿ ಜಾರಿಗೆ ಬಂದಿತ್ತು. ಮಹಾರಾಷ್ಟ್ರದಲ್ಲಿಯೂ ಅನೇಕ ಸರ್ಕಾರಿ ಶಾಲೆಗಳು ಹಾಗೂ ಕ್ರಿಶ್ಚಿಯನ್ ಶಿಕ್ಷಣ ಸಂಸ್ಥೆಗಳು ಆರಂಭಗೊಂಡಿದ್ದವು. ಆದರೆ ಅಲ್ಲಿ ಪ್ರವೇಶ ಪಡೆದಿದ್ದವರೆಲ್ಲ ಈ ಸಮಾಜದಲ್ಲಿ ಅತ್ಯುನ್ನತ ಜಾತಿ ಎಂದು ಪರಿಗಣಿಸಲ್ಪಟ್ಟವರ ಹಾಗೂ ಶ್ರೀಮಂತರ ಮಕ್ಕಳಾಗಿದ್ದರು. ಆದರಲ್ಲೂ ಆಗ ಕಲಿಯುತ್ತಿದ್ದವರೆಲ್ಲ ಹುಡುಗರು ಮಾತ್ರವೇ ಆಗಿದ್ದರು. ಹುಡುಗಿಯರಿಗೆ ಶಾಲಾ ಪ್ರವೇಶದ ಕಿಂಚಿತ್ ಅವಕಾಶವೂ ಇರಲಿಲ್ಲ. ಮಹಿಳೆ ಅಕ್ಷರ ಕಲಿಯಬಾರದು ಹಾಗೂ ಯಾರೂ ಆಕೆಗೆ ಕಲಿಸಲೂಬಾರದೆಂಬ ಪ್ರಬಲ ಮನುವಾದಿ ನಂಬಿಕೆಯೇ ಇದಕ್ಕೆ ಕಾರಣವಾಗಿತ್ತು. ಮಹಿಳೆ ಮನೆಯಿಂದ ಹೊರಗೆ ಹೋಗುವುದೆಂದರೆ ಹಿಂದೂಧರ್ಮಕ್ಕೆ ಮತ್ತು ಸನಾತನ ಸಂಪ್ರದಾಯಕ್ಕೆ ಅಪಮಾನ ಎಂದೇ ಭಾವಿಸಲಾಗಿತ್ತು. ಇಂತಹ ಸಂದರ್ಭದಲ್ಲಿ ಸಾವಿತ್ರಿಬಾ ಅವರ ಪ್ರೇರೇಪಣೆಯಿಂದ ಜ್ಯೋತಿಬಾ ಅವರು ತಾವೇ ಸ್ವತಃ ಹೆಣ್ಣು ಮಕ್ಕಳಿಗಾಗಿ ಶಾಲೆಯೊಂದನ್ನು ತೆರೆಯಲು ಇಚ್ಛಿಸಿದರು. ಆದರೆ ಸಂಪ್ರದಾಯದ ಕಟ್ಟಾ ಅಭಿಮಾನಿಗಳಾಗಿದ್ದ ಅಂದಿನ ಶಿಕ್ಷಕರು ಹೆಣ್ಣು ಮಕ್ಕಳಿಗೆ ತಾವು ಪಾಠ ಹೇಳಲು ಬಲವಾಗಿ ನಿರಾಕರಿಸಿದರು. ಅನ್ಯಮಾರ್ಗವಿಲ್ಲದೆ ಸ್ವತಃ ಜ್ಯೋತಿಬಾ ಅವರು ತಮ್ಮ ಸಂಗಾತಿ ಸಾವಿತ್ರಿಬಾ ಅವರಿಗೆ ಮನೆಯಲ್ಲೇ ಅಕ್ಷರ ಕಲಿಸತೊಡಗಿದರು. ತಮ್ಮಿಬ್ಬರ ಸಾಮಾಜಿಕ ಕನಸುಗಳನ್ನು ನನಸಾಗಿಸುವ ಮಹಾನ್ ಉದ್ದೇಶದಿಂದಲೇ ಸಾವಿತ್ರಿಬಾ ಅವರು ಪಠತೊಟ್ಟವರಂತೆ ತಮ್ಮ ಸಂಗಾತಿ ಕಲಿಸಿದ ಪಾಠಗಳನ್ನೆಲ್ಲ ತೀವ್ರ ಆಸಕ್ತಿಯಿಂದ ಕಲಿತರು. ಆ ಮೂಲಕ ನುರಿತ ಶಿಕ್ಷಕಿ ಹಾಗೂ ಮಾನವವರ ವಿಚಾರವಾದಿಯಾಗಿ ರೂಪುಗೊಂಡರು.

ತರುವಾಯ ೧೮೪೮ರಲ್ಲಿ ಮಹಾರಾಷ್ಟ್ರದ ಪುಣೆಯ ಬುಧವಾರ ಪೇಟೆಯಲ್ಲಿ ಹೆಣ್ಣುಮಕ್ಕಳ ಶಾಲೆಯನ್ನು ತೆರೆದರು. ಇದೇ ಭಾರತದ ಮೊಟ್ಟ ಮೊದಲ ಹೆಣ್ಣು ಮಕ್ಕಳ ಶಾಲೆ, ಅಲ್ಲದೆ, ಭಾರತೀಯರೊಬ್ಬರು ಮಹಿಳೆಯರಿಗಾಗಿ ಆರಂಭಿಸಿದ ಪ್ರಪ್ರಥಮ ಶಾಲೆಯೂ ಸಹ ಆಗಿದೆ. ಇದು ಆ ಕಾಲಕ್ಕೆ ಅಸಾಧಾರಣವಾದ ಕ್ರಾಂತಿಯೇ ಆಗಿತ್ತು. ಮೊದಲ ದಿನವೇ ಈ ಶಾಲೆಗೆ ಬ್ರಾಹ್ಮಣ, ಶೇಣ್ವಿ, ಪ್ರಭು ಜಾತಿಯವರ ಒಂಭತ್ತು ಹುಡುಗಿಯರು ಪ್ರವೇಶ ಪಡೆದರು. ಅಲ್ಲದೆ ಈ ಶಾಲೆಗೆ ಸಾವಿತ್ರಿಬಾ ಫುಲೆಯವರೇ ಮೊದಲ ಶಿಕ್ಷಕಿಯಾದರು. ಆಗ ಅವರಿಗೆ ಕೇವಲ ಹದಿನೇಳು ವರ್ಷ. ಆದರೆ ಆಗಾಗಲೇ ತಮ್ಮ ಸಂಗಾತಿಯಿಂದ ತರಬೇತಿ ಪಡೆದಿದ್ದ ಅವರು ಶಿಕ್ಷಣದ ಕಲೆಯನ್ನು ರೂಢಿಸಿಕೊಂಡಿದ್ದರು. ಹೆಣ್ಣುಮಕ್ಕಳಿಗೆ ಅಕ್ಷರ ಕಲಿಸುವ ಜೊತೆ ಜೊತೆಗೇ ಸಾವಿತ್ರಿಬಾ ಅವರು ಆ ಮಕ್ಕಳಿಗೆ ಚಿಂತನೆ ಮಾಡುವ ಮನೋಭಾವನೆಗಳನ್ನು ಬೆಳೆಸತೊಡಗಿದರು.

ಹೀಗೆ ಶಾಲೆ ತೆರೆದು ಪಾಠ ಮಾಡತೊಡಗಿದ ಆರಂಭದಲ್ಲಿ ಸಾವಿತ್ರಿಬಾ ಅವರು ಸಂಪ್ರದಾಯವಾದಿ ಮತಿಗೇಡಿಗಳಿಂದ ಎದುರಿಸಿದ ಸಮಸ್ಯೆಗಳು ಅಷ್ಟಿಷ್ಟಲ್ಲ. ಸಾವಿತ್ರಿಬಾ ಅವರು ಶಾಲೆಗೆ ಹೊರಟಾಗ ಇಂತಹ ವಿಕಾರಿಗಳು ಅವರ ಮೇಲೆ ಕೆಸರು ಹಾಗೂ ಸೆಗಣಿಯನ್ನು ಎರಚುತ್ತಿದ್ದರು. ಅಲ್ಲದೆ ಒಮ್ಮೊಮ್ಮೆ ಕಲ್ಲನ್ನೂ ತೂರುತ್ತಿದ್ದರು. ಸಾವಿತ್ರಿಬಾ ಅವರು



ಸಾವಿತ್ರಿಬಾ ಅವರದು ಬಹುದೊಡ್ಡ ಆದರ್ಶದ ಬದುಕು. ನಿಜವಾದ ಅಂತಃಕರಣವುಳ್ಳ ಮಹಿಳಾ ಚಳವಳಿಯು ಎಂದಿಗೂ ಇವರಂತೆಯೇ ಪ್ರಗತಿಪರ ಕೆಲಸಗಳನ್ನು ಮಾಡಬೇಕಿದೆ. ಅಲ್ಲದೆ ಭಾರತೀಯ ಸಮಾಜ ಎಂದೆಂದಿಗೂ ನೆನೆಯಲೇಬೇಕಾದ ಮಹಾನ್ ಮಹಿಳೆ ಸಾವಿತ್ರಿಬಾ ಫುಲೆ ಅವರು

ಇದಾವುದರಿಂದಲೂ ಎದೆಗುಂದಲಿಲ್ಲ. ಇಂತಹವರ ಮನಃಸ್ಥಿತಿಯ ಬಗೆಗೆ ಕನಿಕರಿಸಿ ತಮ್ಮ ಕಾಯಕವನ್ನು ಮುಂದುವರೆಸಿದರು. ಆದರೆ ತಿಳಿಗೇಡಿಗಳು ಸುಮ್ಮನಾಗಲಿಲ್ಲ, ಜ್ಯೋತಿಬಾ ಅವರ ತಂದೆಯಾದ ಗೋವಿಂದರಾಯರಿಗೆ ದೂರು ನೀಡಿದರು: ''ಮಹಿಳೆಯರಿಗೆ ಶಿಕ್ಷಣ ನೀಡುವುದು ಧರ್ಮಶಾಸ್ತ್ರ ಹಾಗೂ ದೇವರಿಗೆ ಅಪಚಾರ ಎಸಗಿದಂತೆ. ಧರ್ಮದಲ್ಲಿ ಯಾವುದು ನಿಷೇಧಿಸಲ್ಪಟ್ಟಿದೆಯೋ ಅದನ್ನೆ ನಿಮ್ಮ ಮಗ ಹಾಗೂ ಸೊಸೆ ಮಾಡುತ್ತಿದ್ದಾರೆ. ಇದಕ್ಕಿಂತ ದೊಡ್ಡ ಪಾಪ ಮತ್ತೊಂದಿಲ್ಲ. ದೇವರು, ಧರ್ಮ, ಶಾಸ್ತ್ರ, ಸಂಪ್ರದಾಯ ಇದಾವುದನ್ನೂ ಲೆಕ್ಕಿಸದೆ ನಿಮ್ಮ ಸೊಸೆ ಶಾಲೆಗೆ ಹೋಗಿ ನಿಮಗೆ ಕಳಂಕ ತರುತ್ತಿದ್ದಾಳೆ. ನಿಮ್ಮ ಸೊಸೆ ಕಲಿತು ಶಿಕ್ಷಕಿಯಾಗುವುದೆಂದರೇನು ? ಇದರಿಂದ ಆಕೆಯ ತೌರುಮನೆ ಹಾಗೂ ಗಂಡನ ಮನೆಯ ಕಡೆಯವರೆಲ್ಲ ನರಕಯಾತನೆ ಅನುಭವಿಸುತ್ತಾರೆ. ನಮ್ಮ ಪುರಾತನ ಶಾಸ್ತ್ರಗಳನ್ನು ಆಧಾರವಾಗಿಟ್ಟುಕೊಂಡು ನಾವು ನಿಮಗೆ ಈ ಆಗುಹೋಗುಗಳನ್ನು ತಿಳಿಸಿದ್ದೇವೆ. ಇದರಿಂದ ಇಲ್ಲಿನ ನಿವಾಸಿಗಳೆಲ್ಲ ಸಿಟ್ಟಿಗೆದ್ದಿದ್ದಾರೆ. ನಾವೆಲ್ಲ ನಿಮ್ಮ ವಂಶಕ್ಕೆ ಬಹಿಷ್ಕಾರ ಹಾಕುವುದನ್ನು ತಪ್ಪಿಸಬೇಕಾದರೆ ನೀವು ನಿಮ್ಮ ಸೊಸೆಯನ್ನು ಶಾಲೆಗೆ ಕಾಲಿಡದಂತೆ ಮಾಡಿ''. ಹೀಗೆ ಇನ್ನೂ ಮುಂತಾಗಿ ಬೆದರಿಕೆ ಹಾಕಿದರು. ಜ್ಯೋತಿಬಾ ಅವರ ತಂದೆಗೆ ಈ ಮಾತುಗಳಿಂದ ಕಸಿವಿಸಿ ಹಾಗೂ ಭಯವಾಗತೊಡಗಿತು. ತಡಮಾಡದೆ ಕೂಡಲೆ ಒಂದು ದಿನ ಈ ವಿಷಯವಾಗಿ ಸೊಸೆ ಹಾಗೂ ಮಗನ ಜೊತೆ ಜಗಳವಾಡತೊಡಗಿದರು. ದಂಪತಿಗಳು ತಾವು ಮಾಡುತ್ತಿರುವ ಕೆಲಸವನ್ನು ಸಮರ್ಥಿಸ ತೊಡಗಿದಾಗ ಗೋವಿಂದರಾಯರು ''ತೆರೆದಿರುವ ಹೆಣ್ಣುಮಕ್ಕಳ ಪಾಠಶಾಲೆಯನ್ನು ಮುಚ್ಚಿ, ಇಲ್ಲವೇ ನನ್ನ ಮನೆಯಲ್ಲಿ ಇರಲು ನಿಮಗೆ ಅವಕಾಶವಿಲ್ಲ'' ಎಂಬ ಅಂತಿಮ ತೀರ್ಮಾನ ನೀಡಿದರು. ಸಾವಿತ್ರಿಬಾ ಹಾಗೂ ಜ್ಯೋತಿಬಾ ಅವರಿಗೆ ತಾವು ಕೈಗೊಂಡಿದ್ದ ಸತ್ಕಾರ್ಯದ ಬಗೆಗೆ ಗೌರವ, ಕಾಳಜಿಯ ಜೊತೆಗೆ ಅದರಿಂದುಂಟಾಗುವ ಗುಣಾತ್ಮಕ ಪರಿಣಾಮದ ಬಗೆಗೆ ಖಚಿತತೆ ಇತ್ತು. ಹಾಗಾಗಿ ತಾವು ತೆರೆದಿದ್ದ ಶಾಲೆಯನ್ನು ಮುಚ್ಚಲು ನಿರಾಕರಿಸಿದರು. ಬದಲಿಗೆ, ೧೮೪೯ರಲ್ಲಿ ಈ ದಂಪತಿಗಳು ಮನೆಯಿಂದ ಹೊರನಡೆದರು. ಆದರೆ ಮನೆಯಿಂದ ದೂರವಾಗಿ ಸ್ವಾವಲಂಬನೆಯಿಂದ ದುಡಿದು ಪ್ರತ್ಯೇಕವಾಗಿ ಬದುಕಬೇಕಾದ ಸಂಕಷ್ಟದ ಕಾರಣವಾಗಿ ತಾವು ತೆರೆದ ಶಾಲೆಯನ್ನೇ ಒಂದು ವರ್ಷದಲ್ಲಿ ಮುಚ್ಚಬೇಕಾಯಿತು. ತಮಗೆ ಎದುರಾದ ಕುಟುಂಬ ನಿರ್ವಹಣೆಗಾಗಿ ಜ್ಯೋತಿಬಾ ಅವರು ಸೇತುವೆ ಮತ್ತು ಕಟ್ಟಡ ದುರಸ್ತಿ ಹಾಗೂ ಮನೆಕಟ್ಟುವ ಗುತ್ತಿಗೆದಾರನ ಕೆಲಸ ಹಿಡಿದರು. ಸಾವಿತ್ರಿಬಾ ಫುಲೆಯವರು ಈ ಸಂದರ್ಭದಲ್ಲಿ ತಮ್ಮ ಸಂಗಾತಿಗೆ ನೀಡಿದ ನೈತಿಕ ಸ್ಥೈರ್ಯ ಅದ್ಭುತವಾದುದು.

ಕುಟುಂಬವು ಆರ್ಥಿಕವಾಗಿ ಸ್ವಲ್ಪ ಚೇತರಿಸಿಕೊಳ್ಳುತ್ತಿದ್ದಂತೆ ೧೮೫೧ರಲ್ಲಿ ಈ ದಂಪತಿಗಳು ಗಂಜಪೇಟೆ ಹಾಗೂ ಪುಣೆಯಲ್ಲಿ ಒಂದೊಂದು ಹೆಣ್ಣುಮಕ್ಕಳ ಶಾಲೆಗಳನ್ನು ತೆರೆದರು. ಸಾವಿತ್ರಿಬಾ ಅವರು ಎಂದಿನಂತೆ ಶಿಕ್ಷಕಿಯಾಗಿ ಕಾರ್ಯ ನಿರ್ವಹಿಸತೊಡಗಿದರು. ಮುಂದೆ ೧೮೫೩ರಲ್ಲಿ ಇನ್ನೊಂದು ಕ್ರಾಂತಿಕಾರಕ ತೀರ್ಮಾನ ತೆಗೆದುಕೊಂಡರು. ಈ ಬಾರಿ ಅವರು ಅಸ್ಪೃಶ್ಯರೆಂದು ಈ ನೆಲದಲ್ಲಿ ಅಪಮಾನಿಸಿ ದಮನಿಸಲ್ಪಟ್ಟವರ ಮಕ್ಕಳಿಗಾಗಿ ಶಾಲೆಯನ್ನು ತೆರೆದರು. ಇದೂ ಸಹ ಭಾರತದಲ್ಲಿ ಅಸ್ಪೃಶ್ಯರಿಗಾಗಿ ತೆರೆದ ಪ್ರಪ್ರಥಮ ಶಾಲೆ. ಸಾಮಾಜಿಕವಾಗಿ ಅಪಮಾನಿಸಲ್ಪಟ್ಟವರ ಮಕ್ಕಳನ್ನು ತಮ್ಮ ಕರುಣಾ ಪ್ರೀತಿಯ ಹಸ್ತಗಳಿಂದ ಸ್ಪರ್ಶಿಸಿ ಪಾಠಗಳನ್ನು ಹೇಳಿಕೊಟ್ಟರು. ಪ್ರತಿರೋಧಗಳ ನಡುವೆಯೂ ಹೀಗೆ ಸಾಮಾಜಿಕ ಬದಲಾವಣೆಗೆ ನಾಂದಿ ಹಾಡಿದರು. ಇಂತಹ ಸಂದರ್ಭದಲ್ಲಿ ಸನಾತನವಾದಿಗಳು ಇನ್ನಷ್ಟು ಸಿಟ್ಟಿಗೆದ್ದರು. ಆದರೆ ಈ ಮೂಢರ ಅವಿವೇಕಗಳನ್ನು ನಿರ್ಲಕ್ಷಿಸಿ ಸಾವಿತ್ರಿಬಾ ಅವರು ಪ್ರಾಮಾಣಿಕವಾಗಿ ಅಕ್ಷರ ಹಾಗೂ ವೈಚಾರಿಕತೆಯ ಪಾಠಗಳನ್ನು ಮಹಿಳಾ ಹಾಗೂ ಅಸ್ಪೃಶ್ಯ ಮಕ್ಕಳಿಗೆ ಬೋಧಿಸತೊಡಗಿದರು. ಮತ್ತೆ ಕೆಲವು ವರ್ಷಗಳ ಬಳಿಕ ಶೂದ್ರರ ಮಕ್ಕಳಿಗಾಗಿಯೂ ಶಾಲೆಯನ್ನು ಆರಂಭಿಸಿದರು. ಹೀಗೆ ಫುಲೆ ದಂಪತಿಗಳು ೧೮೪೮ರಿಂದ ೧೮೫೨ರವರೆಗೆ ಮಹಾರಾಷ್ಟ್ರದಾದ್ಯಂತ ಒಟ್ಟು ೧೮ ಪಾಠಶಾಲೆಗಳನ್ನು ತೆರೆದ ದಾಖಲೆಗಳಿವೆ. ಇದಕ್ಕಾಗಿ ತಮ್ಮ ಹಿತೈಷಿಗಳಿಂದ ಹಾಗೂ ಅಂದಿನ ಮುಂಬೈ ಬ್ರಿಟಿಷ್ ಸರ್ಕಾರದಿಂದ ಒಂದಿಷ್ಟು ಹಣ ಹಾಗೂ ಪುಸ್ತಕಗಳ ನೆರವನ್ನು ಪಡೆದಿದ್ದರು.

ದಂಪತಿಗಳಿಬ್ಬರೂ ಏಕಮನಸ್ಸಿನಿಂದ ತೆರೆದ ಈ ಶಾಲೆಗಳಲ್ಲಿ ಸಾವಿತ್ರಿಬಾ ಅವರು ಶಿಕ್ಷಕಿಯಾಗಿ, ಮುಖ್ಯೋಪಾಧ್ಯಾಯರಾಗಿ ಹಾಗೂ ನಿರ್ವಾಹಕರಾಗಿ ಕಾರ್ಯ ನಿರ್ವಹಿಸಿದರು. ತಾವು ಹೆಣ್ಣುಮಕ್ಕಳಿಗೆ ಹಾಗೂ ಅಸ್ಪೃಶ್ಯ ಶೂದ್ರ ಮಕ್ಕಳಿಗೆ ಅಕ್ಷರ ಕಲಿಸುವುದಲ್ಲದೆ ಅವರ ಪೋಷಕರಿಗೂ ಅರಿವು, ಸ್ವಾಭಿಮಾನ, ಸ್ವಾವಲಂಬನೆ, ಶಿಸ್ತು, ಶುಚಿತ್ವದ ಪಾಠಗಳನ್ನು ಹೇಳಿಕೊಟ್ಟ ಗುರುವೂ ಹೌದು. ಸಾವಿತ್ರಿಬಾ ಅವರ ಸಾಮಾಜಿಕ ಬದಲಾವಣೆಯ ವೈಚಾರಿಕ ಕಳಕಳಿ ಅಪ್ರತಿಮವಾದುದು. ೧೮೫೨ರ ಜನವರಿ ೧೪ರಂದು ಸಂಕ್ರಾಂತಿ ಹಬ್ಬದ ಸಂದರ್ಭದಲ್ಲಿ ಸಾಮೂಹಿಕವಾಗಿ ಈ ಸಂಭ್ರಮವನ್ನು ಆಚರಿಸುವ ಸಲುವಾಗಿ ಸಾವಿತ್ರಿಬಾ ಅವರು ಒಂದು ಆಹ್ವಾನ ಪತ್ರಿಕೆಯನ್ನು ತಯಾರಿಸಿದ್ದರು. ಅದರಲ್ಲಿ ಅವರೇ ಬರೆದ ಸಾಲುಗಳು ಇವು: ''ಮಹಿಳೆಯರೆಲ್ಲ ತಮ್ಮ ಮಕ್ಕಳನ್ನು ಹಾಗೂ ಸೊಸೆಯರನ್ನು ಕರೆದುಕೊಂಡು ಸಾಯಂಕಾಲ ಐದು ಗಂಟೆಗೆ ಬರಬೇಕೆಂದು ಕೋರಲಾಗಿದೆ. ಸಭೆಯಲ್ಲಿ ಭಾಗವಹಿಸುವ ಮಹಿಳೆಯರೆಲ್ಲರೂ ಜಾತಿ-ಧರ್ಮಗಳೆಂಬ ಭೇದವೆಣಿಸದೆ, ಹಾಸಿದ ಜಮಖಾನೆ ಮೇಲೆ ಕುಳಿತು ಮೇಲುಕೀಳೆಂಬ ಪಕ್ಷಪಾತ ಮಾಡದೆ ಪರಸ್ಪರ ಎಳ್ಳು-ಬೆಲ್ಲವನ್ನು ಪ್ರೀತಿಯಿಂದ ವಿನಿಮಯ ಮಾಡಿಕೊಳ್ಳಬೇಕು.'' ತಾವು ಹಾಗೂ ತಮ್ಮ ಸಂಗಾತಿ ಮಾಡುತ್ತಿದ್ದ ಪ್ರಗತಿಪರ ಕೆಲಸಗಳ ಬಗೆಗೆ ಎಷ್ಟೇ ವಿರೋಧ ಎದುರಾದರೂ, ಈ ದಂಪತಿಗಳು ಕಿಂಚಿತ್ತೂ ಹಿಂಜರಿಯಲಿಲ್ಲ. ಸದುದ್ದೇಶದಿಂದ ಕೆಲಸ ಮಾಡುತ್ತಿರುವ ತಮ್ಮ ಸಂಗಾತಿ ಜ್ಯೋತಿಬಾ ಅವರಿಗೂ ಪ್ರತಿಕ್ಷಣ ಧೈರ್ಯಗೆಡದಂತೆ ಹುರಿದುಂಬಿಸುತ್ತಿದ್ದರು. ೧೦-೧೦-೧೮೫೬ರಂದು ಸಾವಿತ್ರಿಬಾ ಅವರು ತಮ್ಮ ತವರಿನಿಂದ ಜ್ಯೋತಿಬಾ ಅವರಿಗೆ ಬರೆದ ಪತ್ರದಲ್ಲಿ ಕಂಡುಬರುವ ಮಾತುಗಳಿವು: ''ಪುಣೆಯಲ್ಲಿ ನಿಮ್ಮ ಬಗೆಗೆ ದ್ವೇಷ ಬೆಳೆಯುವಂತೆ ಮಾಡುವ ಬಾಯಿಬಡುಕರಿಗೆ ಕೊರತೆಯಿಲ್ಲ. ನಾವು ಮಾಡುವ ಕೆಲಸಗಳಿಗೆ ದ್ವೇಷದ ಹೊಗೆ ಹಾಕುವವರು ಎಲ್ಲೆಲ್ಲಿಯೂ ಇದ್ದಾರೆ. ಅಂತಹವರಿಗೆ ಅಂಜಿ ನಾವು ನಮ್ಮ ಕೆಲಸ ನಿಲ್ಲಿಸಬೇಕೆ ? ನೀವು ನಿಮ್ಮ ಕಾರ್ಯದಲ್ಲಿ ಎದೆಗುಂದದಿರಿ. ಭವಿಷ್ಯದಲ್ಲಿ ಖಂಡಿತ ನಾವೇ ಗೆಲ್ಲುವೆವು.'' ಹೀಗೆ ಸಾವಿತ್ರಿಬಾ ಅವರ ವ್ಯಕ್ತಿತ್ವವು ಅದಮ್ಯ ಕಳಕಳಿಯಿಂದ ಕೂಡಿತ್ತು.

ಅಂದಿನ ದಿನಗಳಲ್ಲಿ ವಿಧವೆಯರನ್ನು ಅತ್ಯಂತ ಭೀಕರವಾಗಿ ನಡೆಸಿಕೊಳ್ಳಲಾಗುತ್ತಿತ್ತು. ವಿಧವೆಯರು ಅನುಭವಿಸುವ ದೈಹಿಕ ಹಾಗೂ ಮಾನಸಿಕ ಹಿಂಸೆಗಳನ್ನು ಪ್ರಚೋದಿಸುವ ಸಂಪ್ರದಾಯವನ್ನು ಸಾವಿತ್ರಿಬಾ ಹಾಗೂ ಜ್ಯೋತಿಬಾ ದಂಪತಿಗಳು ಪ್ರಬಲವಾಗಿ ವಿರೋಧಿಸಿದರು. ವಿಧವೆಯರಿಗೆ ತಲೆ ಬೋಳಿಸಿ ಅಪಮಾನ ಮಾಡುವ ಪದ್ಧತಿಯನ್ನು ನಿಲ್ಲಿಸುವಂತೆ ಮನವಿ ಮಾಡಿದರು. ಮಾತ್ರವಲ್ಲದೆ, ೧೮೬೦ರಲ್ಲಿ ವಿಧವಾ ವಿವಾಹವನ್ನು ಸಮರ್ಥಿಸಿದರು. ೧೮೬೩ರಲ್ಲಿ ಈ ದಂಪತಿಗಳು ತಾವೇ ಮುಂದೆ ನಿಂತು ವಿಧವಾ ಪುನರ್‌ವಿವಾಹ ನೆರವೇರಿಸಿ ಸಂಪ್ರದಾಯ ಮತಿಗೇಡಿಗಳ ಕೆಂಗಣ್ಣಿಗೆ ಗುರಿಯಾದರು. ಆದರೆ ಫುಲೆ ದಂಪತಿಗಳಿಗೆ ತಾವು ಮಾಡುತ್ತಿರುವ ಕಾಯಕದ ಬಗ್ಗೆ ಅಭಿಮಾನವಿತ್ತು. ಅನೇಕ ಕಾರಣಗಳಿಂದ ಗರ್ಭಿಣಿಯರಾದ ವಿಧವೆಯರು ಅನುಭವಿಸುತ್ತಿದ್ದ ಯಾತನೆಗಳು ಹಾಗೂ ಇಂತಹವರು ಅಕ್ರಮವಾಗಿ ಮಾಡಿಸಿಕೊಳ್ಳುತ್ತಿದ್ದ ಗರ್ಭಪಾತ ಮತ್ತು ಹೀಗೆ ಹುಟ್ಟಿದ ಮಕ್ಕಳ ಕೊಲೆಗಳನ್ನು ತಡೆಯಲು ೧೮೬೩ರಲ್ಲಿ 'ಬಾಲಹತ್ಯಾ ಪ್ರತಿಬಂಧಕ ಗೃಹ'ವನ್ನು ಸ್ಥಾಪಿಸಿದರು. ಸಾವಿತ್ರಿಬಾ ಅವರದು ತುಂಬು ಅಂತಃಕರಣದ ಮನಸ್ಸು. ತಾವೇ ಮುಂದೆ ನಿಂತು ಇಂತಹ ಗರ್ಭಿಣಿಯರಿಗೆ ಹೆರಿಗೆ ಮಾಡಿಸಿ ನೈತಿಕ ಧೈರ್ಯ ತುಂಬುತ್ತಿದ್ದರು. ಹಾಗಾಗಿಯೇ ಬಾಲಹತ್ಯಾ ಪ್ರತಿಬಂಧಕ ಗೃಹವು ಮರೆಮಾಚಿ ಬಸಿರಾದ ವಿಧವೆಯರ ನೆಮ್ಮದಿಯ ತಾಣವಾಯಿತು.

ಸಾವಿತ್ರಿಬಾ ಹಾಗೂ ಜ್ಯೋತಿಬಾ ದಂಪತಿಗಳಿಗೆ ಸ್ವಂತ ಮಕ್ಕಳಿರಲಿಲ್ಲ. ತಮ್ಮ ಶಾಲೆಯಲ್ಲಿ ಕಲಿಯುತ್ತಿದ್ದ ಹೆಣ್ಣುಮಕ್ಕಳನ್ನು, ಅಸ್ಪೃಶ್ಯ-ಶೂದ್ರ ಮಕ್ಕಳನ್ನು ತಮ್ಮ ಸ್ವಂತ ಮಕ್ಕಳಂತೆ ಪೋಷಿಸುತ್ತಿದ್ದರು. ಕೆಲವರನ್ನು ತಮ್ಮ ಮನೆಯಲ್ಲೂ ಇರಿಸಿಕೊಂಡು ಊಟೋಪಚಾರ ನೀಡಿ ಸಾಕುತ್ತಿದ್ದರು. ಜ್ಯೋತಿಬಾ ಅವರ ತಂದೆ ಗೋವಿಂದರಾಯರು ಸ್ವಂತ ಮೊಮ್ಮಗುವೊಂದನ್ನು ಕಾಣುವ ಸಲುವಾಗಿ ಮಗನಿಗೆ ಎರಡನೇ ಮದುವೆಯಾಗಲು ಒತ್ತಾಯಿಸಿದರು. ಜ್ಯೋತಿಬಾ ಅವರ ನೆಂಟರಿಷ್ಟರೂ ಇದನ್ನೇ ಹೇಳಿದರು. ಆದರೆ ಜ್ಯೋತಿಬಾ ಇದನ್ನು ಖಡಾಖಂಡಿತವಾಗಿ ನಿರಾಕರಿಸಿದರು. ಜ್ಯೋತಿಬಾ ವಾಸ್ತವವಾಗಿ ಬಹುಪತ್ನಿತ್ವ ಪದ್ಧತಿಯನ್ನು ವಿರೋಧಿಸುತ್ತಿದ್ದರು. ಇಂತಹ ಸಂದರ್ಭಲ್ಲಿ ಕಾಶಿಬಾಯಿ ಎಂಬ ಹೆಸರಿನ ವಿಧವೆ ಗರ್ಭಧರಿಸಿ ಸಮಾಜಕ್ಕೆ 'ಹೆದರಿ' ಬಾಲಹತ್ಯಾ ಪ್ರತಿಬಂಧಕ ಗೃಹದಲ್ಲಿ ಆಶ್ರಯ ಪಡೆದಿದ್ದಳು. ಈ ವಿಧವೆಗೆ ಸ್ವತಃ ಸಾವಿತ್ರಿಬಾ ಅವರೇ ಹೆರಿಗೆ ಮಾಡಿಸಿದರು. ಆ ವಿಧವೆ ತನ್ನ ಮಗುವನ್ನು ನಿರಾಕರಿಸಿದಾಗ ಫುಲೆ ದಂಪತಿಗಳು ಆ ಮಗುವನ್ನೇ ದತ್ತು ತೆಗೆದುಕೊಂಡು ಯಶವಂತ ಎಂದು ಹೆಸರಿಟ್ಟರು. ಯಶವಂತನನ್ನು ಪ್ರೀತಿ ಮಮತೆಗಳಿಂದ ಸಾಕಿ ಸಲಹಿ ವೈದ್ಯನನ್ನಾಗಿ ಮಾಡಿದರು. ತಮ್ಮ ಈ ಮಗನಿಗೆ ಯಾವ ಪುರೋಹಿತರ ಮಧ್ಯಸ್ಥಿಕೆ ಇಲ್ಲದೆ ಹಾಗೂ ಅತ್ಯಂತ ಸರಳವಾಗಿ ತಾವು ಸ್ಥಾಪಿಸಿದ್ದ 'ಸತ್ಯಶೋಧಕ ಸಮಾಜ'ದ ನಡಾವಳಿಗೆ ಅನುಗುಣವಾಗಿ ವಿವಾಹ ಮಾಡಿದರು. ಅಲ್ಲದೆ ಯಶವಂತನನ್ನೂ ಸಮಾಜ ಸೇವಕನನ್ನಾಗಿ ರೂಪಿಸಿದರು. ಇದು ಸಾವಿತ್ರಿಬಾ ಅವರಿಗಿದ್ದ ಸಮಾಜ ಸುಧಾರಣೆಯ ಬದ್ಧತೆಯ ಅದಮ್ಯ ತುಡಿತವನ್ನು ಪ್ರತಿನಿಧಿಸುತ್ತದೆ.

ಸಾವಿತ್ರಿಬಾ ಫುಲೆ ಅವರದು ಸೃಜನಶೀಲ ಮನಸ್ಸು ಕೂಡ ಆಗಿತ್ತು. ೧೮೫೪ರಲ್ಲಿ ತಾವು ಬರೆದ ಕವನಗಳಲ್ಲಿ ಕೆಲವನ್ನು ಒಟ್ಟುಗೂಡಿಸಿ 'ಕಾವ್ಯ ಫುಲೆ' ಎಂಬ ಕವನ ಸಂಕಲನವನ್ನು ಪ್ರಕಟಿಸಿದರು. ಇಲ್ಲಿನ ಕವಿತೆಗಳಲ್ಲಿ ಬಂಡಾಯದ ಅಂಶಗಳು

ಅಡಕವಾಗಿರುವುದು ಕಂಡುಬರುತ್ತದೆ.

ಸಮಾಜದ ಅನೇಕ ಅಸಮಾನತೆಗಳನ್ನು ನಿವಾರಿಸಬೇಕಾದರೆ ವೈಚಾರಿಕವಾದ ಒಂದು ಸಂಘಟನೆಯ ಸ್ಥಾಪನೆ ಸಾವಿತ್ರಿಬಾ ಹಾಗೂ ಜ್ಯೋತಿಬಾ ಅವರಿಗೆ ಅವಶ್ಯವೆನಿಸಿತು. ಆ ಕಾರಣಕ್ಕಾಗೇ ತಮ್ಮ ಶಾಲೆಯಲ್ಲಿ ಕಲಿತ ವಿದ್ಯಾರ್ಥಿಗಳು ಹಾಗೂ ತಮ್ಮ ಪ್ರಗತಿಪರ ಚಟುವಟಿಕೆಗಳಿಗೆ ಪ್ರೋತ್ಸಾಹಿಸಿದ ವಿಶಾಲ ಮನೋಭಾವದ ಹಿತೈಷಿ ಗೆಳೆಯರನ್ನು ಒಗ್ಗೂಡಿಸಿ ೧೮೭೩ರಲ್ಲಿ 'ಸತ್ಯ ಶೋಧಕ ಸಮಾಜ' ಎಂಬ ಸಂಘವನ್ನು ಸ್ಥಾಪಿಸಿದರು. ಅದರ ಆಶಯ ಮಹತ್ವ ಪೂರ್ಣವಾದುದು. ಧರ್ಮ ಹಾಗೂ ದೇವರ ಹೆಸರಿನಲ್ಲಿ ಆಚರಣೆಯಲ್ಲಿರುವ ಎಲ್ಲಾ ಬಗೆಯ ಮೌಢ್ಯಗಳ ಬಗೆಗೆ ಜನತೆಗೆ ತಿಳಿಸಿಹೇಳುವುದು ಮತ್ತು ಅವರಲ್ಲಿ ವೈಚಾರಿಕ, ವೈಜ್ಞಾನಿಕ ಜಾಗೃತಿಯನ್ನು ಮೂಡಿಸುವುದು ಇದರ ಉದ್ದೇಶವಾಗಿತ್ತು. ಈ ಸಂಘಟನೆಯ ಮೂಲಕ ಫುಲೆ ದಂಪತಿಗಳು ಹಮ್ಮಿಕೊಂಡ ಕಾರ್ಯಕ್ರಮಗಳು ಅಷ್ಟಿಷ್ಟಲ್ಲ.

ಜ್ಯೋತಿಬಾ ಫುಲೆಯವರು ೨೮-೧೧-೧೮೯೦ರಂದು ನಿಧನರಾದ ಬಳಿಕ ಸತ್ಯಶೋಧಕ ಸಮಾಜದ ನಿರ್ವಹಣೆಯ ಸಂಪೂರ್ಣ ಜವಾಬ್ದಾರಿ ಸಾವಿತ್ರಿಬಾ ಫುಲೆಯವರದಾಯಿತು. ಸಂಘಟನೆಯಲ್ಲಿದ್ದ ಎಲ್ಲರ ಸಹಕಾರದೊಂದಿಗೆ ತಾವು ಇರುವವರೆಗೂ ಇನ್ನಷ್ಟು ಜಾಗೃತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ೧೮೯೩ರಲ್ಲಿ ಸತ್ಯಶೋಧಕ ಸಮಾಜದ ಇಪ್ಪತ್ತನೇ ವಾರ್ಷಿಕೋತ್ಸವವು ಸಾವಿತ್ರಿಬಾ ಅವರ ಅಧ್ಯಕ್ಷತೆಯಲ್ಲೇ ನೆರವೇರಿತು.

೧೮೯೬ರಲ್ಲಿ ಮಹಾರಾಷ್ಟ್ರವು ಭೀಕರ ಬರಗಾಲದಿಂದ ತತ್ತರಿಸಿತು. ಆ ಸಂದರ್ಭದಲ್ಲಿ ಬರಗಾಲಕ್ಕೆ ತುತ್ತಾಗಿ ಹಸಿವಿನಿಂದ ಪರಿತಪಿಸಿದ ದೀನ ದಲಿತರಿಗೆ ಸಹಾಯ ಮಾಡಬೇಕೆಂದು ಸಾವಿತ್ರಿಬಾ ಅವರು ಅಂದಿನ ಮುಂಬೈ ಸರ್ಕಾರಕ್ಕೆ ಒತ್ತಾಯ ಹೇರಿ ನೆರವು ನೀಡುವಂತೆ ಮಾಡಿದರು. ಅದರ ಮಾರನೇ ವರ್ಷವೇ ಅಂದರೆ ೧೮೯೭ರಲ್ಲಿ ಪುಣೆಯಲ್ಲಿ ಭಯಾನಕ ಪ್ಲೇಗ್ ಕಾಣಿಸಿಕೊಂಡಿತು. ಅನೇಕರು ಪ್ಲೇಗಿಗೆ ಬಲಿಯಾದರು. ಜನಸೇವೆಯನ್ನೇ ಬದುಕಾಗಿಸಿಕೊಂಡ ಸಾವಿತ್ರಿಬಾ ಅವರು ಈ ಸಂದರ್ಭದಲ್ಲಿ ರೋಗಪೀಡಿತರ ಶುಶ್ರೂಷೆಗೆ ಧಾವಿಸಿದರು. ತಮ್ಮ ಮಗ ಯಶವಂತನ ವೈದ್ಯಕೀಯ ವೃತ್ತಿಯೂ ಈ ಸಂದರ್ಭದಲ್ಲಿ ಸಾಕಷ್ಟು ನೆರವಾಯಿತು. ಅತ್ಯಂತ ಚಟುವಟಿಕೆಯಿಂದ ಸಾವಿತ್ರಿಬಾ ಅವರು ಎಲ್ಲ ರೋಗ ಪೀಡಿತರನ್ನು ಸಂತೈಸುತ್ತ ಚಿಕಿತ್ಸೆ ಕೊಡಿಸುವಲ್ಲಿ ನೆರವಾದರು. ಸಾವಿತ್ರಿಬಾ ಅವರು ಈ ಸೇವೆಯಲ್ಲಿ ನಿರತರಾಗಿದ್ದಾಗಲೇ ಅವರಿಗೂ ಪ್ಲೇಗ್ ರೋಗ ಅಂಟಿತು. ಆದರೂ ತಮ್ಮ ಅನಾರೋಗ್ಯವನ್ನು ಲೆಕ್ಕಿಸದೆ ರೋಗ ಪೀಡಿತರನ್ನು ಆರೈಕೆ ಮಾಡುತ್ತಲೇ ೧೦-೦೩-೧೮೯೭ರಂದು ಸಾವಿತ್ರಿಬಾ ಫುಲೆ ಕೊನೆಯ ಉಸಿರೆಳೆದರು.

೬೬ ವರ್ಷ ಬಾಳಿ ಬದುಕಿದ ಸಾವಿತ್ರಿಬಾ ಫುಲೆಯವರು ತಮ್ಮ ಜೀವಿತದ ಉದ್ದಕ್ಕೂ ಸಾಮಾಜಿಕ ಮೌಢ್ಯ ಹಾಗೂ ಅಸಮಾನತೆಗಳ ವಿರುದ್ಧ ಹೋರಾಡುತ್ತ ಜನಸೇವೆ ಮಾಡಿದ ಭಾರತದ ಒಬ್ಬ ಅಸಾಧಾರಣ ಮಹಿಳೆಯಾಗಿದ್ದಾರೆ. ವೈಜ್ಞಾನಿಕ, ವೈಚಾರಿಕ ಹಾಗೂ ವಿಶಾಲ ಮನೋಭಾವನೆಯ ಜ್ಯೋತಿಬಾ ದಂಪತಿಗಳ ಕ್ರಿಯಾತ್ಮಕ ಚಟುವಟಿಕೆಗಳ ಕಾರಣಗಳಿಂದ ಮಹಾರಾಷ್ಟ್ರದಲ್ಲಿ ಬದಲಾವಣೆಯ ಹೊಸಗಾಳಿ ಬೀಸಿತು. ಮುಂದೆ ಭಾರತದ ಸಾಮಾಜಿಕ ಅಸಮಾನತೆಗಳ ವಿರುದ್ಧ ದಣಿವರಿಯದೆ ಹೋರಾಡಿದ ಡಾ|| ಅಂಬೇಡ್ಕರ್ (೧೮೯೧-೧೯೫೬) ಅವರಿಗೂ ಫುಲೆ ದಂಪತಿಗಳ ಬದುಕು ಹಾಗೂ ಹೋರಾಟ ಸ್ಫೂರ್ತಿಯಾಗಿ ಪರಿಣಮಿಸಿತು. ಹಾಗಾಗಿ ಫುಲೆಯವರನ್ನು ತನ್ನ ಗುರುಗಳೆಂದು ಅಂಬೇಡ್ಕರ್ ಅವರು ಅತ್ಯಂತ ಅಭಿಮಾನದಿಂದ ಕರೆದಿದ್ದಾರೆ.

ಸಾವಿತ್ರಿಬಾ ಅವರದು ಬಹುದೊಡ್ಡ ಆದರ್ಶದ ಬದುಕು. ನಿಜವಾದ ಅಂತಃಕರಣವುಳ್ಳ ಮಹಿಳಾ ಚಳವಳಿಯು ಎಂದಿಗೂ ಇವರಂತೆಯೇ ಪ್ರಗತಿಪರ ಕೆಲಸಗಳನ್ನು ಮಾಡಬೇಕಿದೆ. ಅಲ್ಲದೆ ಭಾರತೀಯ ಸಮಾಜ ಎಂದೆಂದಿಗೂ ನೆನೆಯಲೇಬೇಕಾದ ಮಹಾನ್ ಮಹಿಳೆ ಸಾವಿತ್ರಿಬಾ ಫುಲೆ ಅವರು.

ಡಾ|| ಎಸ್. ನರೇಂದ್ರಕುಮಾರ್
ಉಪನ್ಯಾಸಕರು, ಡಾ|| ಬಿ. ಆರ್. ಅಂಬೇಡ್ಕರ್ ಸಂಶೋಧನ ಹಾಗೂ ವಿಸ್ತರಣ ಕೇಂದ್ರ
ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬

# ಧರೆಗೆ ದೊಡ್ಡವರು !



ಹಗಲು ಕೋಟು ಧರಿಸಿ,
ಬಾಟಾ ಶೂ ಸಿಕ್ಕಿಸಿದ ಕಾಲೆಳೆದು
ಸೆಮಿನಾರ್, ಭಾಷಣಗಳಲಿ
ಸರಳತೆಯ ಪಾಠ ಹೇಳಿ,
ಸಹಜತೆಯ ಬಗ್ಗೆ ಕೊಚ್ಚಿಕೊಂಡು
ರಾತ್ರಿ...
ಬಾರ್‌ಗಳಲಿ ವಿಸ್ಕಿ-ಬ್ರಾಂದಿಯ ಮಧ್ಯೆ
ಸ್ವರ್ಗ ಅರಸಿ,
ಮನೆಗೆ ಬಂದೊಡನೆ ಹೆಂಡ್ತಿಗೆ ಅಂಜಿ
ಪಾನ್ ಜಗಿದ ಬಾಯೊಳಗಿಂದ
ಕೆಂಪಗೆ 'ಚಿನ್ನಾ' ಎಂದು ತಡವರಿಸಿ,
ಮುಂಜಾನೆವರೆಗೂ ಪ್ರಜ್ಞಾಹೀನರಾದ
ಪ್ರತಾಪವೀರರು !?

ಇವರ ಕೋಟಿನ ಜೇಬಿನಲಿ
ಲಾಟರಿ ಟಿಕೇಟು
ಮಾತಲ್ಲಿ ಬಡವರ ಉದ್ಧಾರ
ಕೈಲಿ ಬಾಟಲಿ, ಮೂಗಿಗೆ ಸೆಂಟು
ನಾಲಿಗೆ ಮೇಲೆಲ್ಲಾ ಪಾನ್ ಪರಾಕ್ !
ರಾಜಕಾರಣವೋ, ಬಿಸಿನೆಸ್ಸೋ,
ಎಸ್ಟೇಟ್ ಏಜೆನ್ಸಿಯೋ ?
ಹೇಳುವುದಕ್ಕೊಂದು ನವಕಲು ಹೆಸರು
ಶತಾವತಾರಿಯಾದ ನಿಲುವು
ಇವರು ಹೋದಲ್ಲೆಲ್ಲಾ...
'ದಾರಿ ಬಿಡಿ ಸ್ವಾಮಿ' – ಎಂಬ
ಅನುಯಾಯಿಗಳ ಆಜ್ಞೆ
ಇವರೇ ಇಂದು
ಧರೆಗೆ ದೊಡ್ಡವರು !?

ಸುಜಾತ ಲಕ್ಷ್ಮೀಪುರ
[illegible]

# ಜಾಗತಿಕ ಹಣಕಾಸು ಪರಿಸ್ಥಿತಿಯಲ್ಲಿ ಭೀಕರ ಕುಸಿತ ಉಂಟಾದುದು ಏಕೆ ಮತ್ತು ಹೇಗೆ?

ಪ್ರೊ|| ಡಿ. ನರಸಿಂಹ ರೆಡ್ಡಿ

ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಆರ್ಥಿಕ ಮುನ್ನಡೆ ಹಾಗೂ ಕುಸಿತಗಳು ಚಕ್ರೀಯವಾಗಿ ಜರುಗುತ್ತವೆಂಬುದು ಮತ್ತು ಅದರ ಪರಿಣಾಮವಾಗಿ ಮಾರುಕಟ್ಟೆಯಲ್ಲಿ ಏರುಪೇರುಗಳುಂಟಾಗುತ್ತವೆಂಬುದು ಎಲ್ಲರಿಗೂ ತಿಳಿದ ಸಂಗತಿಯೇ. ಈ ಬಿಕ್ಕಟ್ಟುಗಳು ಅನುತ್ಪಾದಕ ಹಣ ಹೂಡಿಕೆಗಳಿಂದ ಹೊರಬರಲು ಬಂಡವಾಳವಾದ ಬಳಸುವ ಒಂದು ವಿಧಾನ; ಇದರಿಂದ ಬಂಡವಾಳಶಾಹಿ ಆರ್ಥಿಕತೆಯೇನೋ ಬಲಗೊಳ್ಳುತ್ತದೆ; ಆದರೆ ಇದೇ ಅತಿಯಾದರೆ ಪತನ ಪ್ರಾರಂಭವಾಗುತ್ತದೆ ಎಂದು ಮಾರ್ಕ್ಸ್ ವಿಶ್ಲೇಷಿಸಿದ್ದರು. ಈ ಮಾರುಕಟ್ಟೆ-ಪ್ರೇರಿತ ವೈಫಲ್ಯಗಳ ದೌರ್ಬಲ್ಯವನ್ನು ಮನಗಂಡ ಅರ್ಥಶಾಸ್ತ್ರಜ್ಞ ಕೀನ್ಸ್ ಬಂಡವಾಳವಾದೀ ವ್ಯವಸ್ಥೆಯನ್ನು ರಕ್ಷಿಸಲು ಪ್ರಭುತ್ವದ ಮಧ್ಯಪ್ರವೇಶವನ್ನು ಪ್ರತಿಪಾದಿಸಿದರು. ಆದರೆ ಇಂದಿನ ಬಿಕ್ಕಟ್ಟಿನಲ್ಲಿ ಒಂದು ವಿಚಿತ್ರ ಲಕ್ಷಣ ಕಂಡುಬರುತ್ತದೆ. ಮಾರ್ಕ್ಸ್ ಮತ್ತು ಕೀನ್ಸ್ ಅಷ್ಟೇ ಅಲ್ಲ, ಅವರ ವಿಚಾರಗಳೂ ಇಂದು ಪ್ರಸ್ತುತವಲ್ಲ ಎಂಬ ನಂಬಿಕೆಯ ಮೇಲೆ ಇಂದಿನ ಈ ಬಿಕ್ಕಟ್ಟು ಆಧರಿತವಾಗಿದೆ. ಆದರೆ ವ್ಯಂಗ್ಯವೆನ್ನುವಂತೆ ಈ ಬಿಕ್ಕಟ್ಟು ಮತ್ತೆ ಮಾರ್ಕ್ಸ್ ಮತ್ತು ಕೀನ್ಸ್‌ರ ವಿಚಾರಗಳ ಅಧ್ಯಯನವನ್ನು ಅವಶ್ಯವನ್ನಾಗಿಯೇ ಮಾಡಿದೆ. ಇಂದಿನ ಬಿಕ್ಕಟ್ಟು ಎಷ್ಟು ಭೀಕರವಾಗಿದೆ ಎಂದರೆ ಅದು ಎಲ್ಲರಿಗೂ ೧೯೩೦ರ 'ಮಹಾ ಕುಸಿತ'ದ ನೆನಪು ತರುವಂತಾಗಿದೆ. ಈ ಮುಗ್ಗಟ್ಟಿನ ಮೂಲ ಕಾರಣ ಹಣಕಾಸು ಬಂಡವಾಳದ ಸ್ವರೂಪದಲ್ಲೇ ಅಡಗಿದೆ. ಅದರ ಪ್ರಮಾಣ ಮಿತಿಮೀರಿ ಹೆಚ್ಚಿದುದರಲ್ಲಿ ಅಡಗಿದೆ. ಹಣಕಾಸು ಬಂಡವಾಳದ ಈ ಮಹಾ ವಿಜಯಕ್ಕೆ ಅನೇಕ ಕಾರಣಗಳುಂಟು. ಮೊದಲನೆಯದಾಗಿ, ೧೯೮೦ರಿಂದೀಚೆಗೆ 'ವಾಷಿಂಗ್ಟನ್ ಒಮ್ಮತ' ಹುಟ್ಟಿಕೊಂಡಂದಿನಿಂದ ಜಗತ್ತಿನಾದ್ಯಂತ ಎಲ್ಲ ಭಾರಿ ಬಂಡವಾಳ ಶಕ್ತಿಗಳೂ ಅಮೆರಿಕದ ನೇತೃತ್ವದಲ್ಲಿ ಅನಿಯಂತ್ರಿತ ಮಾರುಕಟ್ಟೆ ಹಾಗೂ ಅನಿಯಂತ್ರಿತ ಖಾಸಗಿ ಬಂಡವಾಳ ವಿಸ್ತರಣೆಯ ನೀತಿಯನ್ನು ಕ್ರಿಯಾಶೀಲವಾಗಿ ಅನುಸರಿಸತೊಡಗಿವೆ. ೧೯೭೧ರಲ್ಲಿ 'ತೇಲಿಕೆಯ ನಾಣ್ಯ'ಗಳಾಗಿ ಪ್ರಾರಂಭವಾದುದು ರೀಗನ್-ಥ್ಯಾಚರ್‌ರವರು ಕೈಗೊಂಡ ಉಪಕ್ರಮಗಳಿಗನುಸಾರವಾಗಿ ಎಲ್ಲ ರೀತಿಯ ನಿಯಂತ್ರಣಗಳನ್ನೂ ತೊಡೆದುಹಾಕಿದನಂತರ ಅನಿಯಂತ್ರಿತ ಹಣಕಾಸು ಬಂಡವಾಳದ ಪ್ರಮಾಣ ಎಗ್ಗಿಲ್ಲದಂತೆ ಹೆಚ್ಚತೊಡಗಿತು, ವಿಸ್ತರಿಸತೊಡಗಿತು.

ಎರಡನೆಯದಾಗಿ, ಹಣಕಾಸು ಬಂಡವಾಳದ ಸತತ ವಿಸ್ತರಣೆಯು ಯಾವತ್ತೂ ಅಂಜಿಕೆ ಹಾಗೂ ದುರಾಸೆಗಳ ನಡುವಿನ ಸಮತೋಲದ ಮೇಲೆ ಅವಲಂಬಿಸಿರುತ್ತದೆ. ಯಾವುದು ಈ ಅಂಜಿಕೆ ? ಮಾರುಕಟ್ಟೆ ವೈಫಲ್ಯ ಒಂದಾದರೆ, ಪರ್ಯಾಯ ವ್ಯವಸ್ಥೆಯಾಗಿ ಸಮಾಜವಾದದ ಅಸ್ತಿತ್ವವು ಇನ್ನೊಂದು. ಇದೇ ಹಣಕಾಸು ಬಂಡವಾಳವನ್ನು ಕ್ರಮಬದ್ಧ ನಿಯಂತ್ರಣದಲ್ಲಿ ಇರಿಸಲು ಬಂಡವಾಳಶಾಹಿ ದೇಶಗಳನ್ನು ಒತ್ತಾಯಿಸಿದ್ದುದು. ಆದರೆ ಸೋವಿಯತ್ ಒಕ್ಕೂಟದಲ್ಲೂ ಪೂರ್ವ ಯೂರೋಪ್ ದೇಶಗಳಲ್ಲೂ ಸಮಾಜವಾದೀ ವ್ಯವಸ್ಥೆ ಪತನಗೊಂಡುದು ಈ ಅಂಜಿಕೆಯನ್ನು ಸಡಿಲಗೊಳಿಸಿತು. ಅಂಜಿಕೆಯ ಸ್ಥಾನವನ್ನು ದುರಾಸೆ ಆಕ್ರಮಿಸಿಕೊಂಡಿತು. ಕ್ರಮರಹಿತ ವಿಸ್ತರಣೆ ಸರ್ವೇಸಾಮಾನ್ಯವಾಯಿತು. ಅಮೆರಿಕಾದ ಹಣದಾಹಿ ಬಂಡವಾಳ ಹಿಗ್ಗಾಮುಗ್ಗ ಠೀವಿಯಿಂದ ಮುನ್ನುಗ್ಗುವ ಮಾದರಿಯ ವಿದ್ಯುಕ್ತ ವಿದ್ಯಮಾನವಾಯಿತು.



ಚಿತ್ರ ಕೃಪೆ: ತೆಹೆಲ್ಕಾ

ಮೂರನೆಯದಾಗಿ, ಕ್ರಮಬದ್ಧತೆ ಇಲ್ಲದೆ ಹೋದುದು (ಡಿರಿವಿಟಿವ್ಸ್) 'ಜನ್ಯ ವ್ಯುತ್ಪನ್ನ'ಗಳಂಥ 'ನವೀನಕಲ್ಪಕ ಹಣಕಾಸು ಉತ್ಪನ್ನ'ಗಳ ಮಹಾಪೂರವನ್ನೇ ಉಂಟು ಮಾಡಿತು. ಅಂದ ಹಾಗೇ ಈ ಜನ್ಯ ವ್ಯುತ್ಪನ್ನಗಳೂ ಇಂದಿನ ಮುಗ್ಗಟ್ಟಿನ ಕೇಂದ್ರಬಿಂದುವಾಗಿವೆ.

ಮೇಲೆ ತಿಳಿಸಿರುವ ವಿಷಯಗಳ ಬೆಳಕಿನಲ್ಲಿ ಇಂದಿನ ಹಣಕಾಸು ಬಿಕ್ಕಟ್ಟಿನ ವಿವಿಧ ಆಳ ಅಗಲಗಳನ್ನು ಚರ್ಚಿಸೋಣ. ಅದರಲ್ಲೂ ನಿರ್ದಿಷ್ಟವಾಗಿ 'ಉಪಪ್ರಧಾನ ಮುಗ್ಗಟ್ಟು' (ಸಬ್‌ಪ್ರೈಮ್ ಕ್ರೈಸಿಸ್) ಎಂದು ಹೇಳಲಾಗುವಂತಹುದರ, 'ಜನ್ಯ ವ್ಯುತ್ಪನ್ನ'ಗಳಂಥ ಅನಿಯಂತ್ರಿತ ಹಣಕಾಸು ಆವಿಷ್ಕಾರಗಳ ಸ್ವರೂಪವನ್ನು ಪರಿಶೀಲಿಸೋಣ. ಈ 'ಜನ್ಯ ವ್ಯುತ್ಪನ್ನ'ಗಳೇ ಪತನದ ಮೂಲಕಾರಣಗಳು. ಅಮೆರಿಕಾದ ಹಾಗೂ ಜಗತ್ತಿನ ಇತರ ಭಾಗಗಳ ಆರ್ಥಿಕತೆಗಳ ಮೇಲೂ ಹಣಕಾಸು ಮಾರುಕಟ್ಟೆಗಳ ಮೇಲೂ ಅವುಗಳ ಪ್ರಭಾವದ ಪರಿಮಾಣವನ್ನು ಪರಿಶೀಲಿಸೋಣ.

**''ಉಪ ಪ್ರಧಾನ ಮುಗ್ಗಟ್ಟು'' ಅಥವಾ ''ವಸತಿ ಸಾಲ ಸೌಲಭ್ಯದ ನೀರ್ಗುಳ್ಳೆ'' ಉತ್ಕರ್ಷ...**

ಬರಾಕ್ ಒಬಾಮಾರವರು ಈ ಮುಗ್ಗಟ್ಟಿನ ಬಗೆಗೆ ಬಹಳ ಚೆನ್ನಾಗಿ ಕ್ರೋಡೀಕರಿಸಿ ಹೀಗೆ ಹೇಳಿದ್ದಾರೆ – ''ಅಜಾಗರೂಕ ಸಟ್ಟಾ ವ್ಯಾಪಾರ, ವಾಲ್ ಸ್ಟ್ರೀಟ್‌ನ ದುರಾಸೆ, ವಾಷಿಂಗ್ಟನ್‌ನ ಶಿಥಿಲ ನಿರ್ಲಕ್ಷ್ಯ– ಇವೆ ನಮ್ಮ ಹಣಕಾಸು ಮಾರುಕಟ್ಟೆ ಕರಗುವುದಕ್ಕೆ ದಾರಿ ಮಾಡಿಕೊಟ್ಟಿರುವುದು.'' ಈ ಮುಗ್ಗಟ್ಟು ವಸತಿ ಸೌಲಭ್ಯ ಒದಗಿಸುವುದರಿಂದ ಹೇಗೆ ಪ್ರಾರಂಭವಾಯಿತು ಎಂಬುದನ್ನು ನೋಡೋಣ. ಒಂದಷ್ಟು ಭಾಗ ಪಾವತಿ ಮಾಡುವ ಸಾಮರ್ಥ್ಯ, ಉತ್ತಮ ನೌಕರಿಯ ಸ್ಥಾನಮಾನ ಅಥವಾ ಆದಾಯ ಮಟ್ಟ – ಈ ಯಾವುದೇ 'ಪ್ರಧಾನ' ಅರ್ಹತೆ ಇಲ್ಲದೆ ಸಾಲಗಾರರಿಗೆ ಸಾಲ ನೀಡುವ ಅಭ್ಯಾಸವನ್ನು 'ಉಪಪ್ರಧಾನ ಸಾಲ ನೀಡಿಕೆ' ಎನ್ನಲಾಗುತ್ತದೆ. ಸ್ಪಷ್ಟವಾಗಿಯೇ ಇಂತಹ ಸಾಲ ನೀಡಿಕೆ ನಷ್ಟದ ಅಪಾಯದಿಂದ ಕೂಡಿದುದು. ಹಾಗಾದರೆ ಬ್ಯಾಂಕುಗಳು ಅರ್ಹತೆ ಇಲ್ಲದ ಇಂತಹವರಿಗೆ ಏಕೆ ಸಾಲ ನೀಡಿದವು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಮತ್ತೆ ಯಾವ ಉದ್ದೇಶಕ್ಕಾಗಿ ಸಾಲ ನೀಡಿದವು ? ಇದೆಲ್ಲ ಪ್ರಾರಂಭವಾದುದು ೧೯೮೦ರ ವರ್ಷಗಳಲ್ಲಿ. ಆಗ ಕೊಲ್ಲಿ ರಾಷ್ಟ್ರಗಳಿಂದ

ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಆರ್ಥಿಕ ಮುನ್ನಡೆ ಹಾಗೂ ಕುಸಿತಗಳು ಚಕ್ರೀಯವಾಗಿ ಜರುಗುತ್ತವೆಂಬುದು ಮತ್ತು ಅದರ ಪರಿಣಾಮವಾಗಿ ಮಾರುಕಟ್ಟೆಯಲ್ಲಿ ಏರುಪೇರುಗಳುಂಟಾಗುತ್ತವೆಂಬುದು ಎಲ್ಲರಿಗೂ ತಿಳಿದ ಸಂಗತಿಯೇ. ಈ ಬಿಕ್ಕಟ್ಟುಗಳು ಅನುತ್ಪಾದಕ ಹಣ ಹೂಡಿಕೆಗಳಿಂದ ಹೊರಬರಲು ಬಂಡವಾಳವಾದ ಬಳಸುವ ಒಂದು ವಿಧಾನ; ಇದರಿಂದ ಬಂಡವಾಳಶಾಹಿ ಆರ್ಥಿಕತೆಯೇನೋ ಬಲಗೊಳ್ಳುತ್ತದೆ; ಆದರೆ ಇದೇ ಅತಿಯಾದರೆ ಪತನ ಪ್ರಾರಂಭವಾಗುತ್ತದೆ ಎಂದು ಮಾರ್ಕ್ಸ್ ವಿಶ್ಲೇಷಿಸಿದ್ದರು. ಈ ಮಾರುಕಟ್ಟೆ-ಪ್ರೇರಿತ ವೈಫಲ್ಯಗಳ ದೌರ್ಬಲ್ಯವನ್ನು ಮನಗಂಡ ಅರ್ಥಶಾಸ್ತ್ರಜ್ಞ ಕೀನ್ಸ್ ಬಂಡವಾಳವಾದೀ ವ್ಯವಸ್ಥೆಯನ್ನು ರಕ್ಷಿಸಲು ಪ್ರಭುತ್ವದ ಹಸ್ತಕ್ಷೇಪವನ್ನು ಪ್ರತಿಪಾದಿಸಿದರು. ಆದರೆ ಇಂದಿನ ಬಿಕ್ಕಟ್ಟಿನಲ್ಲಿ ಒಂದು ವಿಚಿತ್ರ ಲಕ್ಷಣ ಕಂಡುಬರುತ್ತದೆ. ಮಾರ್ಕ್ಸ್ ಮತ್ತು ಕೀನ್ಸ್ ಅಷ್ಟೇ ಅಲ್ಲ, ಅವರ ವಿಚಾರಗಳೂ ಇಂದು ಪ್ರಸ್ತುತವಲ್ಲ ಎಂಬ ನಂಬಿಕೆಯ ಮೇಲೆ ಇಂದಿನ ಈ ಬಿಕ್ಕಟ್ಟು ಆಧರಿತವಾಗಿದೆ.

ಭಾರಿ ಪ್ರಮಾಣಗಳಲ್ಲಿ ಪೆಟ್ರೋ-ಡಾಲರ್‌ಗಳೂ ಜಪಾನಿನಿಂದ ವಿದೇಶಿ ವಿನಿಮಯ ಮಿಗುತಾಯ ಮೌಲ್ಯಗಳೂ ಅಮೆರಿಕಕ್ಕೆ ಹರಿಯತೊಡಗಿದವು. ಇದರಿಂದ ಬ್ಯಾಂಕುಗಳು ಉದಾರವಾಗಿ ಸಾಲ ನೀಡತೊಡಗಿ ಅಮೆರಿಕನ್ನರ ಜೀವನಶೈಲಿಯಲ್ಲಿ ''ಹೊಟ್ಟೆಬಾಕ ಸಂಸ್ಕೃತಿ'' ಬೆಳೆಯತೊಡಗಿತು. ಮೊದಮೊದಲು ಕಾರು ಕೊಳ್ಳಲು ಅಥವಾ ಭಾರಿ ಭೋಗ್ಯ ವಸ್ತುಗಳನ್ನು ಕೊಳ್ಳಲು ಸಾಲ ನೀಡಲಾಗುತ್ತಿದ್ದಿತು. ಆದರೆ ಬ್ಯಾಂಕುಗಳಿಗೆ ಬರುತ್ತಿದ್ದ ಆದಾಯ ಪ್ರಮಾಣ ಭಾರಿ ಪ್ರಮಾಣಗಳಲ್ಲಿ ಹೆಚ್ಚಿದುದುರ ಪರಿಣಾಮವಾಗಿ ಬ್ಯಾಂಕುಗಳು ಸಾಲ ನೀಡಿಕೆಯ ಇತರ ವಿಧಾನಗಳಿಗೆ ಶೋಧ ನಡೆಸಿದವು. ವಸತಿ ಸೌಲಭ್ಯ ಪಡೆಯಲು ಭಾರಿ ಪ್ರಮಾಣಗಳಲ್ಲಿ ಸಾಲ ನೀಡುವ ಮೂಲಕ ಅಪಾರ ಲಾಭಗಳಿಸಬಹುದೆಂಬ ಉತ್ತರ ಅವಕ್ಕೆ ಲಭಿಸಿತು. ೧೯೯೦ರ ವರ್ಷಗಳ ಮಧ್ಯಭಾಗದಲ್ಲಿ ಮನೆಕೊಳ್ಳಲು ಸಾಲ ನೀಡುವುದು ಬ್ಯಾಂಕುಗಳಿಗೆ ತುಂಬ ಲಾಭದಾಯಕವಾಗಿ ಕಂಡು ಬೆಳೆಯತೊಡಗಿತು. ಅವು ಕಡಿಮೆ ಬಡ್ಡಿ ದರಗಳಲ್ಲಿ ಭಾರಿ ಪ್ರಮಾಣಗಳ ಸಾಲ ನೀಡುವ ಮೂಲಕ ಹಾಗೂ ಮನೆಗಳ ಮೌಲ್ಯಗಳನ್ನೂ ಅಪಾರವಾಗಿ ಹೆಚ್ಚಿಸುವ ಮೂಲಕ ಅಪರಿಮಿತ ಲಾಭ ಗಳಿಸತೊಡಗಿದವು. ಮನೆಗಳ ಬೆಲೆ ಹೆಚ್ಚುತ್ತಿದ್ದಾಗ ಅದನ್ನು ತಡೆಗಟ್ಟಲು ಅಮೆರಿಕದ ಸರಕಾರವು ಬಡ್ಡಿ ದರವನ್ನು ಹೆಚ್ಚಿಸುವ ಬದಲು ಕಮ್ಮಿ ಬಡ್ಡಿ ದರಗಳಲ್ಲಿ ಸಾಲ ನೀಡುವುದಕ್ಕೆ ಉತ್ತೇಜನ ನೀಡಿತು. ಬ್ಯಾಂಕುಗಳ ಸಾಲ ಪಡೆದು ಅದನ್ನು ತೀರಿಸಲು ಸಾಮರ್ಥ್ಯವಿರುವ 'ಪ್ರಧಾನ' ವರ್ಗದ ಜನರಿಗಷ್ಟೇ ಅಲ್ಲ, ಅಷ್ಟು ಸಾಮರ್ಥ್ಯವಿರದ 'ಉಪಪ್ರಧಾನ' ವರ್ಗದ ಜನರಿಗೂ ಹೆಚ್ಚು ಹೆಚ್ಚು ಸಾಲ ನೀಡತೊಡಗಿದವು. ಮನೆ ಕೊಳ್ಳಲು ಸಾಲ ನೀಡಿಕೆಗೆ ಕೊಳ್ಳುವವರ ''ಆದಾಯ ಎಷ್ಟಿದೆ, ಎಂತಹ ಕೆಲಸದಲ್ಲಿದ್ದಾರೆ, ಅವರ ಆಸ್ತಿಪಾಸ್ತಿ ಎಷ್ಟು'' ಎಂಬುದೇನನ್ನೂ ಚಿಂತಿಸಬೇಕಿಲ್ಲ ಎಂಬ ಪರಿಪಾಠ ಬ್ಯಾಂಕುಗಳಿಗೆ ಸರ್ವೇಸಾಮಾನ್ಯವಾಯಿತು. ಆದಾಯ, ವೃತ್ತಿ, ಸ್ವತ್ತು ಇವುಗಳೇನನ್ನೂ ಲೆಕ್ಕಿಸದೆ ನೀಡುವ ಸಾಲಕ್ಕೆ 'ನಿಂಜ' (NINJA – no verification of income, jobs or asset)ಎಂಬ ಹೆಸರನ್ನೂ ನೀಡಲಾಯಿತು. ಬೆಲೆಗಳು ಹೆಚ್ಚುತ್ತಿರುವ ಪರಿಸ್ಥಿತಿಯಲ್ಲಿ ಮನೆಯನ್ನು ಭೋಗ್ಯಕ್ಕೆ ನೀಡುವುದೇ ಸಾಲಕ್ಕೆ ಸುಭದ್ರತೆ ಒದಗಿಸುತ್ತದೆಂಬ ಆಶಯ ಈ ಬ್ಯಾಂಕುಗಳದ್ದಾಗಿದ್ದಿತು. 'ನಿಂಜ' ಪದ್ಧತಿಯಂತೆ ಸಾಲ ಪಡೆದಾತ ಗೊತ್ತಾದ ಸಮಯದಲ್ಲಿ ಸಾಲ ತೀರಿಸದೆ ಹೋದಲ್ಲಿ ಅವನ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಂಡು ಅದನ್ನು ಇನ್ನೂ ಹೆಚ್ಚಿನ ಬೆಲೆಗೆ ಮಾರಿ ಸಾಲದ ಹಣವನ್ನು ಹಿಂದಿರುಗಿ ಪಡೆಯುವುದರ ಜೊತೆಗೆ ಲಾಭವನ್ನೂ ಗಳಿಸಬಹುದು ಎಂಬುದು ಈ ಬ್ಯಾಂಕುಗಳ ತರ್ಕವಾಗಿದ್ದಿತು. ಹೀಗೆ 'ನಿಂಜ' ಪದ್ಧತಿಯಲ್ಲಿ 'ಉಪಪ್ರಧಾನ' ವ್ಯಕ್ತಿಗಳಿಗೆ ಸಾಲನೀಡಿಕೆಯ ಪ್ರಮಾಣವು ೧೯೯೪ರಲ್ಲಿ ಒಟ್ಟು ಸಾಲ ನೀಡಿಕೆಯ ಪ್ರಮಾಣದ ಶೇ. ೫ ರಷ್ಟಾಗಿದ್ದಲ್ಲಿ ೨೦೦೬ರಲ್ಲಿ ಅದು ಶೇ. ೯೦ಕ್ಕೆ ಏರಿತು! ಇದರ ಫಲವಾಗಿ ಅಮೆರಿಕದಲ್ಲಿ ಮನೆ ಒಡೆತನ ೧೯೯೪ರಲ್ಲಿ ಶೇ. ೬೪ರಷ್ಟಿದ್ದುದು ೨೦೦೪ರಲ್ಲಿ ಶೇ.೯೦ಕ್ಕೆ ಏರಿತು. ಹೀಗೆ ೧೯೯೦ರ ವರ್ಷಗಳ ಕೊನೆಯಲ್ಲಿ ವಸತಿ ಒಡೆತನದಲ್ಲಿ ಭಾರಿ ಏರಿಕೆ ಉಂಟಾಯಿತು. ೧೯೯೭ ಹಾಗೂ ೨೦೦೬ರ ನಡುವಿನ ಅವಧಿಯಲ್ಲಿ ಮನೆಗಳ ಬೆಲೆ ಶೇ. ೧೨೪ರಷ್ಟು ಏರಿತು. ಈ ಬೆಲೆ ಹೆಚ್ಚಳವನ್ನು ಕ್ರಮಬದ್ಧಗೊಳಿಸಲು ಅಮೆರಿಕನ್ ಸರಕಾರವು ಮಧ್ಯೆ ಪ್ರವೇಶಿಸಬೇಕಾಯಿತು!

**ನೀರುಗುಳ್ಳೆ...**

ಇದೆಲ್ಲ ಒಳ್ಳೆಯದೇ ಅಲ್ಲವೇ ?! ಈ ವಸತಿ ಸೌಲಭ್ಯದ ಏರಿಕೆಯು ಒಂದು ರೀತಿಯ 'ನೀರುಗುಳ್ಳೆ' ಆದುದೆಂತು ? ಇದಕ್ಕೂ 'ಉಪಪ್ರಧಾನ' ಸಾಲ (ಅಂದರೆ ಸಾಲ ತೀರಿಸಲು ಸಾಮರ್ಥ್ಯವಿರದ ಜನರಿಗೆ ನೀಡಿದ ಸಾಲ)ಗಳಿಗೂ ಏನು ಸಂಬಂಧ ? ಮನೆ ಕೊಳ್ಳಲು ಬ್ಯಾಂಕುಗಳು ಸಾಲ ನೀಡತೊಡಗಿದಾಗ, ತಮ್ಮ ಹಣ ದೀರ್ಘಕಾಲ ಹಿಡಿದಿಡಲ್ಪಡುತ್ತದೆ ಎಂಬುದನ್ನು ಅವು ಬೇಗನೆಯೇ ಮನಗಂಡವು. ಏಕೆಂದರೆ, ಮನೆ ಕೊಳ್ಳಲು ನೀಡುವ ಸಾಲಗಳು ದೀರ್ಘಾವಧಿಯದಾಗಿರುತ್ತಿದ್ದವು. ಈ ಪರಿಸ್ಥಿತಿಯಲ್ಲೇ 'ಹಣಕಾಸು ಬ್ಯಾಂಕಿಂಗ್'ನ ನಿಜವಾದ ದಗಾಕೋರರು (ಆ ಕಾಲದಲ್ಲಿ ಇವರನ್ನು ಪ್ರತಿಭಾವಂತರೆಂದು ಪರಿಗಣಿಸಿ ಅವರಿಗೆ ಅನುಚಿತವಾಗಿ ಪುರಸ್ಕಾರ ನೀಡಲಾಯಿತು) ಪ್ರವೇಶಿಸಿದುದು. 'ಹಣಕಾಸು ಬ್ಯಾಂಕುಗಳು' ಅಮೆರಿಕಕ್ಕೇ ವಿಶಿಷ್ಟವಾದ ಬ್ಯಾಂಕುಗಳು. ಯೂರೋಪ್ ಮತ್ತಿತರ ಅನೇಕ ದೇಶಗಳಲ್ಲಿ ಇಂತಹ ಬ್ಯಾಂಕುಗಳಿಲ್ಲ. ಠೇವಣಿಗಳನ್ನು ಇಸಿದುಕೊಂಡು ಸಾಲ ನೀಡುವ ಬ್ಯಾಂಕುಗಳಂತಲ್ಲದೆ ಈ 'ಹಣಕಾಸು ಬ್ಯಾಂಕುಗಳು ಠೇವಣಿಗಳನ್ನೂ ಇಸಿದುಕೊಳ್ಳುವುದಿಲ್ಲ, ಸಾಲವನ್ನೂ ನೀಡುವುದಿಲ್ಲ, ಆದರೆ ಅವು ಸಾಲಗಳನ್ನು ಕೊಳ್ಳುತ್ತವೆ, ಅವನ್ನು 'ಉತ್ಪನ್ನ'ಗಳಾಗಿ ಸಾರಾಸಗಟುಗೊಳಿಸಿ ಅವನ್ನು ಇತರರಿಗೆ ಮಾರುತ್ತವೆ. ಬೇರೆ ಮಾತುಗಳಲ್ಲಿ, 'ಹಣಕಾಸು ಬ್ಯಾಂಕುಗಳು' ಸಾಮಾನ್ಯ ಬ್ಯಾಂಕುಗಳಿಗೆ ಕಮಿಷನ್ ನೀಡಿ ಅವುಗಳ ವಶದಲ್ಲಿದ್ದ ಗೃಹಸೌಲಭ್ಯ ಸಾಲಗಳನ್ನು ತಾವೇ ವಹಿಸಿಕೊಂಡು ಅವುಗಳನ್ನು 'ಭೋಗ್ಯಾಧಾರಿತ ಹುಂಡಿ' (MBS) ಅಥವಾ 'ಪಾರ್ಶ್ವಸ್ಥ ಸಾಲ ಮುಚ್ಚಳಿಕೆ' (CDO–collateralized debt obligations)ಗಳನ್ನಾಗಿ ಪರಿವರ್ತಿಸಿ, ಅವನ್ನು ಇತರರಿಗೆ, ಅದರಲ್ಲೂ ಹೆಚ್ಚಾಗಿ ದೊಡ್ಡ ಬ್ಯಾಂಕುಗಳಿಗೆ ಅಥವಾ ಹಣಹೂಡಿಕೆ ನಿಧಿ ಸಂಸ್ಥೆಗಳಿಗೆ ಮಾರುತ್ತವೆ. ಈ ಭೋಗ್ಯಾಧಾರಿತ ಹುಂಡಿ(MBS)ಹಾಗೂ 'ಪಾರ್ಶ್ವಸ್ಥ ಸಾಲ ಮುಚ್ಚಳಿಕೆ (CDO)ಗಳನ್ನು', 'ಜನ್ಯ ಪ್ರುತ್ಪನ್ನ'ಗಳೆಂದು ಕರೆಯಲಾಗುತ್ತದೆ. ಈ ಜನ್ಯ ಪ್ರುತ್ಪನ್ನಗಳೇ ಅಮೆರಿಕದ ಗೃಹಸೌಲಭ್ಯ ಮಾರುಕಟ್ಟೆ ಹಾಗೂ ಜಾಗತಿಕ ಹಣಕಾಸು ಮಾರುಕಟ್ಟೆಗಳ ನಡುವಿನ ಪ್ರಧಾನ ಕೊಂಡಿ. ಲೇಮನ್ ಬ್ರದರ್ಸ್ ಅಥವಾ ಮೆರಿಲ್ ಲಿಂಚ್ ಸಂಸ್ಥೆಗಳಂತೆ ಈ ಹಣಕಾಸು ಬ್ಯಾಂಕುಗಳ ದುರಾಸೆ ಎಷ್ಟು ಅಧಿಕವಾಗಿದ್ದಿತೆಂದರೆ ಅವು ತಮ್ಮ ಸ್ವಂತ ಆಸ್ತಿಪಾಸ್ತಿಗಳನ್ನು ಮೂವತ್ತು ಪಟ್ಟು ಹೆಚ್ಚಿಸಿಕೊಂಡವು. ಅಂದರೆ ಅವು ತಮ್ಮ ಸ್ವತ್ತಿನ ಪ್ರತಿ ಮೂರು ಸೆಂಟ್‌ಗಳನ್ನು 'ಜನ್ಯ ಪ್ರುತ್ಪನ್ನ'ಗಳ ಒಂದು ಡಾಲರ್‌ಗೆ ಮಾರುತ್ತಿದ್ದವು. ಈ ಕೂಡಿಕೆಯ ಬ್ಯಾಂಕಿಂಗ್ ವಿಭಾಗ ಕಾಡ್ಗಿಚ್ಚಿನಂತೆ ಹಬ್ಬತೊಡಗಿತು. ವಾಸ್ತವವಾಗಿ ಅದನ್ನು FIRE (finance, investment and real estate) ವಿಭಾಗ ಎಂದೇ ಕರೆಯಲಾಗುತ್ತಿತ್ತು. ಈ FIRE ವಿಭಾಗವು ಖಾಸಗಿ ವಲಯದ ಶೇ. ೮ರಷ್ಟು ಮಾತ್ರ ಕೆಲಸಗಾರರನ್ನು ನೇಮಕಮಾಡಿಕೊಂಡು ಶೇ. ೪೧ರಷ್ಟು ಲಾಭ ಗಳಿಸುತ್ತಿದ್ದಿತು.

ಮನೆ ಕೊಳ್ಳಲು ಸುಲಭವಾಗಿ ಸಾಲ ಕೊಡುತ್ತಿದ್ದುದರಿಂದ ಅನೇಕರು ಮನೆಗಳನ್ನು ವಾಸ ಮಾಡಲಷ್ಟೆ ಅಲ್ಲ, ಸಟ್ಟಾ ವ್ಯಾಪಾರಕ್ಕಾಗಿಯೂ ಕೊಳ್ಳತೊಡಗಿದರು. ಉದಾಹರಣೆಗೆ, ೨೦೦೬ರಲ್ಲಿ ಕೊಂಡ ಮನೆಗಳಲ್ಲಿ ಶೇ.೪೦ರಷ್ಟನ್ನು ಪುನಃ ಮಾರಾಟಕ್ಕಾಗಿ ಇಲ್ಲವೇ ವಿಹಾರಧಾಮಗಳಾಗಿ ಬಳಸಲಾಯಿತು. ಆದರೂ ಈ ನೀರುಗುಳ್ಳೆ (ಆಧಾರ ರಹಿತ ಉದ್ಯಮ) ಪ್ರಾರಂಭವಾದುದೆಂತು ? ಗೃಹ ಸೌಲಭ್ಯ ಒದಗಿಸುವುದರಲ್ಲಿ ಅಪಾರ ಹೆಚ್ಚಳವಾದುದು ಮನೆಗಳ ಬೆಲೆಗಳ ಮೇಲೆ ಕೆಳಮಟ್ಟದ ಒತ್ತಡ ಹಾಕತೊಡಗಿತು. ೨೦೦೬ರ ಹೊತ್ತಿಗೆ ಮನೆಗಳ ಬೆಲೆಗಳು ಕುಸಿಯತೊಡಗಿದವು. ೨೦೦೭ರ ಅಕ್ಟೋಬರ್ ಹೊತ್ತಿಗೆ ಶೇ.೧೬ರಷ್ಟು 'ಉಪಪ್ರಧಾನ ಸಾಲ'ಗಳು [illegible]. [illegible] ೨೦೦೭ರಲ್ಲಿ ೧.೩ ಮಿಲಿಯ ಗೃಹಸೌಲಭ್ಯ [illegible]. ಅಂದರೆ [illegible]. ಬೆಲೆಗಳು [illegible] ೨೦೦೮ರ ಮಾರ್ಚ್ ಹೊತ್ತಿಗೆ [illegible] ಗೃಹಸೌಲಭ್ಯ [illegible] ಅವುಗಳ ಭೋಗ್ಯ – [illegible]! [illegible] MBS ಹಾಗೂ CDO [illegible] 'ಜನ್ಯ ಪ್ರುತ್ಪನ್ನ'ಗಳ [illegible]

ವ್ಯುತ್ಪನ್ನಗಳ ಮೌಲ್ಯ ಮಂಗಮಾಯವಾಯಿತು ಮತ್ತು ಘನ ಆಸ್ತಿಪಾಸ್ತಿ ಎಂದು ಪರಿಗಣಿತವಾದವೆಲ್ಲ ರಾತ್ರೋರಾತ್ರಿ 'ವಿಷಮಯ'ವಾದವು. ಹಣಕಾಸು ಬ್ಯಾಂಕಿಂಗ್ ಸೃಷ್ಟಿಸಿದ ಈ 'ಜನ್ಯ ವ್ಯುತ್ಪನ್ನ' (derivatives)ಗಳನ್ನೇ ಜಗತ್ತಿನಾದ್ಯಂತ, ವಿಶೇಷವಾಗಿ ಇಂಗ್ಲೆಂಡ್ ಮತ್ತು ಯೂರೋಪ್‌ಗಳಲ್ಲಿನ ಬ್ಯಾಂಕುಗಳಿಗೆ ಮಾರಾಟ ಮಾಡಲಾಯಿತು. ಅಮೆರಿಕದಲ್ಲೇ ಐದು ಅತಿ ದೊಡ್ಡ ಹಣಕಾಸು ಬ್ಯಾಂಕುಗಳು ಈ ಪರಿಸ್ಥಿತಿಯಿಂದ ಅತಿ ಕೆಟ್ಟದಾಗಿ ಪೆಟ್ಟು ತಿಂದು ಕಣ್ಮರೆಯಾದವು. ಅವುಗಳಲ್ಲಿ 'ಲೇಮನ್ ಬ್ರದರ್ಸ್' ಮುಚ್ಚಿಹೋಯಿತು; 'ಬೇರ್ ಸ್ಟರ್ನ್ಸ್' ಹಾಗೂ 'ಮೆರಿಲ್ ಲಿಂಚ್' ಬ್ಯಾಂಕುಗಳಿಗೆ ಸರಕಾರದ ಸಹಾಯ ಲಭಿಸಿದ ನಂತರ ಅವುಗಳನ್ನು ಇತರ ಬ್ಯಾಂಕುಗಳು ತಮ್ಮದನ್ನಾಗಿಸಿಕೊಂಡವು; 'ಮಾರ್ಗನ್ ಸ್ಟಾನ್ಲೇ' ಹಾಗೂ 'ಗೋಲ್ಡ್‌ಮನ್ ಸಾಕ್ಸ್'ಗಳು ಸಾಮಾನ್ಯ ಬ್ಯಾಂಕುಗಳಾಗಿ ಪರಿವರ್ತನೆಗೊಂಡವು. ಅಂದಾಜಿನ ಪ್ರಕಾರ ಸುಮಾರು ೧.೩ ಟ್ರಿಲಿಯನ್ ಡಾಲರುಗಳಷ್ಟು ಹಣ (ಅಂದರೆ, ೬,೫೦,೦೦೦ ಕೋಟಿ ರೂಪಾಯಿ, ಅಂದರೆ ಊಹಿಸಿ ತಿಳಿಯಬೇಕಾದಲ್ಲಿ, ಭಾರತದ ರಾಷ್ಟ್ರೀಯ ವರಮಾನದ ಬಹುಮಟ್ಟಿಗೆ ೧೫ ಪಟ್ಟು ಹಣ) ಇಂಗಿಹೋಯಿತು.

**'ಜನ್ಯ ವ್ಯುತ್ಪನ್ನ'ಗಳು ಹಾಗೂ ಹಣಕಾಸು ವಿಪತ್ತು**

ಈ ಹಣಕಾಸಿನ ಮುಗ್ಗಟ್ಟು ಅಮೆರಿಕದ ಹಾಗೂ ಜಗತ್ತಿನ ಇತರ ಭಾಗಗಳ ಆರ್ಥಿಕತೆಯ ಮೇಲೆ ಬೀರಿದ ದುಷ್ಪರಿಣಾಮದತ್ತ ಗಮನ ಹರಿಸುವ ಮುನ್ನ ಈ 'ದಗಾಕೋರ ಬಂಡವಾಳವಾದ'ವು ಹೇಗೆ ಅನಿಯಂತ್ರಿತ 'ಜನ್ಯ ವ್ಯುತ್ಪನ್ನ'ಗಳು ಕೇಂದ್ರ ಪಾತ್ರ ವಹಿಸುವಂತೆ ಮಾಡಿತು ಹಾಗೂ ಹೇಗೆ ಅದು ಜಗತ್ತಿನಾದ್ಯಂತ ಹಣಕಾಸು ವಿಧ್ವಂಸ ಉಂಟುಮಾಡಿತು ಎನ್ನುವುದನ್ನು ಅರ್ಥ ಮಾಡಿಕೊಳ್ಳೋಣ. 'ಜನ್ಯ ವ್ಯುತ್ಪನ್ನ' ಚಾಲಿತ ಹಣಕಾಸು ಮಾರುಕಟ್ಟೆಗಳ ಈ ಇಡೀ ಹೊಸ ವ್ಯವಸ್ಥೆಯನ್ನು ಜಾರಿಗೆ ತಂದು ಪೋಷಿಸಿ ಬೆಳೆಸಿದವನು ಅಲೆನ್ ಗ್ರೀನ್‌ಸ್ಪಾನ್ ಎಂಬಾತ. ಆತ ಅಸಾಮಾನ್ಯವಾಗಿ ಬಹು ದೀರ್ಘಕಾಲ, ೧೯೮೭ರಿಂದ ೨೦೦೬ರವರೆಗೆ, ಅಮೆರಿಕದ ಫೆಡರಲ್ ರಿಸರ್ವ್ ಸಿಸ್ಟಮ್‌ನ (ಇದು ನಮ್ಮ ರಿಸರ್ವ್ ಬ್ಯಾಂಕ್‌ನಂತಹುದು) ಅಧ್ಯಕ್ಷನಾಗಿದ್ದ. ೧೯೯೦ರ ವರ್ಷಗಳ ಆದಿಯಿಂದಲೇ 'ಜನ್ಯ ವ್ಯುತ್ಪನ್ನ'ಗಳಿಂದ ಉಂಟಾಗುವ ಅಪಾಯಗಳ ಬಗೆಗೆ ತೀವ್ರ ಎಚ್ಚರಿಕೆ ನೀಡಲಾಗುತ್ತಿದ್ದಿತು. 'ಈ ಜನ್ಯ ವ್ಯುತ್ಪನ್ನಗಳು ಹೇಗೆ ಕಾರ್ಯ ಜರುಗಿಸುತ್ತವೆ ಅನ್ನುವುದು ತಿಳಿಯದ ಕಾರಣ ತಾವು ಆ ವ್ಯುತ್ಪನ್ನಗಳಲ್ಲಿ ಹಣ ತೊಡಗಿಸಲಿಲ್ಲ' ಎಂದು ಜಾರ್ಜ್ ಸೊರೋಸ್‌ರಂಥ ಕೆಲವು ಭಾರಿ ಸ್ಟಾಕ್ ಮಾರ್ಕೆಟ್ (ಷೇರು ಮಾರುಕಟ್ಟೆ) ಬಂಡವಾಳ ಹೂಡಿಕೆದಾರರು ಹೇಳಿದರು. 'ಜನ್ಯ ವ್ಯುತ್ಪನ್ನ'ಗಳು ''ಸಾಮೂಹಿಕ ವಿನಾಶದ ಹಣಕಾಸು ಮಾರಕಾಸ್ತ್ರಗಳು'' ಎಂದು ಸ್ಟಾಕ್ ಮಾರ್ಕೆಟ್ ಲಾಭಗಳಲ್ಲಿ ಭಾರಿ ನಂಬಿಕೆ ಇರಿಸಿದ್ದ ವಾರೆನ್ ಈ. ಬುಫೆಟ್‌ರವರೇ ಹೇಳಿದ್ದಾರೆ. ಆದರೆ ಈ ಎಲ್ಲ ಎಚ್ಚರಿಕೆಗಳ ಕಡೆಗೆ ಯಾರೂ, ಅದರಲ್ಲೂ ಈ ವಿಷಯದಲ್ಲಿ ವಿಶೇಷ ಆಸಕ್ತಿಹೊಂದಿದ್ದ ಅಲನ್ ಗ್ರೀನ್‌ಸ್ಪಾನ್‌ರವರು, ಗಮನ ನೀಡಲೇ ಇಲ್ಲ. ಜನ್ಯ ವ್ಯುತ್ಪನ್ನಗಳನ್ನು ಕ್ರಮಬದ್ಧಗೊಳಿಸಲು ಅಮೆರಿಕದ ಕಾಂಗ್ರೆಸ್ ಕ್ರಮ ಕೈಗೊಳ್ಳಲು ಮುಂದಾದ ಪ್ರತಿ ಬಾರಿಯೂ ಅಲನ್ ಗ್ರೀನ್‌ಸ್ಪಾನ್ ಆ ಯತ್ನಗಳನ್ನು ನಿಷ್ಫಲಗೊಳಿಸಿದರು. ೧೯೯೪ರಲ್ಲಿ ಕಾಂಗ್ರೆಸ್ (ಶಾಸನ ಸಭೆ) ಈ ಬಗೆಗೆ ಚರ್ಚೆ ಕೈಗೊಂಡಾಗ ಅಲನ್ ಗ್ರೀನ್‌ಸ್ಪಾನ್ ಹೇಳಿದರು, ''ಜನ್ಯ ವ್ಯುತ್ಪನ್ನ ಮಾರುಕಟ್ಟೆಗಳನ್ನು ಒಳಗೊಂಡು ಹಣಕಾಸು ಮಾರುಕಟ್ಟೆಗಳಲ್ಲೆಲ್ಲ ಕಂಡುಬರುವ ಅಪಾಯಕರ ಪರಿಸ್ಥಿತಿಗಳನ್ನೆಲ್ಲ ಖಾಸಗಿ ಪಕ್ಷಗಳೇ ವಿಧಿಬದ್ಧಗೊಳಿಸುತ್ತವೆ.'' ಮಾರುಕಟ್ಟೆ ನಿಯಂತ್ರಣಕ್ಕಿಂತ ಮಿಗಿಲಾದ ನಿಯಂತ್ರಣ ವ್ಯವಸ್ಥೆ ಫೆಡರಲ್ ನಿಯಂತ್ರಣದಲ್ಲಿ ಯಾವುದೂ ಇಲ್ಲ. ಇದರ ಪರಿಣಾಮವಾಗಿ ಜನ್ಯ ವ್ಯುತ್ಪನ್ನಗಳನ್ನು ಕಾನೂನು ಬದ್ಧವಾಗಿ ನಿಯಂತ್ರಿಸಲು ಮುಂದೆ ತಂದ ಮಸೂದೆ ಅಂಗೀಕೃತಗೊಳ್ಳಲೇ ಇಲ್ಲ. ೨೦೦೦ನೇ ವರ್ಷದಲ್ಲಿ ಜನ್ಯ ವ್ಯುತ್ಪನ್ನಗಳನ್ನು ನಿಯಮ ಬದ್ಧಗೊಳಿಸಲು ಸರಕುಗಳ ವಾಯಿದೆ ಮಾರುಕಟ್ಟೆ ಆಯೋಗಕ್ಕೆ (Commodity Futures Trading Commision) ಅಧಿಕಾರ ನೀಡಲು ಯತ್ನಿಸಿದಾಗ ಮತ್ತೆ ಅಲನ್ ಗ್ರೀನ್‌ಸ್ಪಾನ್, ''ನೀವು ಎಷ್ಟೇ ಕಾನೂನುಗಳನ್ನು ಬೇಕಾದರೂ ಮಾಡಿ. ಆದರೆ ಯಾವುದೇ ಕಾನೂನು ಯಾವುದೇ ರೀತಿಯಲ್ಲಿ ತಪ್ಪೂ ಆಗದು, ಅದೇ ಹೊತ್ತಿನಲ್ಲಿ ಯಾವುದೇ ರೀತಿಯಲ್ಲೂ ಸರಿಯೂ ಆಗದು ಎಂಬ ಖಾಚಿತ್ಯವನ್ನು ನಾನು ನೀಡಬಲ್ಲೆ'' ಎಂದು ಹೇಳುತ್ತ ಆ ಯತ್ನವನ್ನು ನಿಷ್ಫಲಗೊಳಿಸಿದರು. ೨೦೦೩ರಲ್ಲೂ ಗ್ರೀನ್‌ಸ್ಪಾನ್ ಅಮೆರಿಕದ ಸೆನೇಟ್ ಬ್ಯಾಂಕಿಂಗ್ ಕಮಿಟಿ ಮುಂದೆ ವಾದಿಸುತ್ತ ತಮ್ಮ ನಿಲುವನ್ನು ಸಮರ್ಥಿಸಿಕೊಂಡರು. ಅವರು ಹೇಳಿದರು: ''ಜನ್ಯ ವ್ಯುತ್ಪನ್ನಗಳು ಒಂದು ರೀತಿಯ ಅತ್ಯಸಾಧಾರಣ ಉಪಯುಕ್ತ ಸಾಧನಗಳು. ಅವುಗಳ ನೆರವಿನಿಂದ ಅಪಾಯವನ್ನು ಅದನ್ನು ಎದುರಿಸಲಾರದವರ ಕಡೆಯಿಂದ ಎದುರಿಸಲು ಇಚ್ಛಿಸುವವರ ಹಾಗೂ ಸಮರ್ಥರಾದವರ ಕಡೆಗೆ ವರ್ಗಾಯಿಸುವುದು ಸಾಧ್ಯವಿದೆ... ಹಾಗಾಗಿ ಜನ್ಯ ವ್ಯುತ್ಪನ್ನಗಳನ್ನು ಗಾಢವಾಗಿ ನಿಯಮಬದ್ಧಗೊಳಿಸುವುದು ತಪ್ಪಾಗುತ್ತದೆ.'' ಈ ಅಲನ್ ಗ್ರೀನ್‌ಸ್ಪಾನ್ ತಮ್ಮ ಬಾಳಿನ ಆರಂಭಿಕ ವರ್ಷಗಳಲ್ಲಿ, ''ಸಾಮೂಹಿಕ ಶಕ್ತಿಯು ವ್ಯಕ್ತಿಗಳ ಪ್ರಬುದ್ಧ ಆತ್ಮಹಿತದ ವಿರುದ್ಧ ಎತ್ತಿ ನಿಲ್ಲಿಸಿದ ಒಂದು ದುಷ್ಟ ಶಕ್ತಿ'' ಎಂದು ಹೇಳಿದ ಕಾದಂಬರಿಕಾರ ಅಲನ್ ರ್‍ಯಾಂಡ್‌ರ ವಿಚಾರಗಳಿಂದ ಪ್ರಭಾವಿತರಾಗಿದ್ದರು ಎಂಬುದರಲ್ಲಿ ಆಶ್ಚರ್ಯವೇನೂ ಇಲ್ಲ! ಅಲನ್ ಗ್ರೀನ್‌ಸ್ಪಾನ್‌ರ ಹಣಕಾಸು ಬುದ್ಧಿವಂತಿಕೆಯ ಸುತ್ತ ದಿವ್ಯ ಕಾಂತಿಯ ಪ್ರಭಾವವನ್ನು ನಿರ್ಮಿಸಲಾಯಿತು. ಅವರನ್ನು ಒಬ್ಬ 'ದೈವವಾಣಿ' ಎಂದು ಪರಿಗಣಿಸಲಾಯಿತು. ಆದರೆ ಇದು ಆಗಿನ ಪರಿಸ್ಥಿತಿ ಎನ್ನಿ. ಈಗ ಇದು ತೀರ ಬದಲಾಗಿದೆ.

ಅವರನ್ನೀಗ ''ಸರಣಿ ನೀರುಗ್ಗುಳ್ಳೆ ನಿರ್ಮಾಪಕ'' ಎಂದು ಕರೆಯಲಾಗುತ್ತಿದೆ!

**ಜಾಮೀನು! ಯಾರಿಗಾಗಿ?**

ಈ ಕಥೆಗೆ ಒಂದು ಅನೈತಿಕ ಪಕ್ಷವಿದೆ. ಹಣಕಾಸು ಬ್ಯಾಂಕಿಂಗ್‌ನ ಪರಿವರ್ತನಕಾರಕ ಉತ್ಪನ್ನಗಳೆಂದು ಬಣ್ಣಿಸಲಾದ ಜನ್ಯ ವ್ಯುತ್ಪನ್ನಗಳ 'ಪ್ರತಿಭಾನ್ವಿತ'ರ ಸುತ್ತ ಮತ್ತು ಪ್ರತಿಫಲಗಳನ್ನು ತಾವೇ ಕಬಳಿಸುವವರ ಸುತ್ತ ಮೋಸದ, ಹೊಗಳಿಕೆಯ ಪ್ರಭಾವಳಿಯನ್ನು ನಿರ್ಮಿಸಲಾಯಿತು. ಇವರು ಎಂಥ ಸ್ವಾರ್ಥಪರರೆಂಬುದನ್ನು ೨೦೦೭ರಲ್ಲಿ ಈ ಹಣಕಾಸು ಬ್ಯಾಂಕುಗಳ ಪ್ರಧಾನ ಕಾರ್ಯನಿರ್ವಾಹಕರು ಕಬಳಿಸಿದ ವಾರ್ಷಿಕ ವರಮಾನಗಳಿಂದ ತೀರ್ಮಾನಿಸಬಹುದು. ಗೋಲ್ಡ್‌ಮನ್ ಸಾಕ್ಸ್‌ರ ವಾರ್ಷಿಕ ವೇತನ ೭೦.೩ ಮಿಲಿಯ ಡಾಲರ್ (೩೫೦ ಕೋಟಿ ರೂಪಾಯಿ); ಲೇಮನ್ ಬ್ರದರ್ಸ್‌ರವರದು ೩೪ ಮಿಲಿಯ ಡಾಲರ್ (೧೫೩ ಕೋಟಿ ರೂಪಾಯಿ); ಬೇರ್ ಸ್ಟರ್ನ್ಸ್‌ರವರದು ೩೩.೯ ಮಿಲಿಯ ಡಾಲರ್ (೧೫೩ ಕೋಟಿ ರೂಪಾಯಿ); ಮೆರಿಲ್ ಲಿಂಚ್‌ರವರದು ೧೭.೩ ಮಿಲಿಯ ಡಾಲರ್ (೭೭ ಕೋಟಿ ರೂಪಾಯಿ). ಇವರು ಹಣಕಾಸು ಜನ್ಯ ವ್ಯುತ್ಪನ್ನಗಳಿಗೆ ಸಂಬಂಧಿಸಿ ತಮಗೆ ಬೇಕಾದಂತೆ ಬದಲಾವಣೆಗಳನ್ನು ಜಾರಿಗೆ ತರುವ ವಂಚಕರಲ್ಲಿ ಮೇಲುದರ್ಜೆಯವರು. ಈ ವಿಪತ್ತಿನಿಂದ ಹೊರಬರಲು ಬುಷ್ ಸರಕಾರ ಆರಂಭದಲ್ಲಿ ೭೦೦ ಮಿಲಿಯ ಡಾಲರ್‌ಗಳ ಸಹಾಯ ಧನ ನೀಡುವ ಸಲಹೆ ಮಾಡಿತು. ಆದರೆ ಇದು, ಭೋಗ್ಯಾಧಾರಿತ ಹಕ್ಕು ನಷ್ಟವಾಗಿ ಮನೆಗಳನ್ನು ಕಳೆದುಕೊಂಡ ಕೋಟ್ಯಂತರ ಜನರಿಗೆ ನೆರವಾಗುವ ಉದ್ದೇಶದ್ದಾಗಿರಲಿಲ್ಲ; ಬದಲು ಈ 'ವಿಷಮಯ ಜನ್ಯ ವ್ಯುತ್ಪನ್ನ'ಗಳನ್ನು ಸ್ವಾಧೀನಪಡಿಸಿಕೊಂಡ ಭಾರಿ ಬ್ಯಾಂಕುಗಳಿಗೂ ಹಣಕಾಸು ಬ್ಯಾಂಕುಗಳಿಗೂ ಬೆಂಬಲ ನೀಡುವ ಉದ್ದೇಶದ್ದಾಗಿದ್ದಿತು. ಈ ಜಾಮೀನು ಸಹಾಯಧನ ನೀಡಿಕೆಯನ್ನು ರಣಹದ್ದುಗಳಿಗೆ ನೀಡಿದ ಭೂರಿ ಭೋಜನವೆಂದೂ, ಅಮೆರಿಕದ ಮೇಲ್ಮಟ್ಟದ ಹಣಕಾಸು ಸಂಸ್ಥೆಗಳ ಬೇಜವಾಬ್ದಾರಿತನಕ್ಕೆ ಸಾಮಾನ್ಯ ತೆರಿಗೆದಾರರು ನೀಡಬೇಕಾಗಿಬಂದ ದಂಡವೆಂದೂ ಅಮೆರಿಕದ ಕಾಂಗ್ರೆಸ್‌ನಲ್ಲಿ ಬಣ್ಣಿಸಲಾಯಿತು. ''ತುಲನಾತ್ಮಕವಾಗಿ ಕೆಲವೇ ಮಂದಿ ಬೇಜವಾಬ್ದಾರಿಯುತವಾಗಿ ಕೈಕೊಂಡ ಅಸಾಧಾರಣ ಕ್ರಮ...'' ಎಂದು ಅಮೆರಿಕದ ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿದ್ದ ಡೆಮೊಕ್ರಾಟಿಕ್ ಪಕ್ಷದ ಉಮೇದುವಾರ ಬರಾಕ್ ಒಬಾಮಾರವರು ಈ ಜಾಮೀನು ಕ್ರಮವನ್ನು ವರ್ಣಿಸಿದ್ದಾರೆ. ಇಂತಹ ಕ್ರಮಗಳ ಬದಲು, ನಿರುದ್ಯೋಗಿಗಳಿಗೆ ಸಹಾಯ ವಿಸ್ತರಿಸುವ ಮೂಲಕ, ಸಾರ್ವಜನಿಕರಿಗೆ ಉಪಯುಕ್ತವಾದ ಕಾರ್ಯ ಕೈಗೊಳ್ಳಲು ರಾಜ್ಯ ಹಾಗೂ ಸ್ಥಳೀಯ ಸರಕಾರಗಳಿಗೆ ನೆರವಾಗುವ ಮೂಲಕ, ಭೋಗ್ಯಕ್ಕೆ ಪಡೆದ ಮನೆಗಳಲ್ಲಿ ಕುಟುಂಬಗಳು ವಾಸ ಮುಂದುವರೆಸಲು ಸಹಾಯ ಮಾಡುವ ಮೂಲಕ ಮತ್ತು ಅಧಿರಚನೆ ನಿರ್ಮಾಣದಲ್ಲಿ ಹೆಚ್ಚು ಹೆಚ್ಚು ಹಣ ತೊಡಗಿಸುವ ಮೂಲಕ, ರಾಜ್ಯವು ಹಣಕಾಸು ರೀತ್ಯಾ ಹೆಚ್ಚು ಹೆಚ್ಚಿನ ಪಾತ್ರ ವಹಿಸಬೇಕೆಂದು ವಿವೇಕಯುತರಾದ ಜನರು ಸಲಹೆ ಮಾಡಿದ್ದಾರೆ.

ಈ ವಿಷಮಯ ಜನ್ಯ ವ್ಯುತ್ಪನ್ನಗಳು ಎಷ್ಟು ವಿಸ್ತಾರವಾಗಿ ಹರಡಿವೆಯೆಂದರೆ ಯೂರೋಪಿನಲ್ಲೂ ಅಧಿಕ ಭಾಗಗಳು ಅದರ ತುಳಿತಕ್ಕೆ ಸಿಕ್ಕಿ ತತ್ತರಿಸಿವೆ. ಸುಲಭವಾಗಿ ನಗದೀಕರಿಸಬಲ್ಲ ಷೇರು, ಡಿಬೆಂಚರು ಇತ್ಯಾದಿಗಳನ್ನು ಬ್ಯಾಂಕುಗಳಿಗೆ ಒದಗಿಸಬೇಕೆಂದು ಜಗತ್ತಿನಾದ್ಯಂತ ಹುಯಿಲೆದ್ದಿದೆ. ಫ್ರಾನ್ಸ್ ದೇಶವು ರಾಜ್ಯ – ಖಾತರಿಯ ಸಾಲ ನೀಡಿಕೆಗಾಗಿ ಬ್ಯಾಂಕುಗಳಿಗೆ ೩೨೦ ಬಿಲಿಯ ಯೂರೋ ಡಾಲರುಗಳನ್ನೂ, ತೊಂದರೆಗೆ ಸಿಕ್ಕಿಬಿದ್ದಿರುವ ಬ್ಯಾಂಕುಗಳ ಬಂಡವಾಳ ಸರಿದೂಗಿಸಲು ೪೦ ಬಿಲಿಯ ಯೂರೋ ಡಾಲರುಗಳನ್ನೂ, ಒದಗಿಸುವುದಾಗಿ ಪಣತೊಟ್ಟಿದೆ. ಫ್ರೆಂಚ್ ಸರಕಾರವು ಫ್ರಾಂಕೋ-ಬೆಲ್ಜಿಯನ್ ನಾಯಕ ಡೆಕ್ಸಿಯಾರವರನ್ನೂ ಸಾಲದ ಹೊರೆಯಿಂದ ಮುಕ್ತಗೊಳಿಸಿದೆ. ಬ್ರಿಟಿಷ್ ಸರಕಾರವು ಮೂರು ಬ್ಯಾಂಕುಗಳನ್ನು ಭಾಗಶಃ ರಾಷ್ಟ್ರೀಕರಿಸಿದೆ. ಜರ್ಮನಿಯು ಬ್ಯಾಂಕುಗಳ ಸಾಲಗಳಿಗೆ ಬೆಂಬಲವಾಗಿ ೪೦೦ ಬಿಲಿಯ ಯೂರೋ ಡಾಲರುಗಳನ್ನೂ ಬ್ಯಾಂಕುಗಳ ಬಂಡವಾಳ ಹೆಚ್ಚಿಸಲು ಮತ್ತೆ ೮೦ ಬಿಲಿಯ ಯೂರೋ ಡಾಲರುಗಳನ್ನೂ ಒದಗಿಸುವ ವಚನ ನೀಡಿದೆ. ಹಾಲೆಂಡ್, ಬೆಲ್ಜಿಯಂ ಹಾಗೂ ಲುಕ್ಸೆಂಬರ್ಗ್‌ಗಳು ಕಷ್ಟದಲ್ಲಿ ಸಿಕ್ಕಿಬಿದ್ದ ಫೋರ್ಟಿಸ್ ಬ್ಯಾಂಕನ್ನು ಪಾರುಮಾಡಿವೆ. ಆದರೆ ಈ ವಿಷಮಯ ಜನ್ಯ ವ್ಯುತ್ಪನ್ನಗಳ ಹಾನಿಗೊಳಗಾದ


ಚಿತ್ರ ಕೃಪೆ: ತೆಹೆಲ್ಕಾ

ಕೆಲವು ಬ್ಯಾಂಕುಗಳು ಎಷ್ಟು ಭಾರಿಯವೆಂದರೆ, ಎಷ್ಟೇ ಸಹಾಯ ಧನಗಳೂ ನೆರವಿನ ಕ್ರಮಗಳೂ ಸಾಹಜಿಕ ಹಣಕಾಸು ಆರೋಗ್ಯ ಸ್ಥಿತಿಯನ್ನು ಪುನರ್ ಸ್ಥಾಪಿಸಬಲ್ಲವೇ ಎಂಬ ಬಗೆಗೆ ಅನುಮಾನವೂ ವ್ಯಕ್ತಗೊಂಡಿದೆ. ಉದಾಹರಣೆಗೆ, ಸ್ವಿಟ್ಜರ್ಲೆಂಡ್‌ನ ಯುಬಿಎಸ್ ಬ್ಯಾಂಕ್‌ನ ಸ್ವತ್ತುಗಳು ಆ ದೇಶದ ಜಿಡಿಪಿ (ಸಮಗ್ರ ಅಂತರ್ದೇಶೀಯ ಉತ್ಪಾದನೆ)ಯ ೪.೮೪ ಪಟ್ಟಿಗೆ ಸಮನಾಗಿವೆ. ಹೀಗೆಯೇ ಆಯಾ ದೇಶಗಳ ಜಿಡಿಪಿಗಿಂತ ಹೆಚ್ಚು ಸ್ವತ್ತುಗಳುಳ್ಳ ಬ್ಯಾಂಕುಗಳು ಕೊನೆ ಪಕ್ಷ ಒಂದು ಡಸನ್‌ಗಿಂತ ಹೆಚ್ಚಾಗಿವೆ! ಇವುಗಳಲ್ಲಿ ಹೆಚ್ಚಿನವು ವಿಷಮಯ ಜನ್ಯ ವ್ಯುತ್ಪನ್ನಗಳ ದುಷ್ಪರಿಣಾಮಕ್ಕೆ ತುತ್ತಾಗಿವೆ.

**ಹಣಕಾಸು ಮುಗ್ಗಟ್ಟಿನಿಂದ ಆರ್ಥಿಕ ಜಡತೆ**

ಇಂದು ಸರಕಾರಗಳ ಮುಂದಿರುವ ಪ್ರಶ್ನೆ ಇನ್ನೆಷ್ಟು ಮಾತ್ರವೂ ಹಣಕಾಸು ಸಂಸ್ಥೆಗಳನ್ನು ಮುಗ್ಗಟ್ಟಿನಿಂದ ಪಾರುಮಾಡುವುದಷ್ಟೆ ಅಲ್ಲ. ಆದರೆ ಇದಕ್ಕೂ ಮಿಗಿಲಾಗಿ ಈಗಾಗಲೇ ಅಮೆರಿಕದಲ್ಲಿ ಆರ್ಥಿಕ ಜಡತೆ ಉಂಟಾಗಿದೆ. ಚಿಲ್ಲರೆ ವ್ಯಾಪಾರ ಕುಸಿದಿದೆ. ಕೈಗಾರಿಕಾ ಉತ್ಪಾದನೆ ಇಳಿದಿದೆ. ತಯಾರಿಕಾ ವಿಭಾಗದಲ್ಲಿ ಉಂಟಾಗಿರುವ ಇಳಿತ ಕಳೆದ ೨೦ ವರ್ಷಗಳಲ್ಲಿ ಕಂಡುಬಂದಿರದಷ್ಟು ಆಗಿದೆ. ಈ ಉಪಪ್ರಧಾನ ಮುಗ್ಗಟ್ಟಿನಿಂದಾಗಿ ಸುಮಾರು ಒಂದು ಮಿಲಿಯ ಕೆಲಸಗಳು ನಷ್ಟವಾಗಿವೆ. ನಿರುದ್ಯೋಗ ಕಳೆದ ೨೫ ವರ್ಷಗಳಲ್ಲೇ ಅತ್ಯುನ್ನತವಾದ ಶೇ. ೬೬ ರ ಪ್ರಮಾಣ ತಲುಪಿದೆ. ಅಮೆರಿಕದಲ್ಲಿನ ಈ ಹಿಂಜರಿತದ ಅಲೆಗಳು ಭಾರತವನ್ನೂ ಒಳಗೊಂಡಂತೆ ಜಗತ್ತಿನ ಇತರ ಭಾಗಗಳಿಗೂ ಹರಡಿವೆ. ಭಾರತವೇನೋ ವಿಷಮಯ ಜನ್ಯ ಉತ್ಪನ್ನದ ಹೊಡೆತಕ್ಕೆ ಸಿಕ್ಕಿಬಿದ್ದಿಲ್ಲ, ಆದರೂ ಅಮೆರಿಕದಲ್ಲಿನ, ಬಹುಶಃ ಯೂರೊಪಿನಲ್ಲಿನ, ಹಿಂಜರಿತದ ದುಷ್ಪರಿಣಾಮ ಭಾರತದ ಮೇಲೂ ಆಗುವುದು ಖಂಡಿತ. ಖಾಸಗಿ ಬ್ಯಾಂಕುಗಳಲ್ಲಿನ 'ವಿದೇಶಿ ನೇರ ಹೂಡಿಕೆ' (ಎಫ್‌ಡಿಐ - FDI)ಯನ್ನು ಶೇ. ೭೪ಕ್ಕೆ, ವಿಮೆಯಲ್ಲಿನ ಎಫ್‌ಡಿಐಯನ್ನು ಶೇ. ೪೯ಕ್ಕೆ ಏರಿಸುವುದನ್ನು ಪ್ರಬಲವಾಗಿ ಪ್ರತಿರೋಧಿಸಿದುದರ ಮತ್ತು ಬಂಡವಾಳ ಲೆಕ್ಕದ ಪರಿವರ್ತನೆಯನ್ನು ಪ್ರತಿರೋಧಿಸಿದುದರ ಪರಿಣಾಮವಾಗಿ, ಭಾರತವು ಜಾಗತಿಕ ಹಣಕಾಸಿನ ವಿಪತ್ತಿನಿಂದ ಸ್ವಲ್ಪಮಟ್ಟಿಗೆ ತಪ್ಪಿಸಿಕೊಂಡಿದೆ ಎಂಬ ಭಾವನೆ ವಿಸ್ತೃತವಾಗಿದೆ. ಇದನ್ನೆಲ್ಲ ಪ್ರಾರಂಭಿಸಿದುದು ಕೆಳಮಟ್ಟದ ಶೇಕಡಾವಾರು ಬೆಳವಣಿಗೆ (ಎಲ್‌ಪಿಜಿ)ಯಾಗಿದೆ. ಈ ಕೆಳಮಟ್ಟದ ಶೇಕಡಾವಾರು ಬೆಳವಣಿಗೆಯ ಮೂಲ ಕಾರಣದತ್ತ ಮತ್ತೆ ದೃಷ್ಟಿ ಹರಿಸುವುದು ಅತ್ಯವಶ್ಯ. ಪ್ರಬಲವಾದ ಒಂದು ಸರ್ವವ್ಯಾಪಕ ಕ್ರಮಬದ್ಧಕಾರಕ ವ್ಯವಸ್ಥೆ ಅವಶ್ಯವಾಗಿದೆ. ವಿದೇಶೀ ನೇರ ಹೂಡಿಕೆ (ಎಫ್‌ಡಿಐ) ವಿದೇಶೀ ಸಾಂಸ್ಥಿಕ ಹೂಡಿಕೆ (ಎಫ್‌ಐಐ), ಸೂಕ್ಷ್ಮ ಹಣಕಾಸನ್ನೂ ಒಳಗೊಂಡಂತೆ ಎಲ್ಲ ರೀತಿಯ ಕಲ್ಪನಾಜನಿತ ''ಪರಿವರ್ತನಕಾರಿ ಹಣಕಾಸು ಉತ್ಪನ್ನ''ಗಳ ಕಡೆಗೂ ವಿಶೇಷ ಗಮನ ನೀಡಬೇಕಾಗಿದೆ. ಆರೋಗ್ಯ, ಶಿಕ್ಷಣ ಹಾಗೂ ಮೂಲ ಅಡಿರಚನೆ ವಿನ್ಯಾಸ ಕ್ಷೇತ್ರಗಳಲ್ಲಿ ಕನಿಷ್ಠ ಮಟ್ಟದ ತಿರುವು ಅಗತ್ಯವಾಗಿದೆ. ಆದರೆ ನಮ್ಮಲ್ಲಿ ಇದೀಗ ಇರುವ ಸರಕಾರೀ ಕಾರ್ಯಕಾರೀ ವ್ಯವಸ್ಥೆಯನ್ನು ನೋಡಿದಾಗ ಈ ಎಲ್ಲವುಗಳಿಂದಲೂ ನಾವು ಪಾಠ ಕಲಿತು ಅವಶ್ಯ ಸುಧಾರಕ ಪರಿವರ್ತನೆಗಳನ್ನು ತರಬಲ್ಲೆವೇ ಎಂಬ ಬಗೆಗೆ ಖಾತರಿ ಇಲ್ಲದಂತಾಗಿದೆ. ಖಾಸಗಿ ಹಣಕಾಸು ಸಂಸ್ಥೆಗಳು ಎಸಗಿರುವ ಎಲ್ಲ ರೀತಿಯ ದುಷ್ಕೃತ್ಯಗಳ ಬಗೆಗೆ ಇಡೀ ಜಗತ್ತೇ ಜಾಗೃತಗೊಂಡಿರುವಾಗಲೇ ಕೇಂದ್ರ ಸರಕಾರದ ಸಚಿವ ವೃಂದವು ಕಳೆದ ವಾರ ವಿಮಾ ಸಂಸ್ಥೆಗಳಲ್ಲಿನ ವಿದೇಶೀ ನೇರ ಹೂಡಿಕೆಯನ್ನು ಶೇ. ೨೬ರಿಂದ ಶೇ. ೪೯ಕ್ಕೆ ಏರಿಸಲು, ಹೊರ ದೇಶಗಳಿಂದ ವಾಣಿಜ್ಯ ಎರವಲು ತೆಗೆದುಕೊಳ್ಳುವುದನ್ನು ಹೆಚ್ಚಿಸಲು ಮತ್ತು ಷೇರು ಮಾರುಕಟ್ಟೆಯಲ್ಲಿ ವಿದೇಶೀ ಸಾಂಸ್ಥಿಕ ಹೂಡಿಕೆ (ಎಫ್‌ಐಐ) ಹಾಗೂ ಪಾರ್ಟಿಸಿಪೇಟರಿ ನೋಟುಗಳನ್ನು ಹೆಚ್ಚು ಬಳಸಲು ಶಿಫಾರಸು ಮಾಡಿದೆ!

**ಡಾ|| ಡಿ. ನರಸಿಂಹ ರೆಡ್ಡಿ**
೩-೩೩-೩೩, ಎಲ್, ವೆಂಕಟರೆಡ್ಡಿ ಕಾಲೋನಿ, ಲಿಂಗಂಪಲ್ಲಿ, ಹೈದರಾಬಾದ್ - ೫೦೦೦೧೯
ಕನ್ನಡಕ್ಕೆ : **ಕೆ. ಎಲ್. ಗೋಪಾಲಕೃಷ್ಣರಾವ್**
[illegible], ಬನಶಂಕರಿ ೨ನೇ ಹಂತ, ೩ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - ೫೬೦ ೦೨೮

ಆರ್ಯರು ದ್ರವಿಡ ಭಾಷಿಕರನ್ನು ದಕ್ಷಿಣಕ್ಕೆ ನೂಕಿದರೆಂತಲೂ (ಹಾಗೆಯೇ ದ್ರವಿಡರು ಆಸ್ಟ್ರಿಕ್ ಭಾಷಿಕರನ್ನು), ಹೀಗೆ ನಗರವಾಸಿಗಳಾದ ದ್ರವಿಡರು ದಕ್ಷಿಣಕ್ಕೆ ವಲಸೆ ಬಂದರೆಂದೂ ಒಮ್ಮೆ ವಾದಿಸಲಾಗುತ್ತಿತ್ತು. ಈಗ ಬಹುತೇಕ ಇತಿಹಾಸಕಾರರು ಈ ನಿಲುವನ್ನು ಸಮರ್ಥಿಸುವುದಿಲ್ಲ. ಹಿಂದೆ ಭಾಷೆ ಗುರುತಿಸುವಿಕೆಯ ನೆಲೆಯು ಮುಖ್ಯವಾಗಿ ಜನಾಂಗೀಯ ನೆಲೆಗಟ್ಟಿನದಾಗಿರುತ್ತಿತ್ತು. ಭಾರತೀಯ ಉಪಖಂಡದಲ್ಲಿ ಗುರುತಿಸಿದ ಮೆಡಿಟರೇನಿಯನ್, ಪೆಲಿಯೋ ಮೆಡಿಟರೇನಿಯನ್ ಜನಾಂಗಗಳನ್ನು ಪ್ರಮುಖವಾಗಿ ದ್ರವಿಡ ಭಾಷಿಕರು ಎಂದು ಹೇಳಲಾಗುತ್ತಿತ್ತು. ಕೆಲವರು (ಉದಾಹರಣೆಗೆ, ನೀಲಕಂಠ ಶಾಸ್ತ್ರಿ) ಪ್ರೋಟೋ ಆಸ್ಟ್ರಲಾಯ್ಡ್‌ರನ್ನು ದ್ರಾವಿಡ ಭಾಷಿಕರು ಎಂದು ಭಾವಿಸುತ್ತಾರೆ. ಹೀಗೆ ಗುರುತಿಸುವಲ್ಲಿ ಬಳಸುವ ಮಾನದಂಡಗಳ ಬಗೆಗೆ ಹಲವು ವಿವಾದಗಳಿದ್ದವು. ಮೂಗಿನ ಅಳತೆ, ಹಣೆ, ತಲೆಯ ಉದ್ದ ಮುಂತಾದವುಗಳನ್ನು ಬಳಸಿ ಎಷ್ಟರ ಮಟ್ಟಿಗೆ ಮಾದರಿಯನ್ನು ಗುರುತಿಸಿ ಅಳೆಯಬಹುದು ಎಂಬ ಪ್ರಶ್ನೆಯನ್ನು ಎತ್ತುತ್ತಾರೆ ಕೊಸಾಂಬಿ. ಬಹುಶಃ ವಂಶಶಾಸ್ತ್ರದ (ಜೆನಿಟಕ್ಸ್)ಹಲವು ಪದ್ಧತಿಗಳು ಇದಕ್ಕೆ ಉತ್ತರ ಕೊಡಬಲ್ಲವು ಹಾಗೂ ವಿವಾದಗಳನ್ನೂ ಹುಟ್ಟುಹಾಕಬಲ್ಲವು.

ಬಿ. ಎಂ. ಪ್ರದೀಪ್‌ಕುಮಾರ್

# ಭಾರತೀಯ ಉಪಖಂಡದಲ್ಲಿ ದ್ರವಿಡರ ವಲಸೆ ಮತ್ತು ಪ್ರಭಾವ

ಆರ್ಯರು ದ್ರವಿಡ ಭಾಷಿಕರನ್ನು ದಕ್ಷಿಣಕ್ಕೆ ನೂಕಿದರೆಂತಲೂ (ಹಾಗೆಯೇ ದ್ರವಿಡರು ಆಸ್ಟ್ರಿಕ್ ಭಾಷಿಕರನ್ನು), ಹೀಗೆ ನಗರವಾಸಿಗಳಾದ ದ್ರವಿಡರು ದಕ್ಷಿಣಕ್ಕೆ ವಲಸೆ ಬಂದರೆಂದೂ ಒಮ್ಮೆ ವಾದಿಸಲಾಗುತ್ತಿತ್ತು. ಈಗ ಬಹುತೇಕ ಇತಿಹಾಸಕಾರರು ಈ ನಿಲುವನ್ನು ಸಮರ್ಥಿಸುವುದಿಲ್ಲ. ಹಿಂದೆ ಭಾಷೆ ಗುರುತಿಸುವಿಕೆಯ ನೆಲೆಯು ಮುಖ್ಯವಾಗಿ ಜನಾಂಗೀಯ ನೆಲೆಗಟ್ಟಿನದಾಗಿರುತ್ತಿತ್ತು. ಭಾರತೀಯ ಉಪಖಂಡದಲ್ಲಿ ಗುರುತಿಸಿದ ಮೆಡಿಟರೇನಿಯನ್, ಪೆಲಿಯೋ ಮೆಡಿಟರೇನಿಯನ್ ಜನಾಂಗಗಳನ್ನು ಪ್ರಮುಖವಾಗಿ ದ್ರವಿಡ ಭಾಷಿಕರು ಎಂದು ಹೇಳಲಾಗುತ್ತಿತ್ತು. ಕೆಲವರು (ಉದಾಹರಣೆಗೆ, ನೀಲಕಂಠ ಶಾಸ್ತ್ರಿ) ಪ್ರೋಟೋ ಆಸ್ಟ್ರಲಾಯ್ಡ್‌ರನ್ನು ದ್ರಾವಿಡ ಭಾಷಿಕರು ಎಂದು ಭಾವಿಸುತ್ತಾರೆ. ಹೀಗೆ ಗುರುತಿಸುವಲ್ಲಿ ಬಳಸುವ ಮಾನದಂಡಗಳ ಬಗೆಗೆ ಹಲವು ವಿವಾದಗಳಿದ್ದವು. ಮೂಗಿನ ಅಳತೆ, ಹಣೆ, ತಲೆಯ ಉದ್ದ ಮುಂತಾದವುಗಳನ್ನು ಬಳಸಿ ಎಷ್ಟರ ಮಟ್ಟಿಗೆ ಮಾದರಿಯನ್ನು ಗುರುತಿಸಿ ಅಳೆಯಬಹುದು ಎಂಬ ಪ್ರಶ್ನೆಯನ್ನು ಎತ್ತುತ್ತಾರೆ ಕೊಸಾಂಬಿ. ಬಹುಶಃ ವಂಶಶಾಸ್ತ್ರದ (ಜೆನಿಟಕ್ಸ್)ಹಲವು ಪದ್ಧತಿಗಳು ಇದಕ್ಕೆ ಉತ್ತರ ಕೊಡಬಲ್ಲವು ಹಾಗೂ ವಿವಾದಗಳನ್ನೂ ಹುಟ್ಟುಹಾಕಬಲ್ಲವು.

ಹಲವು ಇತಿಹಾಸಕಾರರು ಪ್ರಾಚ್ಯಶಾಸ್ತ್ರ ಗುರುತಿಸಿದ ಸಾಂಸ್ಕೃತಿಕ ನೆಲೆಗಳನ್ನು (ಅಲ್ಲಿಯೂ ಕೆಲವೊಂದು ವಿಶಿಷ್ಟ ಸಾಂಸ್ಕೃತಿಕ ಸಂಪ್ರದಾಯ: ಉದಾಹರಣೆಗೆ ಕುಂಬಾರಿಕೆ) ಭಾಷೆ ಹಾಗೂ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಇಲ್ಲಿಯೂ ಭಿನ್ನಾಭಿಪ್ರಾಯಗಳು ಇಲ್ಲವೆಂದಲ್ಲ. ಅಲ್‌ಚಿನ್ ಒಂದು ಅಥವಾ ಕೆಲವು ಸಾಂಸ್ಕೃತಿಕ ಅಂಶವನ್ನು/ಗಳನ್ನು ಜನಾಂಗ/ಭಾಷೆಗಳಿಗೆ ಸಮೀಕರಿಸುವುದು ಇವೆಲ್ಲಾ ಇಂತಹ ಅಂಶಗಳಿಗೂ ಸರಿಯಾಗುವುದಿಲ್ಲ ಎಂದು ಭಾವಿಸುತ್ತಾರೆ. ಭಿನ್ನ ಜನಾಂಗ/ಸಂಸ್ಕೃತಿಗಳು ಈ ಸಾಂಸ್ಕೃತಿಕ ಅಂಶಗಳನ್ನು ಪಡೆದುಕೊಳ್ಳಲು ಸಾಧ್ಯ ಎಂಬುದು ಅವರ ವಾದ. ಕೆಲವು ವಿಶಿಷ್ಟ ಅಂಶಗಳಿಗೆ (ಉದಾಹರಣೆಗೆ,ಕುದುರೆಯ ಕಂಡುಬರುವಿಕೆ) ಸೀಮಿತವಾಗಿ ಮಾತ್ರ ಇಂತಹ ಸಮೀಕರಣ ಸಾಧ್ಯವೆಂದು ಅವರು ಭಾವಿಸುತ್ತಾರೆ. ಪ್ರಾಚ್ಯಶಾಸ್ತ್ರ ಗುರುತಿಸಿದ ನೆಲೆಗಳನ್ನು ಕುಂಬಾರಿಕೆ ಆಧಾರದ ಮೇಲೆ ಗುರುತಿಸುವ ಪ್ರಯತ್ನ ಮಾಡಲಾಗಿದ್ದು ಚಿತ್ರಿತ ಕಂದು ಕುಂಬಾರಿಕೆಯನ್ನು (painted grey ware ಅಥವಾ PGW) ನಂತರದ ವೇದ ಕಾಲದ ಸಂಸ್ಕೃತಿಗಳಿಗೆ ಸಮೀಕರಿಸುವುದು ಇಂತಹ ಪ್ರಯತ್ನಗಳಲ್ಲಿ ಒಂದು. ವಾನ್ ಫ್ಯುರೆರ್-ಹೆಮಿನ್‌ಡ್ರಾಫ್ ಅವರು ಪ್ರಾಚ್ಯಶಾಸ್ತ್ರಜ್ಞರು ಗುರುತಿಸಿದ ಬೃಹತ್ ಶಿಲಾಯುಗದ ಜನಸಮುದಾಯಗಳನ್ನು ದ್ರಾವಿಡ ಭಾಷಿಕರು ಎಂಬ ಇಂತಹ ಸಲಹೆಯ ಬಗೆಗೆ ಹೇಳುತ್ತಾ ವೀಲರ್ ಇದಕ್ಕೆ ಪ್ರತಿಸ್ಪರ್ಧಿಯೇ ಅಲ್ಲ ಎಂದು ಭಾವಿಸುತ್ತಾರೆ. ಅವರೂ ಸಹ ದ್ರಾವಿಡ ಭಾಷಿಕರು ಎಂದು ಹೇಳಬಹುದು. ಆದರೆ ಇದು ದ್ರವಿಡ ಭಾಷೆಯ ಹುಟ್ಟಿನ ಸಮಸ್ಯೆ ಪರಿಹರಿಸುವುದಿಲ್ಲ ಎನ್ನುತ್ತಾರೆ ಅವರು. ರಾಜನ್ ಗುರುಕ್ಕಲ್ ಅವರು ಕಪ್ಪು -ಕೆಂಪು ಕುಂಬಾರಿಕೆ ಅಥವಾ Black-Red-Ware (BRW) ಸಂಸ್ಕೃತಿಯ ಜನರ ಬರುವಿಕೆಯ ನಂತರವೇ ಸಂಗಂ ಸಂಸ್ಕೃತಿ ವಿಕಾಸವಾಯಿತು ಎನ್ನುತ್ತಾರೆ. ದಕ್ಷಿಣ ಭಾರತದಲ್ಲಿ ಈ ಕುಂಬಾರಿಕೆ ನವಶಿಲಾಯುಗದ ನಂತರದಲ್ಲಿ ಬೃಹತ್ ಶಿಲಾ ಸಂಸ್ಕೃತಿಯೊಂದಿಗೆ ಕಾಣಿಸಿಕೊಳ್ಳುತ್ತದೆ ಹಾಗೂ ಸುಮಾರು ಕ್ರಿಸ್ತಶಕದ ಪ್ರಾರಂಭದ ಕಾಲದಿಂದ ಬೃಹತ್‌ಶಿಲಾ ಶವಸಂಸ್ಕಾರ ಕಾಣೆಯಾಗುತ್ತದೆ. (ಕೆಲವೊಂದು ಪ್ರದೇಶಗಳಲ್ಲಿ ಕ್ರಿ. ಶ. ೫ನೆಯ ಶತಮಾನದವರೆಗೂ ಮುಂದುವರೆಯುತ್ತದೆ ಎಂದು ಹೇಳಲಾಗಿದೆ).

ಕಪ್ಪು-ಕೆಂಪು-ಕುಂಬಾರಿಕೆ ಹರಡುವಿಕೆ ಕೇವಲ ದಕ್ಷಿಣ ಭಾರತಕ್ಕೆ ಸೀಮಿತವಾಗಿಲ್ಲ, ಆದರೆ ಪುಣೆಯ ಉತ್ತರಕ್ಕೆ ಬೃಹತ್‌ಶಿಲಾ ಶವಸಂಸ್ಕಾರ ಕಾಣಬರುವುದಿಲ್ಲ. ಕಾಲಮಾನದಲ್ಲಿ ಅತಿ ಹಿಂದಿನ ಇಂತಹ ಮಣ್ಣಿನ ಪಾತ್ರೆಗಳನ್ನು ಲೋಥಾಲ್‌ನಲ್ಲಿ ಕ್ರಿ. ಪೂ.೨೫೦೦ಕ್ಕೂ ಹಿಂದೆ ಗುರುತಿಸಲಾಗಿದೆ. ಲೋಥಾಲ್‌ನಲ್ಲಿ ಈ ಪಾತ್ರೆಗಳು ಹರಪ್ಪ ಕಾಲದಲ್ಲಿಯೂ ಕಂಡುಬರುತ್ತವೆ. ಅಲ್‌ಚಿನ್‌ರು ಗುರುತಿಸುವ ಆಸಕ್ತಿದಾಯಕ ಅಂಶವೆಂದರೆ ಕ್ರಿ. ಪೂ. ೨೧೦೦ ಸುಮಾರಿಗೆ ಅಲ್ಲಿ ಹರಪ್ಪದ ಪ್ರಭಾವ ಕಾಣೆಯಾಗುತ್ತದೆ. ಈ ಪ್ರದೇಶದ ರಂಗಾಪುರ ಹಾಗೂ ಲೋಥಾಲ್‌ಗಳೆರಡಲ್ಲಿಯೂ ಪಾತ್ರೆಗಳ (ಹರಪ್ಪಾ ಪಾತ್ರೆಗಳನ್ನೂ ಸೇರಿ) ತಯಾರಿಕೆ ಮುಂದುವರೆಯುತ್ತದೆ. ಆದರೆ ಪಟ್ಟಣದ ವ್ಯವಸ್ಥೆಯ ಸ್ವರೂಪ (ಯೋಜನೆ, ಚರಂಡಿ ವ್ಯವಸ್ಥೆ) ಕಾಣೆಯಾಗುತ್ತದೆ. ಈ ಕ-ಕೆಂ-ಕುಂಬಾರಿಕೆ ಸಂಸ್ಕೃತಿ ಎರಡು ಹಾದಿಗಳನ್ನು ಕ್ರಮಿಸಿ ಉತ್ತರ ಭಾರತದಲ್ಲಿ ಹರಡಿತು ಎನ್ನುವ ಥಾಪರ್ ಇಂತಹ ವಲಸೆಯ ದಾರಿಗಳನ್ನು ಹೀಗೆ ಗುರುತಿಸುತ್ತಾರೆ. ಒಂದು ಅರವಳ್ಳಿ ಬೆಟ್ಟದ ಬಾಣ ನದಿ ಕಣಿವೆ (ಜಯ್‌ಪುರ್ ಹತ್ತಿರದ ಅಹರ್‌ನಲ್ಲಿ; ಅದರ ಕಾಲಮಾನ ಕ್ರಿ. ಪೂ. ೨೦೦೦-೧೮೦೦). ಅಲ್ಲಿಂದ ಮುಂದೆ ಗಂಗಾ ಯಮುನಾ ದೋಬ್ (ಎರಡು ನದಿಗಳ ಮಧ್ಯ ಪ್ರದೇಶ), ಕಡೆ ವಲಸೆ. ಇಲ್ಲಿಯ ಕಾಲಮಾನ ಕ್ರಿ. ಪೂ. ೧೨೦೦. ಈ ಪ್ರದೇಶದಲ್ಲಿ ಕಪ್ಪು-ಕೆಂಪು-ಕುಂಬಾರಿಕೆ ಹಾಗೂ ಚಿತ್ರಿತ ಕಂದು ಕುಂಬಾರಿಕೆಯೊಂದಿಗೆ ಬೆರೆತಿರುವುದು ಕಾಣಬರುತ್ತದೆ. ಎರಡನೆಯ ಹಾದಿ ನರ್ಮದಾ ಕಣಿವೆ, ಮಾಳವದಿಂದ ಬಿಹಾರ, ಮಧ್ಯ ಗಂಗಾ ಕಣಿವೆ ಹಾಗೂ ಕೊನೆಗೆ ಪೂರ್ವ ಗಂಗಾ ಕಣಿವೆಗೆ ವಲಸೆ. ಈ ಕುಂಬಾರಿಕೆ ಸಂಸ್ಕೃತಿಯ ಹರಡುವಿಕೆ ಇನ್ನೂ ದಕ್ಷಿಣಕ್ಕೆ ಪಶ್ಚಿಮ ಕರಾವಳಿ ಹಾಗೂ ವಿದರ್ಭದ ಮೂಲಕ ಹರಡಿತು.

ನರ್ಮದಾದ ತುಸು ಉತ್ತರಕ್ಕಿರುವ ಕ್ಯಾತದಲ್ಲಿ (ಮಾಳವ ಪ್ರದೇಶ) ಮುಂಚೆ ಇದ್ದ ಕ್ಯಾತ ಕುಂಬಾರಿಕೆಯೊಂದಿಗೆ ಕ್ರಿ. ಪೂ. ೨೧೦೦ರ ಸುಮಾರಿಗೆ ಕ-ಕೆಂ-ಕುಂಬಾರಿಕೆ ಕಾಣಿಸಿಕೊಳ್ಳುತ್ತದೆ. ನಂತರದಲ್ಲಿ ಕ್ರಿ. ಪೂ. ೧೮೦೦ರ ಸುಮಾರಿಗೆ ಇಲ್ಲಿ ಕುಂಬಾರಿಕೆ ತಂತ್ರ ವಿಕಾಸವಾಗಿ ಮಾಳವ ಕುಂಬಾರಿಕೆಯೆಂದು ಕರೆಯಲ್ಪಡುತ್ತದೆ. ಉತ್ತರದಲ್ಲಿ ಕ-ಕೆಂ-ಕು ಪತ್ತೆಯಾಗಿರುವ ಪ್ರದೇಶಗಳಲ್ಲಿ ಮಹಾರಾಷ್ಟ್ರ ಹಾಗೂ ಗುಜರಾತ ಹೊರತುಪಡಿಸಿ

ಬೇರೆ ಯಾವ ಪ್ರದೇಶಗಳನ್ನೂ ದ್ರವಿಡರೊಂದಿಗೆ ಗುರುತಿಸಿಲ್ಲ. ಮಹಾರಾಷ್ಟ್ರ ಹಾಗೂ ಗುಜರಾತ್‌ಗಳನ್ನು ಕುಮಾರಿಲ ಭಟ್ಟನಷ್ಟು ಇತ್ತೀಚಿನವರೆಗೆ (೭ನೆಯ ಶತಮಾನ) ಪಂಚದ್ರಾವಿಡಗಳಲ್ಲಿ ಸೇರಿಸಿದುದನ್ನು ರಾ. ಯ. ಧಾರವಾಡಕರ ಉಲ್ಲೇಖಿಸುತ್ತಾರೆ.

ವೀಲರ್ ಹೇಳುವಂತೆ ಕಪ್ಪು-ಕೆಂಪು ಕುಂಬಾರಿಕೆ (ಹಾಗೂ ಬೃಹತ್‌ಶಿಲಾ ಸಂಸ್ಕೃತಿಯನ್ನು) ಇನ್ನೂ ಹೆಚ್ಚು ಹಿಂದೆ (ಕಾಲಮಾನದಲ್ಲಿ ಹಾಗೂ ಭೌಗೋಳಿಕವಾಗಿ) ತೆಗೆದುಕೊಂಡುಹೋಗಲು ಸಾಧ್ಯವಾಗಿಲ್ಲ. ಕ-ಕೆಂ-ಕುಂಬಾರಿಕೆಯನ್ನು ಕ್ರಿ. ಪೂ. ೪೦೦೦ದಷ್ಟು ಹಿಂದೆ ಈಜಿಪ್ಟಿನಲ್ಲಿ ಗುರುತಿಸಲಾಗಿದೆಯಾದರೂ ಕಾಲಮಾನದಲ್ಲಿ ಅದು ಅತಿ ಹಿಂದೆ ಹಾಗೂ ತಾಂತ್ರಿಕವಾಗಿ ಅವನ್ನು ಹಾಗೂ ಪಶ್ಚಿಮ ಕರಾವಳಿಯ ಕ-ಕೆಂ-ಕು ಒಂದೇ ಎಂದು ತೋರಿಸಲಾಗಿಲ್ಲ. ಪ್ಯಾಲೆಸ್ಟೈನ್ ಹಾಗೂ ಉತ್ತರದ ಸಿರಿಯಾದಲ್ಲಿ ಕ-ಕೆಂ-ಕು ಕಂಡುಬರುತ್ತವೆಯಾದರೂ ಇವುಗಳು ಇಂಡೋ-ಆರ್ಯ ಭಾಷೆಗಳೊಂದಿಗೆ ಗುರುತಿಸಲು ಪ್ರಯತ್ನಿಸಿದ್ದು ಇದೂ ಸಮಸ್ಯೆಗಳಿಂದ ಹೊರತಾಗಿಲ್ಲ. ಇದು ಯೂಫರೇಟಸ್‌ನ ಪೂರ್ವಕ್ಕೆ ಕೊನೆಗೊಳ್ಳುತ್ತದೆ. ಸದ್ಯಕ್ಕೆ ಈ ಕುಂಬಾರಿಕೆಯನ್ನು ಭಾರತೀಯ ಉಪಖಂಡದಾಚೆ ಗುರುತಿಸುವ ಪ್ರಯತ್ನ ಸಫಲವಾಗಿಲ್ಲ. ಬಲೂಚಿಸ್ತಾನದ ಬ್ರಹೂಇ ಹೀಗೆ ಗುರುತಿಸುವ ಸಾಧ್ಯತೆಯ ಆಶಯ ಉಳಿಸಿಕೊಳ್ಳುವಂತೆ ಮಾಡಿದೆ.

**ಉತ್ತರ ಭಾರತದ ವಲಸೆ**

ಕಪ್ಪು-ಕೆಂಪು ಕುಂಬಾರಿಕೆ ಉತ್ತರ ಭಾರತದಲ್ಲಿ ದೊಡ್ಡದಾಗಿ ಹರಡಿರುವ ಹಿನ್ನೆಲೆಯಲ್ಲಿ (ಚಿತ್ರ ನೋಡಿ) ಆಸಕ್ತಿದಾಯಕ ಪ್ರಮೇಯವೊಂದನ್ನು ಥಾಪರ್ ಮಂಡಿಸುತ್ತಾರೆ. (ಅವರು ಅದನ್ನು ಒಂದು ಊಹಾ ಪ್ರಮೇಯವೆಂದೇ ಕರೆಯುತ್ತಾರೆ.) ಭಾರತೀಯ ಉಪಖಂಡದ ಪ್ರಮುಖ ವಿದ್ಯಮಾನವಾದ ಸಿಂಧೂ ನಾಗರಿಕತೆಯ ಉತ್ತರಾಧಿಕಾರಿಯಾಗಿ ನೆಲೆನಿಂತ ಜನಾಂಗಗಳನ್ನು ಕುಂಬಾರಿಕೆ ಸಂಸ್ಕೃತಿ ಎಂದು ಗುರುತಿಸುವುದಾದರೆ ಕಾವಿ-ಬಣ್ಣದ-ಕುಂಬಾರಿಕೆ ochre coloured pottery ಅಥವಾ OCR) ಚಿತ್ರಿತ ಕಂದು ಕುಂಬಾರಿಕೆ (PGW) ಹಾಗೂ ಕಪ್ಪು-ಕೆಂಪು-ಕುಂಬಾರಿಕೆ (BRW) ಪ್ರಮುಖ ಎನ್ನುತ್ತಾರೆ ಅವರು. ಅವರ ಮೂಲ ಕಾಳಜಿ ಭಾಷಿಕ ಜನಸಮುದಾಯಗಳನ್ನು ಗುರುತಿಸುವುದಲ್ಲ. ಮೂಲತಃ ಯಾವುದನ್ನು ಪುರಾಣೇತಿಹಾಸದಲ್ಲಿ ಸಾಂಪ್ರದಾಯಿಕ ಇತಿಹಾಸ ಎಂದು ಗುರುತಿಸಲಾಗುತ್ತದೆಯೋ ಅವುಗಳಲ್ಲಿ ಹೇಳುವ ವಂಶಾವಳಿಗಳಾದ ಸೂರ್ಯವಂಶ ಹಾಗೂ ಚಂದ್ರವಂಶಗಳನ್ನು ಪ್ರಾಚ್ಯಶಾಸ್ತ್ರ ಗುರುತಿಸಿದ ಸಂಸ್ಕೃತಿಗಳನ್ನು ಕುಂಬಾರಿಕೆ ಆಧಾರದಲ್ಲಿ ಗುರುತಿಸಲು ಪ್ರಯತ್ನಿಸುವುದು ಅವರ ಉದ್ದೇಶಗಳಲ್ಲಿ ಪ್ರಮುಖವಾದುದು.

ಈ ಬಗೆಯ ಮಾಹಿತಿಯನ್ನು ನೇರವಾಗಿ ಪಡೆಯಬಹುದು ಎಂದೇನು ಥಾಪರ್ ಭಾವಿಸುವುದಿಲ್ಲ. ಮುಖ್ಯವಾಗಿ ಪುರಾಣ ಸಂಪ್ರದಾಯಗಳು ಇಂದು ಪುರಾಣಗಳಲ್ಲಿ ಲಭ್ಯವಿರುವಂತೆ (ಅವುಗಳ ವಿಮರ್ಶಾತ್ಮಕ ಸಂಪುಟಗಳಲ್ಲಿಯೂ) ಕ್ರಿ. ಶ. ೨-೩ನೆಯ ಶತಮಾನಕ್ಕೂ ಹಿಂದೆ ಹೋಗುವುದಿಲ್ಲ ಅಥವಾ ವಾಸ್ತವದ ಘಟನಾವಳಿಗಳಿಗಿಂತ ಅನೇಕ ಶತಮಾನಗಳ ನಂತರ ಇವುಗಳನ್ನು ಸಂಪಾದಿಸಲಾಗಿದೆ ಅಥವಾ ಮರು ರಚಿಸಲಾಗಿದೆ. ಅಲ್ಲದೆ ಪ್ರಾರಂಭದಲ್ಲಿ ಸೂತರ ಕೈಯಲ್ಲಿದ್ದ ಈ ವಂಶಾವಳಿಗಳ ರಚನೆ ಈ ಕಾಲಕ್ಕಾಗಲೇ ಬ್ರಾಹ್ಮಣರಿಗೆ ಬದಲಾದುದನ್ನು ಸಹ ಗುರುತಿಸಲಾಗಿದೆ. ಇಲ್ಲಿಯೂ ರಾಮಾಯಣ ಸೂರ್ಯವಂಶದ ವಂಶಾವಳಿಗಳನ್ನು ಉಲ್ಲೇಖಿಸುತ್ತದೆ ಹಾಗೂ ಮಹಾಭಾರತದ ಒತ್ತು ಚಂದ್ರವಂಶದ ಬಗೆಗೆ (ಈ ಬಗೆಗಿನ ಸಮಸ್ಯೆಗಳನ್ನು ಅವರು ತಮ್ಮ ಎರಡು ಲೇಖನಗಳಲ್ಲಿ ಚರ್ಚಿಸುತ್ತಾರೆ).

ಚಂದ್ರವಂಶವನ್ನು ಕ-ಕೆಂ-ಕುಂಬಾರಿಕೆಯೊಂದಿಗೆ ಗುರುತಿಸುವಲ್ಲಿ (ಸೂರ್ಯವಂಶವನ್ನು ಗುರುತಿಸುವಲ್ಲಿ ಇರುವಂತೆ ಎರಡು ಕುಂಬಾರಿಕೆ ಸಂಸ್ಕೃತಿಗಳ ವಾಸಸ್ಥಳದ ಸಾಧ್ಯತೆ) ದೊಡ್ಡ ಸಮಸ್ಯೆ ಕಾಣಬರುವುದಿಲ್ಲ ಎನ್ನುತ್ತಾರೆ ಥಾಪರ್. ಆದಾಗ್ಯೂ ಒಂದು ಮೂಲ ಸಾಂಪ್ರದಾಯಿಕ ನಿಲುವನ್ನು ತಿರುವುಮುರುವು ಮಾಡಬೇಕಾಗುತ್ತದೆ. ಸಾಂಪ್ರದಾಯಿಕ ಇತಿಹಾಸದ ಪ್ರಕಾರ ಯಾದವರು ಮಥುರಾದಿಂದ ದ್ವಾರಕೆಗೆ ವಲಸೆ ಹೋದರು. ಇದನ್ನು ದ್ವಾರಕಾದಿಂದ ಮಥುರಕ್ಕೆ ವಲಸೆ ಎಂದು ಭಾವಿಸಿದಲ್ಲಿ ಮಾತ್ರ ಈ ವಲಸೆಯನ್ನು ಪ್ರಾಚ್ಯಶಾಸ್ತ್ರದ ನೆಲೆಗಳಲ್ಲಿ ಹೆಚ್ಚು ಸಂಗತವಾಗಿ ಗುರುತಿಸಲು ಸಾಧ್ಯ. ಜೊತೆಗೆ ಯಾದವರ ಮೂಲ ಭಾಷೆ ಸಂಸ್ಕೃತವಲ್ಲ ಎನ್ನುತ್ತಾ ಬೌದ್ಧಗ್ರಂಥವೊಂದು ಈ ಭಾಗವನ್ನು ಪಂಚದ್ರಾವಿಡದ ಭಾಗವಾಗಿ ಗುರುತಿಸುವುದರೆಡೆ ಹಾಗೂ ಚಂದ್ರವಂಶದ ಬಗೆಗಿನ ಮಾಹಿತಿಯಲ್ಲಿ ಸೋದರ ಮದುವೆಯ ಸಂಬಂಧಗಳ ಗಮನ ಸೆಳೆಯುತ್ತಾರೆ. ಸ್ಟೆನ್ ಕೋನೋ ಅವರನ್ನು ಉಲ್ಲೇಖಿಸುವ ರಾ. ಯ. ಧಾರವಾಡಕರರು ಸಹ ಇಂದು ಮರಾಠಿ ಹಾಗೂ ಗುಜರಾತಿಗಳಾಡುವ ಜನರ ಮೂಲ ಭಾಷೆ ದ್ರವಿಡವಾಗಿರಬೇಕು ಎನ್ನುತ್ತಾರೆ.

ವೇದಗಳ ಹಾಗೂ ಅದರಿಂದ ಬೆಳೆದ ವ್ಯವಸ್ಥಿತ ಯಜ್ಞಗಳು ಹಾಗೂ ಶ್ರೌತ ಸೂತ್ರ, ಗೃಹ್ಯಸೂತ್ರಗಳು ಕೊಡುವ ಜೀವನಶೈಲಿ ಕ್ರಿ. ಪೂ. ೫ನೆಯ ಶತಮಾನಕ್ಕೂ ಮುಂಚೆ ಇತ್ತೆಂದೂ ಹೇಳಲಾಗಿದೆ. (ಬಹಳ ಮಟ್ಟಿಗೆ ಚಿತ್ರಿತ ಕಂದು ಬಣ್ಣದ ಪಾತ್ರೆಗಳು ಪ್ರಾಚ್ಯಶಾಸ್ತ್ರ ಗುರುತಿಸಿದ ನೆಲೆಗಳಲ್ಲಿ) ಅದು ಬೌದ್ಧ, ಜೈನ ಪರಂಪರೆಗಳಿಂದ ಪ್ರಶ್ನಿಸಲ್ಪಟ್ಟಿತು, ಅಲ್ಲದೆ ಇನ್ನೊಂದು, ಮುಂದೆ ಪೌರಾಣಿಕ ಧರ್ಮಗಳಲ್ಲೊಂದು ಎಂದು ಕರೆಯಿಸಿಕೊಳ್ಳಲ್ಪಟ್ಟ, ಧಾರ್ಮಿಕ ಕವಲೊಂದು ಅಸ್ತಿತ್ವದಲ್ಲಿ ಇತ್ತು. ಪಶ್ಚಿಮ ಭಾರತ ಹಾಗೂ ಉತ್ತರದ ಡೆಕ್ಕನ್‌ನಲ್ಲಿನ ಶಾಸನ ಆಧಾರಗಳು (ಕ್ರಿ. ಶ. ಪ್ರಾರಂಭದಲ್ಲಿ) ವಸುದೇವ ಆರಾಧಕರ ಬಗೆಗೆ ತಿಳಿಸುತ್ತವೆ. ಕ್ರಿ.ಪೂ. ೫ನೇ ಶತಮಾನದ ಪಾಣಿನಿಯಲ್ಲಿ ಸಹ ವಸುದೇವಕ ಪದವನ್ನು 'ಭಕ್ತಿಯ ವಸ್ತುವಾಗಿಸಿದ' (ಇದನ್ನು ಆಧುನಿಕ ಅರ್ಥದಲ್ಲಿ ಭಕ್ತಿ ಇರಲಿಕ್ಕಿಲ್ಲವೆಂದು ಭಾವಿಸಲಾಗಿದೆ) ಎಂದು ಉಲ್ಲೇಖಿಸಲಾಗಿದೆ. ಮಥುರಾ ಪ್ರಾಂತದ ಯಾದವ - ಸಾತ್ವತ -ವೃಷ್ಣಿ ಜನರೊಂದಿಗೆ ಹುಟ್ಟಿದ ಈ ಭಾಗವತ ಧರ್ಮವು ಅಸಂಖ್ಯಾತ ಯಾದವ ಕುಲದ ವಲಸೆಯಿಂದಾಗಿ ಪಶ್ಚಿಮ ಭಾರತಕ್ಕೆ ಹಾಗೂ ಉತ್ತರ ಡೆಕ್ಕನ್‌ಗೆ ಪಸರಿಸಿತು ಎಂದು ಕೆಲವು ಇತಿಹಾಸಕಾರರು ಭಾವಿಸುತ್ತಾರೆ. ಯಾವುದನ್ನು ಥಾಪರ್ ಚಂದ್ರವಂಶದ ಅಥವಾ ಉತ್ತರದ ಕ-ಕೆಂ-ಕು ಪ್ರದೇಶದವೆಂದು ಗುರುತಿಸುತ್ತಾರೆಯೋ ಅದಕ್ಕೆ ಈ ಭಾಗವತ ಧರ್ಮಗಳ ಪ್ರದೇಶವು ಬಹುತೇಕ ಹೊಂದಿಕೆಯಾಗುತ್ತದೆ (ಥಾಪರ್ ಗುರುತಿಸಿದ ಎರಡನೆಯ ವಲಸೆಯ ಹಾದಿ.) ವಾರ್ಷ್ಣೇಯ ಗುರುವನ್ನು ತೈತ್ತಿರೀಯ ಸಂಹಿತೆ ಹಾಗೂ ಜೈಮಿನಿಯ ಉಪನಿಷತ್‌ನಲ್ಲಿ ಹೆಸರಿಸಲಾಗಿದೆ. ಯದುಗಳ ಉಲ್ಲೇಖ ಋಗ್ವೇದದಲ್ಲಿಯೂ ಕಾಣಬಹುದು. (ಇದನ್ನು ಥಾಪರ್ ಗುರುತಿಸಿದ ಮೊದಲ ವಲಸೆಯ ಹಾದಿಯಿಂದ ವಿವರಿಸಬಹುದೇ?) ಬ್ರಾಹ್ಮಣಗಳಲ್ಲಿ ಮಹಾಭಾರತದ ಯುದ್ಧದ ಬಗೆಗಿನ ಮೌನವನ್ನು ಅದರ




ಉತ್ತರ ಹಾಗೂ ಮಧ್ಯ ಭಾರತದಲ್ಲಿ ಕಪ್ಪು-ಕೆಂಪು ಕುಂಬಾರಿಕೆ ಹರಡುವಿಕೆ

ಐತಿಹಾಸಿಕತೆಯನ್ನು ನಿರಾಕರಣೆಯನ್ನಾಗಿ ಸ್ವೀಕರಿಸಬಾರದೆಂದು ವಾದಿಸಲಾಗಿದೆ. ಈ ಎರಡು ಸಂಪ್ರದಾಯಗಳ ಮಧ್ಯದ ಪ್ರಾರಂಭಿಕ ಕಂದರವನ್ನು ಇದು ಸೂಚಿಸುತ್ತಿರಬಹುದು. ಈ ಧರ್ಮಗಳ (ಪಾಂಚರಾತ್ರ, ಸಾತ್ವತ, ಭಾಗವತ, ಶೈವ ಹಾಗೂ ನಂತರದಲ್ಲಿ ಶಾಕ್ತ) ಬಗೆಗಿನ ವಿರೋಧ ಹೇಳಿಕೆಗಳು ಹಲವು ವೈದಿಕ ಸಂಹಿತೆಗಳಲ್ಲಿಯೂ ಹಾಗೂ ಹಲವು ಪುರಾಣಗಳಲ್ಲಿಯೂ (ಅವುಗಳನ್ನು ಈ ಪೌರಾಣಿಕ ಧರ್ಮಗಳ ಪರವಾಗಿ ಮರುರಚಿಸಿದಾಗಲೂ) ಉಳಿದುಕೊಂಡುಬಂದಿದೆ. ಇಂತಹ ವಿರೋಧದ ಮುಖ್ಯ ಅಂಶಗಳಲ್ಲೊಂದು ಅವರು (ಭಾಗವತರು) ಶೂದ್ರರನ್ನೂ ಹೆಂಗಸರನ್ನೂ ತಮ್ಮ ಪಂಥಗಳಲ್ಲಿ ಸೇರಿಸಿಕೊಳ್ಳುತ್ತಾರೆ ಎನ್ನುವುದು. ಈ ಭಾಗವತ ಧರ್ಮವು ಹಲವು ಭಿನ್ನಧಾರೆಗಳನ್ನು ಹಿಂಗಿಸಿಕೊಳ್ಳುತ್ತದೆ. ನಾರಾಯಣ (ಪಾಂಚರಾತ್ರ), ವಿಷ್ಣು (ಋಗ್ವೇದದ ಅಪ್ರಮುಖ ದೇವತೆ) ಹೀಗೆ ಹಲವು ಸಮೀಕರಣಗಳು ಇದರ ಭಾಗ. ಪರಿಣಾಮವಾಗಿ ಕ್ರಿ. ಶ. ೩ನೆಯ ಶತಮಾನದ ನಂತರವೇ ಅದು ಪೌರಾಣಿಕ ವೈಷ್ಣವ ಧರ್ಮವಾಗಿ ಅವತರಿಸುತ್ತದೆ.

ಉತ್ತರ ಹಾಗೂ ಮಧ್ಯ ದೇಶಗಳಲ್ಲಿ ಹುಟ್ಟಿದ ಈ ಧರ್ಮಗಳೇ (ಶೈವ ಹಾಗೂ ವೈಷ್ಣವ) ವೇದ ಹಾಗೂ ಯಜ್ಞಗಳನ್ನು ತಿರಸ್ಕರಿಸಿದ ಬೌದ್ಧ, ಜೈನಧರ್ಮಗಳೊಂದಿಗೆ ಮುಂದೆ ಸ್ಪರ್ಧಿಸುವುದು. ಇವುಗಳಲ್ಲಿಯೂ ವೇದ ತಿರಸ್ಕರಣೆ ನೇರವಾಗಿದೆ (ಪಾಂಚರಾತ್ರಾಗಮ, ಆದರೆ ಇದರ ಪ್ರಾಚೀನತೆಯನ್ನು ಸುರಾಜ್ ಜೈಸ್‌ವಾಲ್ ಪ್ರಶ್ನಿಸುತ್ತಾರೆ), ಕೆಲವೊಮ್ಮೆ ಯಜ್ಞಗಳನ್ನು ಸಾಂಕೇತೀಕರಿಸಿ (ಭಗವದ್ಗೀತೆ) ಹಿಮ್ಮೆಟ್ಟಿಸುತ್ತವೆ. ಇವುಗಳು ನಂತರದಲ್ಲಿ ವರ್ಣಾಶ್ರಮಕ್ಕೆ ಕೊಟ್ಟ ಮಹತ್ವ ಗಣ್ಯ ಸಮಾಜದ ಗುಂಪುಗಳಿಗೆ ಧಾರ್ಮಿಕ ಸ್ಥಾನಮಾನ ಒದಗಿಸುವುದರಲ್ಲಿಯೇ ಆಸಕ್ತಿಯಿದ್ದಂತೆ ಭಾಸವಾಗುತ್ತದೆ. ಯಾವುದನ್ನು ಧರ್ಮದಲ್ಲಿ ಹಿಂಗಿಸಿಕೊಳ್ಳುವ ಪ್ರಕ್ರಿಯೆ ಎಂದು ಕರೆಯಲಾಗುತ್ತದೆಯೋ ಅದನ್ನು ಒಂದು ಹಂತದಲ್ಲಿ ಭಿನ್ನ ಸಾಮಾಜಿಕ, ಧಾರ್ಮಿಕ ಸಂಸ್ಕೃತಿಯ ಜನ ಸಮುದಾಯಗಳ ಪುರೋಹಿತರನ್ನು ಹಾಗೂ ಕ್ಷಾತ್ರ ವರ್ಗವನ್ನು ಮುಖ್ಯವಾಹಿನಿ (ಅಂದರೆ ಧರ್ಮ ಸಮ್ಮತ ರಾಜನನ್ನಾಗಿಸುವ ಪ್ರಕ್ರಿಯೆ) ಸೇರುವ ಪ್ರಕ್ರಿಯೆಯಾಗಿ ನೋಡಬೇಕಾದ ಅಗತ್ಯವಿದೆ ಎಂದು ಸೂಚಿಸಲಾಗಿದೆ. ಇಲ್ಲಿ ಹಿರಣ್ಯಗರ್ಭ ಹಾಗೂ ಅಶ್ವಮೇಧಗಳು ಪ್ರಮುಖವಾಗಬಹುದು. ಆದರೆ ಗೃಹ್ಯಸೂತ್ರಗಳ ಜೀವನಶೈಲಿ ಸಾಮಾನ್ಯರಿಗೇನು ಹಬ್ಬುವುದಿಲ್ಲ. ಬ್ರಾಹ್ಮಣರೆಂದು ಹೇಳಿಕೊಳ್ಳುವ ಸಾತವಾಹನರಿಗೆ ವ್ರಾತ ಕ್ಷತ್ರಿಯರೆಂದು ಕರೆಯಲ್ಪಟ್ಟ ಶಕರೊಂದಿಗೆ ಮದುವೆ ಸಂಬಂಧ ಅಮಾನ್ಯವಲ್ಲ. ಹಾಗೆಯೇ ಅವರು ಯಜ್ಞಯಾಗಾದಿಗಳನ್ನು ಮಾಡುತ್ತಿದ್ದು 'ಏಕ-ಬಂಹಣ' ಎಂದು ಕರೆದುಕೊಂಡಿರುವವರನ್ನು ವಸುದೇವ 'ಪೂಜಿಸುವವರು' ಎಂದು ದಾಖಲಿಸಲಾಗಿದೆ. ದ್ವಾತ್ರಿಂಶತ್‌ಪುತ್ತಲಿಕಾದಂತೆ ಅವರು ಬ್ರಾಹ್ಮಣ ಮತ್ತು ನಾಗಕುಲದ ಮಿಶ್ರಸಂತತಿ. ಬ್ರಾಹ್ಮಣ ಹಾಗೂ ಕ್ಷತ್ರಿಯ ವಂಶಗಳ ಹುಟ್ಟಿನ ಸಂದಿಗ್ಧತೆಯನ್ನು ಶುಂಗರ ವಂಶದ ಬಗೆಗೆ ಕೋಸಾಂಬಿ ಚರ್ಚಿಸುತ್ತಾರೆ. ಹೀಗಲ್ಲದೆ ಇದನ್ನು ವಿವರಿಸಲು ಸಾಧ್ಯವಾಗುವುದಿಲ್ಲ. ಕದಂಬರೂ ಈ ವರ್ಮ ಅಥವಾ




ಶರ್ಮ ಚರ್ಚೆಯಿಂದ ಬಿಡುಗಡೆ ಪಡೆದಿಲ್ಲ. ಎಲ್ಲಕ್ಕಿಂತಲೂ ಹೆಚ್ಚಾಗಿ ಪುರಾಣ ಸಂಪ್ರದಾಯಗಳ ಪ್ರಕಾರ ಚಂದ್ರವಂಶ ಕ್ಷತ್ರಿಯವಂಶ.

ಕ್ರಿ. ಶ. ೩-೪ನೆಯ ಶತಮಾನದ ನಂತರ ಹೊಸದೊಂದು ವಿದ್ಯಮಾನ ಥಾಪರ್ ಗುರುತಿಸುತ್ತಾರೆ. ಅಲ್ಲಿಂದ ಮುಂದೆ ರಾಜವಂಶಗಳ ವಂಶಾವಳಿಗಳ ರಚನೆ ಹೆಚ್ಚು ಕಡಿಮೆ ಕಾಯಂ ಸ್ಥಾನ ಪಡೆಯುತ್ತದೆ. ವಂಶಾವಳಿಗಳ ಮೂಲಕ ರಾಜನಿಗೆ ನ್ಯಾಯಬದ್ಧತೆ ಒದಗಿಸುವ ಬ್ರಾಹ್ಮಣರಿಗೂ ಮಹತ್ವ ಹೆಚ್ಚುತ್ತದೆ. ಎಷ್ಟು ವೇಗವಾಗಿ ಇಂತಹ ರಾಜರುಗಳ ಧಾರ್ಮಿಕ ಸ್ಥಾನಮಾನ ಮೇಲೇರುತ್ತದೆಯೋ ಅಷ್ಟೇ ವೇಗವಾಗಿ ಅವರ ಕೀಳು ಮೂಲಗಳು ಎಂದು ಭಾವಿಸಿದ ಮಾಹಿತಿಗಳನ್ನು ತಿರುಚಬೇಕಾದ ಅಥವಾ ಹೊರಹಾಕಬೇಕಾದ ಅಗತ್ಯ ಉಂಟಾಗುತ್ತದೆ. ಹಲವು ಸಲ (ಕನಿಷ್ಕ, ಸಿದ್ಧಾಂತದಲ್ಲಿಯಾದರೂ) ವರ್ಣಾಶ್ರಮವನ್ನು ಎತ್ತಿ ಹಿಡಿಯುವ ಬಗೆಗೆ, ಧರ್ಮದ ಪುನಃ ಸ್ಥಾಪನೆಯ ಬಗೆಗೆ ಘೋಷಿಸಲಾಗುತ್ತದೆ. ಇದಕ್ಕೆ ಭಿನ್ನವಾಗಿ ವಾಸ್ತವದಲ್ಲಿ ಎಲ್ಲಾ ನಾಲ್ಕು ವರ್ಣದವರೂ ರಾಜ್ಯಭಾರ ಮಾಡುತ್ತಿದ್ದರು ಎಂದು ಹುಯೆನ್‌ತ್ಸಾಂಗ್ (ಕ್ರಿ. ಶ. ೭) ಹೇಳುತ್ತಾನೆ. ಯಾರು ಅಧಿಕಾರಕ್ಕೆ ಬಂದು ರಾಜರಾದರೂ ಅವರಿಗೆ ಮಾನ್ಯತೆ ನೀಡಲಾಗುತ್ತದೆ ಎಂದು ಮೇಧಾತಿಥಿ (ಕ್ರಿ. ಶ. ೯) ತನ್ನ ಮನು ಧರ್ಮಶಾಸ್ತ್ರದ ಮೇಲಿನ ವ್ಯಾಖ್ಯಾನದಲ್ಲಿ ಹೇಳುತ್ತಾನೆ. ಕ್ರಿಸ್ತ ಶಕದ ಪ್ರಾರಂಭಕ್ಕೆ ಶಕರು ತಮ್ಮನ್ನು ಕ್ಷತ್ರಿಯರು ಎಂದು ಕರೆದುಕೊಂಡುದಲ್ಲದೆ ಸಂಸ್ಕೃತವನ್ನು ಬಳಸಲು ಪ್ರಾರಂಭಿಸುತ್ತಾರೆ. ಕ್ರಿ. ಶ. ೩-೪ನೆಯ ಶತಮಾನಕ್ಕೆ ಇದು ಧಾರ್ಮಿಕ ಮನ್ನಣೆಯ ಭಾಗವಾಗುತ್ತದೆ (ಇಲ್ಲಿಂದ ಮುಂದೆಯೇ ನಮಗೆ ಸಂಸ್ಕೃತದ ಶಾಸನಗಳು ಹೆಚ್ಚಾಗತೊಡಗುವುದು). ಇದು ಕೇವಲ ಧಾರ್ಮಿಕ ಬದಲಾವಣೆ ಎಂದು ಊಹಿಸುವುದು ತಪ್ಪಾಗಬಹುದು. ವಾಸ್ತವದಲ್ಲಿ ಬುಡಕಟ್ಟುಗಳು ವ್ಯವಸಾಯ ಪ್ರಧಾನ ಸಮಾಜಗಳಾಗಿ ಬದಲಾಗುವ ರೂಪರೇಖೆಗಳೂ ಇಂತಹ ಬದಲಾವಣೆಗಳೊಂದಿಗೆ ಬಂದಿರಬೇಕು. ಇಂತಹ ಹೊಸ ಸಮಾಜದ ಬದಲಾವಣೆಯ ಭಾಗವಾಗಿಯೇ ಧರ್ಮಗಳಲ್ಲಿನ ಬದಲಾವಣೆಗಳೂ ಬಂದಿರಬೇಕು.

ಇಂತಹುದೇ ವ್ಯವಸ್ಥೆ ದಕ್ಷಿಣಕ್ಕೂ ಬರುತ್ತದೆ. ಹಲವೊಮ್ಮೆ ಇತಿಹಾಸಕಾರರು ಇದನ್ನು ಉತ್ತರದ ಪ್ರಭಾವವೆಂದು (ಬಹುತೇಕವಾಗಿ ಧಾರ್ಮಿಕ) ಗುರುತಿಸುತ್ತಾರೆ. ಸ್ಥೂಲಾರ್ಥದಲ್ಲಿ ಮಾತ್ರ ಇದು ಸರಿಯಾಗಬಹುದು. ಏಕೆಂದರೆ ಉತ್ತರದ ಈ ದ್ರಾವಿಡ ಭಾಷಿಕರಾಗಲೇ ಆರ್ಯ ಭಾಷೆಗಳನ್ನು ತಮ್ಮದಾಗಿಸಿಕೊಂಡಿದ್ದರು ಅಥವಾ ಆರ್ಯರೊಂದಿಗೆ ಉತ್ತರ ಹಾಗೂ ಮಧ್ಯ ಭಾರತದಲ್ಲಿ ಆಗಲೆ ಬೆರೆತುಹೋಗಿದ್ದರು. ಅವರ ಸಂಸ್ಕೃತಿಯ ಹಲವು ಅಂಶಗಳು ಆಗಲೆ ಈ ಉತ್ತರದ 'ಆರ್ಯ' ಸಂಸ್ಕೃತಿಯ ಭಾಗವಾಗಿದ್ದವು.

**ದಕ್ಷಿಣ ಭಾರತದ ವಲಸೆ**

ದಕ್ಷಿಣ ಭಾರತದ ದ್ರವಿಡ ಭಾಷಿಕರ ವಲಸೆಯ ಬಗೆಗೆ ಭಿನ್ನಾಭಿಪ್ರಾಯವಿರುವುದು ಯಾವ ಸಾಂಸ್ಕೃತಿಕ ಜನಸಮುದಾಯ ಈ ಭಾಷೆ ತಂದಿತು ಎನ್ನುವುದರ ಬಗೆಗೆ. ಹೀಗೆ ಗುರುತಿಸುವಲ್ಲಿ ಇರುವ ಕೆಲವು ವೈರುಧ್ಯಗಳೆಡೆ ಗಮನ ಸೆಳೆಯಲಾಗಿದೆ. ದ್ರವಿಡ ಭಾಷಿಕರ ದಕ್ಷಿಣವು ಕ್ರಿಸ್ತಪೂರ್ವದ ಮುಂಚೆ 'ಆರ್ಯೀಕರಣ' ಪ್ರಕ್ರಿಯೆಗೆ ಒಳಪಟ್ಟಿತ್ತು ಎಂಬುದನ್ನು ಗಣನೆಗೆ ತೆಗೆದುಕೊಂಡು, ತಮಿಳು ಸಂಗಂ ಸಂಸ್ಕೃತಿಯ ಪ್ರಾರಂಭಕ್ಕೂ ಮುಂಚೆ ಈ ಪ್ರಭಾವ ಕಂಡುಬರುತ್ತದೆ ಎನ್ನುತ್ತಾರೆ ಅಲ್‌ಚಿನ್. ಬೃಹತ್‌ಶಿಲಾಯುಗದ ಶವಸಂಸ್ಕಾರ ಪದ್ಧತಿಯನ್ನು ಪ್ರಾರಂಭಿಕ ಆರ್ಯ ಭಾಷಿಕ 'ಕುರ್‌ಗನ್' ಶವಸಂಸ್ಕಾರ ಸಂಕೀರ್ಣಕ್ಕೆ ಅವರು ಹೋಲಿಸುತ್ತಾರೆ. ಅವರ ಪ್ರಕಾರ ಬೃಹತ್ ಶಿಲಾಯುಗದ ಸಂಸ್ಕೃತಿಯ ಭಾಷೆ ಆರ್ಯ. ದಕ್ಷಿಣ ಭಾರತದ ನವಶಿಲಾಯುಗದ ಜನರ ಭಾಷೆ ದ್ರವಿಡ ಎಂಬುದು ಇದೇ ತರ್ಕದ ಆಧಾರದ ಮೇಲಿನ ಅವರ ನಿಲುವು. ಜಾನ್ ಮಾರ್ ಬೃಹತ್ ಶಿಲಾಯುಗದ ದ್ರವಿಡ ಭಾಷಿಕರಾಗಿರುವ ಸಾಧ್ಯತೆ ಇದೆಯಾದರೂ ಅದು ಕ್ರಿ. ಪೂ. ೨೦೦ಕ್ಕೂ ಹಿಂದೆ ಹೋಗುವುದಿಲ್ಲ ಎಂದು ಭಾವಿಸುತ್ತಾರೆ.

ಈಗಿನ ದ್ರವಿಡ ಭಾಷೆಗಳ ಇರುವಿಕೆ (ಅಥವಾ ಇಂದಿನ ವಾಸ್ತವ) ಹಿನ್ನೆಲೆಯಲ್ಲಿ ಹೇಳುವುದಾದರೆ ನವ ಶಿಲಾಯುಗ, ತಾಮ್ರಶಿಲಾಯುಗದ ಜನಸಮುದಾಯಗಳ ಕೆಲವು ಸಂಸ್ಕೃತಿಗಳ ಭಾಷೆ ದ್ರವಿಡ ಆಗಿರಲು ಸಾಧ್ಯ. ದಕ್ಷಿಣದಲ್ಲಿ ಆಸ್ಟ್ರೋಲಾಯ್ಡ್ ಭಾಷೆಗಳ (ಮುಂಡಾ ಗುಂಪಿನ ಭಾಷೆಗಳು) ಇರುವಿಕೆಯನ್ನು (ಹಾಗೂ ಅದರ ಪ್ರಭಾವವನ್ನು) ವಿವರಿಸಲು ಪೂರ್ವೇತಿಹಾಸದ ಸಂಸ್ಕೃತಿಗಳ ಕನಿಷ್ಠ ಒಂದು ಜನಸಮುದಾಯದ ಭಾಷೆಯಾದರೂ ಮುಂಡಾ ಮೂಲದ್ದಾಗಿರಬೇಕಾಗುತ್ತದೆ. ಹೀಗೆ ತರ್ಕಿಸಲು ನಮಗಿರುವ ಮುಖ್ಯ ಆಧಾರ ಭಾಷಿಕ.

ದ್ರವಿಡ ಭಾಷಿಕರನ್ನು ಪ್ರಾಚ್ಯಶಾಸ್ತ್ರ ಗುರುತಿಸಿದ ಕಪ್ಪು-ಕೆಂಪು- ಕುಂಬಾರಿಕೆ ಸಂಸ್ಕೃತಿಯೆಂದು ಭಾವಿಸುವಾಗ

ಮೇಲೆ ಹೇಳುವ ಸಮಸ್ಯೆಗಳಿಗೆ ಸಮರ್ಪಕ ಬದಲಿ ವಿವರಣೆ ಅವಶ್ಯಕವಾಗುತ್ತದೆ. ಜಾನ್ ಮಾರ್ ಕೊಡುವ ಕಾಲಮಾನಕ್ಕೂ ಹಿಂದೆ ಬೃಹತ್ ಶಿಲಾಯುಗದ ಸಂಸ್ಕೃತಿ ಹೋಗುತ್ತದೆ ಎಂದು ಇತಿಹಾಸಕಾರರು ಭಾವಿಸುತ್ತಾರೆ. ಕರ್ನಾಟಕದ ಹಳ್ಳೂರಿನಲ್ಲಿ ಇದರ ಕಾಲಮಾನ ಸುಮಾರು ಕ್ರಿ. ಪೂ. ೧೧೦೦. ಹತ್ತಿರದ ತಡಕನಹಳ್ಳಿಯಲ್ಲಿನ ಪಾತ್ರೆಗಳು ಇಂತಹುದೇ ಕಾಲಮಾನ ಸೂಚಿಸುತ್ತವೆ ಎನ್ನುತ್ತಾರೆ ಅಲ್‌ಚಿನ್. ಕಬ್ಬಿಣದ ಬಳಕೆಯೂ ಅಷ್ಟೇ ಹಿಂದೆ ಹೋಗುತ್ತದೆ. ತಮಿಳುನಾಡಿನಲ್ಲಿ ಇವುಗಳ ಕಾಲಮಾನ ಕ್ರಿಸ್ತಪೂರ್ವ ಮೊದಲನೆಯ ಸಹಸ್ರಮಾನ ಮಧ್ಯಭಾಗಕ್ಕೂ ಹಿಂದೆ ಹೋಗುವುದಿಲ್ಲ. (ಶ್ರೀಲಂಕಾದ ಅನುರಾಧಾಪುರದಲ್ಲಿ ಗುರುತಿಸಿದ ಕಾಲಮಾನ ಕ್ರಿ. ಪೂ. ೧೦೦೦-೯೦೦ ಎನ್ನಲಾಗಿದ್ದು, ಇದು ದಕ್ಷಿಣ ವಲಸೆಯ ಹಾದಿಯ ಬಗೆಗೆ ಪ್ರಶ್ನೆಗಳನ್ನು ಮೂಡಿಸುತ್ತದೆ. ಅಲ್ಲದೆ ಪುಣೆಯ ಬೃಹತ್‌ಶಿಲಾ ಸಂಸ್ಕೃತಿಯ ಕಾಲಮಾನ ಕ್ರಿ. ಪೂ. ೮೫೦ ಎನ್ನಲಾಗಿದೆ. ಇದು ಏನನ್ನು ಸೂಚಿಸುತ್ತದೆ ಎಂಬುದು ಸ್ಪಷ್ಟವಿಲ್ಲ. (ಆದರೆ ಉತ್ತರದ ಉದಯಪುರ್ ಹತ್ತಿರದ ಅಹರ್‌ನಲ್ಲಿ ಸರಿ ಸುಮಾರು ಕ್ರಿ. ಪೂ. ೧೪೦೦ರಲ್ಲಿ ಕಬ್ಬಿಣ ಬಳಕೆ ಪತ್ತೆಯಾಗಿದೆ.) ಈ ಕಾಲಮಾನ ತಮಿಳು ಸಂಗಂ ಸಂಸ್ಕೃತಿ ಅರಳಲು ಸಾಕಷ್ಟು ಕಾಲಾವಕಾಶ ಒದಗಿಸುತ್ತದೆ (ಸಂಗಂ ಸಂಸ್ಕೃತಿಯ ಕಾಲಮಾನವನ್ನು ಕ್ರಿ. ಪೂ. ೩ ರಿಂದ ಕ್ರಿ. ಶ. ೩ರವರೆಗೆ ಎನ್ನಲಾಗಿದೆ). ರಾಜನ್ ಗುರುಕ್ಕಲ್ ಅವರು ಕ್ರಿಸ್ತ ಶಕದ ಆರಂಭವೆಂದು ಭಾವಿಸಲಾದ ಸಂಗಂ ಸಾಹಿತ್ಯವನ್ನು ಸುಮಾರು ೩-೪ ಶತಮಾನಗಳ ನಂತರ ಸಂಗ್ರಹಿಸಲಾಯಿತು ಎನ್ನುತ್ತಾರೆ. ಬಹುಶಃ ಇದು ಸಂಗಂ ಸಾಹಿತ್ಯದಲ್ಲಿನ 'ಆರ್ಯೀಕರಣ'ದ ಬಗೆಗಿನ ಆಕ್ಷೇಪಕ್ಕೆ ಭಾಗಶಃ ಉತ್ತರ ಕೊಡಬಲ್ಲದು. ಸಂಗಂ ಸಾಹಿತ್ಯ ಬ್ರಾಹ್ಮಣರ ಇರುವಿಕೆಯನ್ನು ಹಾಗೂ ಕೆಲವು ಪೌರಾಣಿಕ ಧರ್ಮಗಳ ಪ್ರಭಾವವನ್ನು (ಶಿವ ಹಾಗೂ ವಿಷ್ಣು) ಸೂಚಿಸುತ್ತದೆ. ಆರ್ಯ ಜೀವನ ಭರಣದ ಮುಖ್ಯ ಭಾಗಗಳಾದ ಯಜ್ಞಗಳ ಸಂಬಂಧಿತ ವಿವರಣೆಗಳ ಇರದಿರುವಿಕೆ ಗುರುಕ್ಕಲ್ ಅವರ ವಿವರಣೆ ಸರಿಯಿರಬಹುದು ಎನ್ನಲು ಅವಕಾಶವೀಯುತ್ತದೆ.

ದಕ್ಷಿಣ ಭಾರತದ ತುದಿಯಲ್ಲಿನ ಸಂಗಂ ಸಾಹಿತ್ಯ ಇಲ್ಲಿನ ಜೀವನ ಭರಣದ ಬಗೆಗೆ ತಕ್ಕಮಟ್ಟಿನ ಮಾಹಿತಿ ಒದಗಿಸುತ್ತದೆ. ಇಲ್ಲಿ ದನಸಾಕಣೆ, ಕೃಷಿ ಹಾಗೂ ವ್ಯಾಪಾರಗಳು ಪ್ರಮುಖವಾಗಿದ್ದವು. ಕನಿಷ್ಠ ಕ್ರಿಸ್ತಶಕದ ಆರಂಭಿಕ ಶತಮಾನದವರೆಗೂ ವಿಸ್ತೃತವಾಗಿ ಕೃಷಿ ಅಭಿವೃದ್ಧಿ ಹೊಂದಿರಲಿಲ್ಲ. ಇದು ಕೃಷಿ ಹೆಚ್ಚುವರಿ ಆಧಾರಿತ ನಗರಗಳು ಹಾಗೂ ಸಾಮ್ರಾಜ್ಯಗಳು ಈ ಕಾಲದ ನಂತರವೇ ಸಾಧ್ಯವಾಗಿರಬೇಕು ಎಂದು ಸೂಚಿಸುತ್ತದೆ. ಇದು ಇನ್ನೆರಡು ಮೂಲಗಳಾದ ಯುದ್ಧದ ಕೊಳ್ಳೆ ಹಾಗೂ ವ್ಯಾಪಾರಗಳು ಪ್ರಮುಖ ರಾಜ್ಯಾದಾಯದ ಮೂಲಗಳಾಗಿದ್ದಿರಬೇಕು ಎಂದು ಸೂಚಿಸುತ್ತದೆ. ಯುದ್ಧಗಳಲ್ಲಿ ಪ್ರಮುಖವಾದದ್ದು ಪಶು ಸಂಪತ್ತು. ಹೀಗಾಗಿ ಅವುಗಳನ್ನು ತುರು ಕಾಳಗಗಳೆಂದೇ ಕರೆಯಲಾಗಿದೆ. ಪ್ರಾರಂಭಿಕ ಆರ್ಯ ಜನಸಮೂದಾಯಗಳ ಜೀವನಶೈಲಿ ಹೆಚ್ಚು ಭಿನ್ನವಾಗಿರಲಿಲ್ಲ. ಅಲ್ಲಿಯೂ "ಹೋರಾಡುವುದಕ್ಕೆ" ಬಳಸಲಾಗುತ್ತಿದ್ದ ಪದಗಳಲ್ಲೊಂದು ಗವಿಷ್ಟಿ ಎಂಬುದು; ಇದರ ಅರ್ಥ "ಹಸುಗಳನ್ನು ಹುಡುಕುವುದು" ಎಂದು. ಗುರುಕ್ಕಲ್ ಅವರು ವ್ಯಾಪಾರವೂ ಸಹ ನಗರೀಕರಣಕ್ಕೆ ಪ್ರಚೋದಕವಾಯಿತು ಎಂದು ಭಾವಿಸುತ್ತಾರೆ. ಅವರ ಪ್ರಕಾರ ಕಳಭ್ರರ ನಂತರವೇ ವಿಸ್ತೃತವಾಗಿ ಕೃಷಿ ವೃದ್ಧಿಯಾಯಿತು. ಈ ಕಳಭ್ರರ ಕಾಲವನ್ನು ಸಂಗಂ ಸಾಹಿತ್ಯ 'ಕರಾಳ ಕಾಲ' ಎಂದು ಕರೆದಿದೆ. ಇಲ್ಲಿ ಕಬ್ಬಿಣ ಪರಿಚಯವಿತ್ತೆಂದೂ ಆದರೆ ನೇಗಿಲು ಪರಿಚಯ ವಿರಲಿಲ್ಲವೆಂದೂ ಸೂಚಿತವಾಗಿದೆ. ಬಹುಶಃ ಕಬ್ಬಿಣದ ಪರಿಚಯ ಆಧುನಿಕ ನಗರೀಕರಣದ ಹುಟ್ಟಿಗೆ ಕಾರಣವಾಗಬಹುದಾದರೂ ಅದಷ್ಟೇ ಸಾಕಾಗಲಿಕ್ಕಿಲ್ಲ ಎಂದು ಸ್ಪಷ್ಟವಾಗಿ ಸೂಚಿತವಾಗಿದೆ. ಯುದ್ಧಗಳಲ್ಲಿನ ಲೂಟಿಗಳೇ ಇಲ್ಲಿನ ಅರಸರ ಪ್ರಮುಖ ಆದಾಯಗಳಲ್ಲೊಂದಾಗಿದ್ದರಿಂದ ಕದಂಬರನ್ನು ಕಡಲ್ಗಳ್ಳರೆಂಬ ಸಂಗಂ ಸಾಹಿತ್ಯದಲ್ಲಿನ ಆರೋಪ ಮುಚ್ಚಿಟ್ಟುಕೊಳ್ಳುವ ಅಗತ್ಯ ಕೃಷಿ ಮೂಲದ ಆದಾಯ ಹೆಚ್ಚಿದ ನಂತರ (ಹಾಗೂ ವಂಶಾವಳಿಗಳನ್ನು ಸೃಷ್ಟಿಸಿಕೊಳ್ಳುವ ಮೂಲಕ ಧಾರ್ಮಿಕ ನ್ಯಾಯ ಬದ್ಧತೆಯ ಅಗತ್ಯದ ಹಿನ್ನೆಲೆಯಲ್ಲಿ) ಕದಂಬರಿಗೆ ಉಂಟಾಗಿರಬೇಕು. ವ್ಯವಸ್ಥಿತ, ವಿಸ್ತೃತ ಕೃಷಿ ಆದಾಯದ ಮೂಲಗಳಿಲ್ಲದ ಹಾಗೂ ಕೃಷಿ ಹೆಚ್ಚುವರಿಯನ್ನು ರಾಜವ್ಯವಸ್ಥೆಗೆ ತಂದುಕೊಡುವ ವ್ಯವಸ್ಥೆಯಿಲ್ಲದ ಯಾವುದೇ 'ಅರಸರ'ಗಳನ್ನು ಹೆಚ್ಚೆಂದರೆ ಬುಡಕಟ್ಟಿನ (ಕೆಲವೊಮ್ಮೆ ಉತ್ತರದ ಜಾನಪದಗಳೆಂದು ಸೂಚಿತವಾದ ಬುಡಕಟ್ಟು ಒಕ್ಕೂಟಗಳ) ನಾಯಕರೆಂದು ಭಾವಿಸುವ ಅಗತ್ಯ ಉಂಟಾಗುತ್ತದೆ.

ಮೌರ್ಯರ ಆಡಳಿತ ಕೇಂದ್ರೀಕೃತವಾಗಿತ್ತು ಎಂಬ ಅಂಶವನ್ನು ಪ್ರಶ್ನಿಸಲಾಗಿದೆ ಎನ್ನುವ ಥಾಪರ್ ಮೂರು ರೀತಿಯ ನಿಯಂತ್ರಣಗಳನ್ನು ಪ್ರಸ್ತಾಪಿಸುತ್ತಾರೆ. ಮೊದಲನೆಯದು ಕೇಂದ್ರದಲ್ಲಿ ನೇರ ಅಧಿಕಾರದಲ್ಲಿದ್ದ ಪ್ರದೇಶ. ಎರಡನೆಯದು ಆಕ್ರಮಿಸಿಕೊಂಡ ಆರ್ಥಿಕವಾಗಿ ಅಭಿವೃದ್ಧಿ ಹೊಂದಿದ ಪ್ರದೇಶ – ಇದು ಪ್ರತಿನಿಧಿಯಿಂದ ಆಳಲ್ಪಡುತ್ತಿತ್ತು ಹಾಗೂ ಅಲ್ಲಿ ಆಡಳಿತ ವ್ಯವಸ್ಥೆ ಕೇಂದ್ರದ ಯಥಾವತ್ ನಕಲಲ್ಲ. ಮೂರನೆಯದು ಅಂಚುಗಳ ಪ್ರದೇಶ – ಇಲ್ಲಿ ಚಕ್ರವರ್ತಿಗಳ ನಿಯಂತ್ರಣ ಕಚ್ಚಾವಸ್ತುಗಳ ಸಾಗಣೆದಾರಿಗಳಿಗಷ್ಟೇ ಸೀಮಿತವಾಗಿತ್ತು. ಕೊನೆಯದಕ್ಕೆ ಕರ್ನಾಟಕದ (ಬಂಗಾರದ ಗಣಿ ಇರುವ ಪ್ರದೇಶ) ಉದಾಹರಣೆಯನ್ನು ಅವರು ಕೊಡುತ್ತಾರೆ. ರಾಜ್ಯ ವ್ಯವಸ್ಥೆಯ ಬೆಳವಣಿಗೆಯನ್ನು ಗಣನೆಗೆ ತೆಗೆದುಕೊಂಡಲ್ಲಿ ವಿಸ್ತೃತ ಕೃಷಿ ಹಾಗೂ ಅದರ ಹೆಚ್ಚುವರಿಯನ್ನು ರಾಜ್ಯ ಬೊಕ್ಕಸಕ್ಕೆ ಹರಿಸುವ ವ್ಯವಸ್ಥೆ ಕ್ರಿ. ಶ. ೩-೪ನೇ ಶತಮಾನದಲ್ಲಿ ರೂಪಗೊಂಡು ಕದಂಬ ಹಾಗೂ ಗಂಗರ ರಾಜ ವ್ಯವಸ್ಥೆಗಳಿಗೆ ಕಾರಣವಾಗಿರಬಹುದು ಎಂದು ಭಾವಿಸಬೇಕಾಗುತ್ತದೆ. ಇಂತಹ ಬೆಳವಣಿಗೆಗಳಿಗೆ ಕಾಲಾವಕಾಶ ಅಗತ್ಯದ ಹಿನ್ನೆಲೆಯಲ್ಲಿ ಕರ್ನಾಟಕದ ಮಟ್ಟಿಗೆ ಬಹುತೇಕ ಇದರ ಆರಂಭದ ಕಾಲವು ಕ್ರಿಸ್ತಶಕದ ಪ್ರಾರಂಭಕ್ಕೂ ಹೆಚ್ಚು ಹಿಂದೆ ಹೋಗಲಿಕ್ಕಿಲ್ಲ ಎಂದು ಭಾವಿಸಬೇಕಾಗುತ್ತದೆ.

ಈ ಪ್ರಮೇಯದ ಬಗೆಗೆ ಪ್ರಾರಂಭದಲ್ಲಿಯೇ ಕೇಳಬಹುದಾದ ಪ್ರಶ್ನೆಯೆಂದರೆ ಕ-ಕೆಂ-ಕುಂಬಾರಿಕೆಯ ದಕ್ಷಿಣದ ಈ ಕವಲು ಏಕೆ ವೃಷ್ಣಿ ವೀರರ 'ವಸುದೇವ' ಧರ್ಮ ತಮ್ಮೊಂದಿಗೆ ದಕ್ಷಿಣಕ್ಕೆ ತೆಗೆದುಕೊಂಡು ಬರಲಿಲ್ಲ? ಈ ವೃಷ್ಣಿ ವೀರರ ಆರಾಧನೆ ಮಥುರಾದ ಅಜುಬಾಜಿನ ಪ್ರದೇಶಗಳಲ್ಲಿ ಬೆಳೆದು ವಿಕಾಸಗೊಂಡಿರಬೇಕು ಹಾಗೂ ಇದು ಉತ್ತರ ಡೆಕ್ಕನ್‌ನಲ್ಲಿ ನಂತರದಲ್ಲಿ ಹರಡಿರಬೇಕು ಎಂದು ಊಹಿಸುವ ಅಗತ್ಯ ಉಂಟಾಗುತ್ತದೆ. ಇದು ಖಚಿತ ಉತ್ತರವೇನಲ್ಲ. ಈ ಪ್ರಮೇಯ(ಗಳು)ಎಷ್ಟರ ಮಟ್ಟಿಗೆ ಇತಿಹಾಸ (ಹಾಗೂ ಪುರಾತತ್ವ) ಒದಗಿಸುವ ಸಾಕ್ಷಿಗಳಿಗೆ ಸರಿಹೊಂದುತ್ತವೆ ಎಂದು ಪರೀಕ್ಷಿಸಲು ಆರಂಭಿಕ ಪ್ರಮೇಯವಾಗಿ ಬಳಸಬಹುದು. ಕೆಲವಾದರೂ ಹೊಸ ಚರ್ಚೆಗಳಿಗೆ ಇದು ದಾರಿ ಮಾಡಬಹುದು. ಉದಾಹರಣೆಗೆ, ಗುಣಾಢ್ಯನ ಬೃಹತ್ ಕಥಾದ ಪೈಶಾಚೀ ಭಾಷೆಯನ್ನು ಗುರುತಿಸುವ ಬಗೆಗೆ.

[illegible]

# ಸಾದರ ಸ್ವೀಕಾರ

**ಕುಹೂ ಕುಹೂ ಕೋಗಿಲೆ** (ಮಕ್ಕಳ ಕವನ ಸಂಕಲನ)
*ಟಿ. ಸತೀಶ್ ಜವರೇಗೌಡ*
*ಪುಟ : ೮೮* *ಬೆಲೆ: ರೂ. ೬೦*
**ಪ್ರತಿಭಾ ಪ್ರಕಾಶನ**, ಮಂಗಳ ಅಂಚೆ, ಮಂಡ್ಯ ತಾಲ್ಲೂಕು, ಮಂಡ್ಯ - ೫೭೧೪೦೩.

**ನಕ್ಕರೆ ಅದೇ ಸಕ್ಕರೆ** (ಹಾಸ್ಯಲೇಖನಗಳು)
ಜ್ಯೋತಿ ಪ್ರಭಾ
*ಪುಟ : ೮೦* *ಬೆಲೆ: ರೂ. ೨೫*
**ಶುಭಜ್ಯೋತಿ ಪ್ರಕಾಶನ**, ನಂ.೪೬, ಜ್ಯೋತಿರ್ಗಮಯ, ೨ನೇ ಮುಖ್ಯ ರಸ್ತೆ, ಚಿನ್ನಪ್ಪ ಲೇಔಟ್, ಹೆಬ್ಬಾಳ, ಕೆಂಪಾಪುರ, ಬೆಂಗಳೂರು - ೫೬೦೦೨೪.

**ರೈತಭಾರತ : ಅವಸಾನದ ಅಂಚಿನಲ್ಲಿ**
*ಡಿ. ಎಸ್. ನಾಗಭೂಷಣ*
*ಪುಟ : ೪೮* *ಬೆಲೆ: ೨೦*
**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ ಗಾಂಧಿನಗರ, ಬಳ್ಳಾರಿ - ೫೮೩೧೦೩

**ಅಪ್ಪ ಶಾಂತರಸ ನುಡಿ ಸ್ಮಾರಕ**
*ಸಂ.: ಎಚ್. ಎಸ್. ಮುಕ್ತಾಯಕ್ಕ*
*ಪುಟ : ೨೨೪* *ಬೆಲೆ: ರೂ. ೧೨೫*
**ಡಾ|| ಚೆನ್ನಬಸವ ಪಟ್ಟದ್ದೇವರು ಪ್ರತಿಷ್ಠಾನ**, ಹಿರೇಮಠ ಸಂಸ್ಥಾನ, ಭಾಲ್ಕಿ, ಬೀದರ ಜಿಲ್ಲೆ.

**ಭೀಮ ಕಥಾನಕ** (ನಾಟಕ) ಎಸ್. ಮಾಲತಿ
*ಪುಟ : ೪೦* *ಬೆಲೆ : ರೂ. ೨೫*

**ಮೂರು ಮಕ್ಕಳ ನಾಟಕಗಳು** ಎಸ್. ಮಾಲತಿ
*ಪುಟ : ೬೪* *ಬೆಲೆ : ರೂ. ೩೫*

**ಪೂರಣ್ ಚಂದ್ರ ಜೋಶಿ** ಅನಿಲ್ ರಾಜಿಮ್‌ವಾಲೆ
*ಅನು: ಬಿ. ವಿ. ಕಕ್ಕಿಲ್ಲಾಯ*
*ಪುಟ : ೬೪* *ಬೆಲೆ : ರೂ. ೨೫*

**Multimedia Language Laboratory**
*Bedre Manjunath*
*Pages : 64* *Price: Rs. 15*

*ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು*
*ನವಕರ್ನಾಟಕ ಪ್ರಕಾಶನ, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧.*

ಯಾವ ಗಳಿಗೆಯಲ್ಲಿ ಬೇಕಾದರೂ ನಾವು ಅನಾರೋಗ್ಯದಿಂದಲೋ ಅಪಘಾತದಿಂದಲೋ ಅಪಕೃತಿಯ ಅಟಾಟೋಪದಿಂದಲೋ ಅಸಹಾಯಕ ಸ್ಥಿತಿಗೆ ತಲುಪಬಹುದು. ಈಗಾಗಲೇ ಅಸಹಾಯಕ ಸ್ಥಿತಿಯಲ್ಲಿರುವ ಜನರ ಬಗೆಗೆ ನಮ್ಮ ಧೋರಣೆ ಅನುಕಂಪೆಯಾಗಿದ್ದರೆ ಸಾಲದು, ಸಹಜವಾಗಿ ಅವರ ಹೋರೆಯನ್ನು ಬೆಂಬಲಿಸುವ ಕ್ರಿಯೆಯಾಗಿ ವ್ಯಕ್ತವಾಗಬೇಕು. "ಗಾಣಗಿತ್ತಿ ಅಯ್ಯೋ ಎಂದರೆ ನೆತ್ತಿ ತಣ್ಣಗಾಗುವುದೇ?"– ಎಂಬುದು ಕನ್ನಡದ ಗಾದೆ. ಹಾಗೆಂದ ಮಾತ್ರಕ್ಕೆ ಸಹಾನುಭೂತಿಗೆ ಅರ್ಥವೇ ಇಲ್ಲವೆಂದಲ್ಲ. 'ನೆತ್ತಿ ತಣ್ಣಗಾಗದಿದ್ದರೂ' ಒಂಟಿ ಪ್ರಜ್ಞೆಯ ಹೊರೆ ಕೊಂಚವಾದರೂ ಹಗುರವಾಗುತ್ತದೆ.

ಇದಲ್ಲದೆ ಇನ್ನೊಂದು ದೃಷ್ಟಿಯಿಂದಲೂ ಆಲೋಚಿಸಬೇಕು. ನಮ್ಮ ಜೀವನಶೈಲಿಗೆ ಬೇಕಾದ ಸಾಮಗ್ರಿಯನ್ನು (ಭೋಗವಸ್ತುಗಳನ್ನು) ಒದಗಿಸಿರುವ ಸಮಾಜ ರಚನೆಯಿಂದಾಗಿಯೇ ಅನೇಕರನ್ನು – ಅಸಹಾಯಕರಲ್ಲದ ದುಡಿಯುವ ಮಂದಿಯನ್ನು – ಅವರ ಶಕ್ತಿಮೀರಿದುಡಿಯಲೇಬೇಕಾದ ಅಸಹಾಯಕತೆಗೆ ದೂಡಿದ್ದೇವೆಂಬ ಅನ್ಯಾಯ ಪ್ರಜ್ಞೆ ನಮಗೆ ಮೂಡಿಸಬೇಕಾದ ದಿನವೇ ಮೇ ಒಂದರ ಶ್ರಮಿಕ ದಿನಾಚರಣೆಯ ಆಶಯ! ಸಹಜವಾಗಿ ಅಸಹಾಯಕತೆ ಅನಿವಾರ್ಯ; ಆದರೆ ಕೃತಕವಾಗಿ ಸೃಷ್ಟಿಸಿರುವ ಅಸಹಾಯಕತೆ ಮಾನವಕುಲಕ್ಕೇ ಆಗಬೇಕಾದ ಅವಮಾನ!

ಜೀವಿಗಳನ್ನು ಅಸಹಾಯಕಗೊಳಿಸುವ ಈ ಕ್ರೌರ್ಯಕ್ಕೂ ಇತಿಹಾಸವಿದೆ. ಅದನ್ನು ಸಂಕ್ಷೇಪವಾಗಿ ಪರಿಗಣಿಸುವುದು ಸಮಸ್ಯೆಯ ಬೇರಿನ ಆಳವನ್ನು ಪರಿಚಯಿಸುವುದಲ್ಲದೆ, ವರ್ತಮಾನದ ಈ ಮಾನವಕುಲದ 'ಅವಮಾನ' ಹಾಗೂ ಅಮಾನುಷತೆ ಒಪ್ಪತಕ್ಕದ್ದಲ್ಲದೆ

## ಅಸಹಾಯಕರ ಆಳಿಗೆ ಅತ್ಯಬಾರದೆ?

ಯಜಮಾನ ಒಬ್ಬ ವ್ಯಕ್ತಿಯಾಗಿದ್ದಾಗಲಾದರೂ ಅವನನ್ನು ಮಟ್ಟಹಾಕಬಹುದಿತ್ತು. ಇಲ್ಲವೆ ಮನಃಪರಿವರ್ತನೆ ಮಾಡಬಹುದಾಗಿತ್ತು. ಆದರೆ ಈಗಿನ ಕಾರ್ಪೊರೇಟ್ ವಲಯದೊಂದಿಗೆ ಗುರುತಿಸಿಕೊಂಡವರಿಗೆ ಯಜಮಾನ ಒಬ್ಬ ವ್ಯಕ್ತಿಯಲ್ಲ; ಬದಲಿಗೆ ಒಂದು ಸಂಸ್ಥೆ. ಅದರ ಧೋರಣೆ ಪರಿವರ್ತನೆ ಮಾಡುವುದು ಯಾರಿಂದಲೂ ಕಷ್ಟಸಾಧ್ಯವೇ ಸರಿ. ತನ್ನ ಮನ್ನಣೆಯನ್ನು ಕಾರ್ಪೊರೇಟ್ ಸಂಸ್ಥೆಯ ಉದ್ಯೋಗಿ ಅವನ ಸಂಸ್ಥೆಯಲ್ಲಿ ವಿಲೀನಗೊಳಿಸಿ ಆ ಸಂಸ್ಥೆಯ ಮೂಲಕವೇ ಪಡೆಯಬೇಕೇ ವಿನಾ ಆ ಸಂಸ್ಥೆಯಿಂದ ಹೊರಬಂದದ್ದೇ ಆದರೆ ಅವನಿಗೆ ಯಾವ ಮನ್ನಣೆಯೂ ಇರದು. ಹೀಗಾಗಿ ತನ್ನನ್ನು ಸಂಸ್ಥೆಯಿಂದ ಪ್ರತ್ಯೇಕಗೊಳಿಸಿಕೊಳ್ಳಲಾಗದ ಅಸಹಾಯಕತೆಗೆ ಉದ್ಯೋಗಿಯನ್ನು ದೂಡಿ, ಉದ್ಯೋಗದಾತನಿಗೆ ನೇಮಿಸಿಕೊಳ್ಳುವ ಇಲ್ಲವೆ ಕಿತ್ತೊಗೆಯುವ ಸ್ವಾತಂತ್ರ್ಯ ನೀಡಿದರೆ ಅಸಹಾಯಕತೆ ಹಾಗೂ ಅನಿಶ್ಚಿತತೆಯ ಅಳುಕು ಅವನನ್ನು ಕಾಡದಿರುವುದೇ?

ಪ್ರೊ|| ಎಮ್. ಆರ್. ನಾಗರಾಜು

ಹೋದರೂ ಅತ್ಯಂತ ಸಹಜವಾದದ್ದು ಎಂದು ತಿಳಿಯುತ್ತದೆ.

ಮಾನವ ಸಮಾಜ ಜೀವಿಯೇನೋ ನಿಜ. ಆದಿಮಾನವ ತನ್ನ ಹೊಟ್ಟೆಗೆ ಆಹಾರವನ್ನು ತಾನೇ ಹುಡುಕಿಕೊಳ್ಳಬೇಕಾದಾಗ ಇನ್ನೊಬ್ಬರನ್ನು ಅಸಹಾಯಕತೆಗೆ ದೂಡುವುದು ಸಾಧ್ಯವೇ ಇರಲಿಲ್ಲ. ವ್ಯಕ್ತಿಯಾಗಿ ತನ್ನ ಕರ್ತವ್ಯ ನಿರ್ವಹಿಸಿದರೆ ಸಾಕಾಗಿತ್ತು. ಸಮಾಜವೇ ಇಲ್ಲದಾಗ ಸಾಮಾಜಿಕ ಕರ್ತವ್ಯವನ್ನು ಆತ ನಿರ್ವಹಿಸುವುದು ದೂರದ ಮಾತು.

ಅಲೆಮಾರಿ ಮಾನವ ಒಂದೆಡೆ ನೆಲೆಯೂರಿ ಬಾಳತೊಡಗಿದಾಗ ಅವನ ಅಗತ್ಯಗಳು ಹೆಚ್ಚಾದವು. ಕೃಷಿಯ ಸಲುವಾಗಿ, ಅಂದರೆ ಆಹಾರದ ಸಲುವಾಗಿ ಪ್ರಾಣಿಗಳನ್ನು ಪೋಷಿಸಿ ಶೋಷಿಸಿದ. ಮಾನವನ ಕ್ರೌರ್ಯದ ವ್ಯಾಪ್ತಿ ಸಸ್ಯಗಳನ್ನು ದಾಟಿ ಪ್ರಾಣಿಗಳನ್ನೂ ತಲುಪಿತು! ಆದರೂ ಅಸಹಾಯಕತೆಯ ಸೃಷ್ಟಿ ಮಿತವಾಗಿಯೇ ಇತ್ತು. ಏಕೆಂದರೆ ವ್ಯಕ್ತಿಯ ಅಗತ್ಯಗಳೇ ಕಡಿಮೆ. ಪ್ರಾಣಿಗಳನ್ನು ತಾನೇ ಪೋಷಿಸುವುದಲ್ಲದೆ ಅವುಗಳೊಂದಿಗೆ ತಾನೂ ದುಡಿಯಬೇಕಾಗಿತ್ತು. ಹೀಗಾಗಿ ಪೋಷಿಸಿದ ಕಾರಣದಿಂದಲೇ ಶೋಷಿಸುವ ಹಕ್ಕನ್ನೂ ಅವನು ಪಡೆದಿದ್ದ. (ಆದರೆ, ಈಗ ನಾವು? ಯಾರೋ ಸಾಕಿ ಬೆಳೆಸಿದ ಹಸುವಿನ ಹಾಲನ್ನು ಉಪಯೋಗಿಸಿ ಆನಂದಿಸುತ್ತೇವೆ; ಯಾರೋ ಬೆಳೆಸಿದ ಸಾಕುಪ್ರಾಣಿಯ ಮಾಂಸವನ್ನು ತಿಂದು ಸುಖಪಡುತ್ತೇವೆ.)

ದಿನ ಕಳೆದಂತೆಲ್ಲಾ ಸಮಾಜದಲ್ಲಿ ಸಹಕಾರವನ್ನು ಮೀರಿ ಸ್ಪರ್ಧೆ ಮತ್ತು ಹೋರಾಟಗಳು ಬಲಿಯ ತೊಡಗಿದುದರ ಪರಿಣಾಮವಾಗಿ, ಸಾಮಾಜಿಕ ಅಂತರ ಎಷ್ಟು ಹೆಚ್ಚಾಯಿತೆಂದರೆ, ಅನ್ಯ ಜೀವಿಗಳ ಜೊತೆಗೆ ಅನ್ಯ ಜನರನ್ನೂ ಪ್ರಾಣಿಗಳಂತೆ ದುಡಿಸಿಕೊಳ್ಳುವುದು, ಅವರ ಮೇಲೆ ಹಕ್ಕು ಸ್ಥಾಪಿಸಿ ಅವರು ದುಡಿದರೂ ದುಡಿಮೆಯ ಫಲವನ್ನು ತನ್ನ ಒಡೆತನಕ್ಕೆ ತೆಗೆದುಕೊಳ್ಳುವುದು ಅಗತ್ಯವೂ ಅನಿವಾರ್ಯವೂ ಆಯಿತು. ತನ್ನ ಸಹ ಜೀವಿಗಳನ್ನೇ ಸ್ವಾಧೀನದಲ್ಲಿರಿಸಿಕೊಂಡು ಅವರು ದೂರ ಸರಿಯದಂತೆ ಅಸಹಾಯಕತೆಯನ್ನು ಸೃಷ್ಟಿಸಿ, ಅದನ್ನು ಸಾಮಾಜಿಕ ಮಾನ್ಯತೆಗೆ ಒಳಪಡಿಸಿದ ಏಕೈಕ ಜೀವಿ – ಮಾನವ! ಇದೇ ಗುಲಾಮಗಿರಿ ವ್ಯವಸ್ಥೆ.

ತಾರತಮ್ಯದ ಜೊತೆಜೊತೆಗೆ ಪ್ರತಿಭಟನೆಯೂ ಬೆಳೆಯುವುದು ಸಹಜ. ಅಸಹಾಯಕತೆ ತಾರಕಕ್ಕೇರಿದಾಗ ಪ್ರತಿಭಟನೆ ಅತಿಯಾದಾಗ ಜಮೀನ್ದಾರಿ ಪದ್ಧತಿ ಜಾರಿಗೆ ಬಂದಿತು. ಅಸಹಾಯಕನು ಆಸ್ತಿ ಪಡೆಯಲು, ಒಡೆಯನಾಗಲು ಅವಕಾಶವಾಯಿತಾದರೂ ಅವನು ಎಷ್ಟೇ ಶ್ರಮ ವಹಿಸಿದರೂ ಆಸ್ತಿಗೆ ಒಡೆಯನಾಗುವಷ್ಟು ಸ್ಥಿತಿವಂತನಾಗದ ಹಾಗೆ ವ್ಯವಸ್ಥೆಯ ಬಿಗಿ ಇತ್ತು. ಇದು ಸಹಜವೇ ಆಗಿದೆ. ಈಗಾಗಲೇ ಜಮೀನು ಪಡೆದವರೊಡನೆ ಜಮೀನಿಲ್ಲದವರು ಸ್ಪರ್ಧಿಸುವುದಾದರೂ ಹೇಗೆ?

ಜಮೀನಿನ ಒಡೆತನವೂ ಅಗತ್ಯಗಳ ಪೂರೈಕೆಗೆ ಸಾಕಾಗದಾದ ಮಟ್ಟಕ್ಕೆ ಅಗತ್ಯಗಳ ಹೆಚ್ಚಳ ಹಾಗೂ ಜನಸಂಖ್ಯೆಯ ಹೆಚ್ಚಳವಾಗುವ ವೇಳೆಗೆ, ಜಮೀನಿನ ಒಡೆಯನಾಗಿ ಆಳುವುದರ ಬದಲಿಗೆ ಹಣದ ಒಡೆಯನಾಗಿ ಹಣಹೀನರನ್ನು ಅಸಹಾಯಕತೆಗೆ ದೂಡುವ ಅವಕಾಶವನ್ನು ಕೈಗಾರಿಕೀಕರಣ ಒದಗಿಸಿಕೊಟ್ಟಿತು. ಕೈಗಾರಿಕೆಗಳನ್ನು ಸ್ಥಾಪಿಸಲು ಬೇಕಾದ ಯಂತ್ರ ಖರೀದಿಸಲು ಹಣವಂತನಿಗೆ ಸಾಧ್ಯ. ಶ್ರಮವನ್ನೇ ಬಂಡವಾಳವಾಗಿ ಇರಿಸಿಕೊಂಡಿರುವವ ಸಿರಿವಂತನೊಡನೆ ಸ್ಪರ್ಧಿಸಲಾರದಷ್ಟು ಅಸಹಾಯಕ.

ಕೈಗಾರಿಕೀಕರಣ ಶ್ರಮಿಕನಿಗೆ ವರದಾನವೆಂದು ಪರಿಗಣಿಸಿದಾಗ ಯಂತ್ರಗುಲಾಮ ದೊರೆತದ್ದರಿಂದ, ದುಡಿವ ಮಾನವನ ಅಸಹಾಯಕತೆಯಿಂದ, ಶ್ರಮದಿಂದ ವಿನಾಯ್ತಿ ದೊರೆಯುವುದೆಂದೂ, ಅಧಿಕ ಉತ್ಪಾದನೆ ಆಗುವ ಕಾರಣದಿಂದ ಅಸಹಾಯಕ ಬಡವನೂ ಭೋಗ ಸಾಮಗ್ರಿಗಳನ್ನು ಬಳಕೆ ಮಾಡುವಂತಾಗುವುದೆಂದೂ ಪ್ರಚಾರ ಮಾಡಲಾಯಿತು. ಆದರೆ ಆದದ್ದೇ ಬೇರೆ.

ಬಡ ದುಡಿಮೆಗಾರನು ಯಂತ್ರದೊಡನೆ ಸ್ಪರ್ಧಿಸಬೇಕಾಯಿತು. ಬದುಕುವ ಸಲುವಾಗಿ ತನ್ನ ಶ್ರಮಕ್ಕೆ ತಕ್ಕ ಪ್ರತಿಫಲವನ್ನು ಪಡೆಯಲು ಉಳ್ಳವರೊಡನೆ ಹಕ್ಕು ಸ್ಥಾಪಿಸಲು ಆತ ಅಸಮರ್ಥನಾಗಿದ್ದ. ಹೇಗೂ ಶ್ರಮ ಕಡಿಮೆಯಾಗಿರುವ ಕಾರಣ, ದುಡಿಮೆಯ ಅವಧಿಯನ್ನು ಹೆಚ್ಚು ಮಾಡಿದಂತೆ, ಹಣ ಹೂಡಿದವನಿಗೆ ಅಧಿಕ ಉತ್ಪಾದನೆಯ ಲಾಭ ಆಗುವಂತಾಯಿತು. ಇದರ ಜೊತೆಗೆ ಹಣ ಗಳಿಸುವ ಸಲುವಾಗಿ ಹೆಚ್ಚುವರಿ ಅವಧಿ ದುಡಿಮೆಗೆ ಇದು ಎಡೆಮಾಡಿಕೊಟ್ಟಿತು. ತನ್ನ ಊರಿನಿಂದ ದೂರ ಹೋಗಿ ಅಪರಿಚಿತರ ನಡುವೆ ಬಾಳಬೇಕಾದ ಅನಿವಾರ್ಯತೆ ಶ್ರಮಿಕ ವರ್ಗಕ್ಕೆ ಬಂದೊದಗಿತ್ತು. ಹುಟ್ಟಿದೂರಿನ ಮನೆ, ಜೀವನ ಸಾಗಿಸುವ ಮನೆ ಎಂಬ ಭೇದದ ಅಗತ್ಯ ಉಂಟಾದದ್ದು ಕೈಗಾರಿಕೀಕರಣದಿಂದ ಉದ್ಯೋಗಿಗಳು ವಲಸೆ ಹೋದುದರ ಪರಿಣಾಮವಾಗಿ.

ಒಟ್ಟಾರೆಯಾಗಿ ಹೇಳುವುದಾದರೆ ಕೈಗಾರಿಕೀಕರಣದ ಪರಿಣಾಮವಾಗಿ ಆದದ್ದು,

ಸಾಕುಪ್ರಾಣಿ, ಯಂತ್ರ ಹಾಗೂ ಮಾನವನ ಅಸಹಾಯಕತೆ – ಇವುಗಳೆಲ್ಲವೂ ಉಳ್ಳವರ ಅಗತ್ಯಗಳ ಪೂರೈಕೆಗೆ ವಿಶೇಷವಾಗಿ ಬಳಕೆಯಾದವು. ಮಾನವನಿಗೆ ಪರ್ಯಾಯ ಗುಲಾಮ ಸುಳಿಯಾಗಿ ಯಂತ್ರ ಪರಿಣಮಿಸಿತು. ದುಡಿವ ವರ್ಗಕ್ಕೆ ಕೆಲವು ಭೋಗ ಸಾಮಗ್ರಿಗಳು ಸಿಕ್ಕಿದ್ದು ಸುಳ್ಳೇನಲ್ಲವಾದರೂ, ದುಡಿವ ವರ್ಗದ ಅಸಹಾಯಕತೆ ಯಂತ್ರಾಗಮನದಿಂದ ಕಡಿಮೆ ಆಗುವ ಬದಲು ಹೆಚ್ಚಾಯಿತು.

ಬೌದ್ಧಿಕ ಕೆಲಸ ಮಾಡುವ ಗುಲಾಮಯಂತ್ರ ಅರ್ಥಾತ್ ಕಂಪ್ಯೂಟರು ಬಂದದ್ದು ಅನಂತರದ ಬೆಳವಣಿಗೆ. ಈ 'ಚಿಂತನಯಂತ್ರ' ಮಾನವನ ಅಸಹಾಯ ಕತೆಯನ್ನು ತಗ್ಗಿಸಿದೆಯೇ ಎಂಬುದನ್ನು ಪರಿಶೀಲಿಸಿದರೆ ದುಡಿವವರ ಅಸಹಾಯಕತೆಯ ಮಟ್ಟವನ್ನೇನೂ ಅದು ತಗ್ಗಿಸಿಲ್ಲ ಎಂಬಂಶವನ್ನು ತಿಳಿಯಲು ಆಳವಾಗಿ ಆಲೋಚಿಸಬೇಕಾದ ಅಗತ್ಯವೇನಿಲ್ಲ. ಇದು ನಮ್ಮ ಸುತ್ತಲೂ ಸೂಕ್ಷ್ಮವಾಗಿ ಗಮನಿಸಿದರೆ ತಿಳಿಯಬಹುದಾದ ನಗ್ನಸತ್ಯ.

ಕಂಪ್ಯೂಟರ್ ಉದ್ದಿಮೆಯ ಆಗಮನದ ಪರಿಣಾಮಗಳನ್ನು ಸ್ಥೂಲವಾಗಿ ಪರಿಶೀಲಿಸೋಣ. ಕಂಪ್ಯೂಟರ್ ಉದ್ಯಮದಲ್ಲಿರುವ ನೌಕರರಿಗೆ ಸಿಗುವ ವೇತನ ಅಗಾಧ ಪ್ರಮಾಣದ್ದೆಂದೂ, ನಾವೆಲ್ಲರೂ ಹೇಗಾದರೂ ಮಾಡಿ ಆ ಉದ್ಯಮದಲ್ಲಿ ಉದ್ಯೋಗಿಗಳಾಗಬೇಕೆಂದೂ ನಮ್ಮ ಯುವಜನತೆಯ ಕನಸು. ಆದರೆ ಅವರು ಗಮನಿಸಬೇಕಾದದ್ದು ವೇತನದ ಹೆಚ್ಚಳವನ್ನೇ ಅಲ್ಲ, ಹೆಚ್ಚು ವೇತನವನ್ನು ಪಡೆವ ಆ ಉದ್ಯೋಗಿಗಳ ಅಸಹಾಯಕತೆ ಯಾವ ಮಟ್ಟದ್ದು ಎಂಬ ಸಂಗತಿ. ಈ ಹೆಚ್ಚಿನ ವೇತನವನ್ನು ಅವರಿಗೆ ನೀಡಲಾಗುತ್ತಿರುವುದಾದರೂ ಹೇಗೆ ಎಂಬ ಒಳಗುಟ್ಟು ನೋಡಿ: ಉದ್ಯೋಗಿಗಳನ್ನು ದಿನಕ್ಕೆ ಎಂಟು ಗಂಟೆ ಮಾತ್ರ ದುಡಿಸಿಕೊಳ್ಳಬಹುದೆಂಬ ನಿಯಮಕ್ಕೆ ಕಂಪ್ಯೂಟರ್ ಉದ್ಯಮದವರಿಗೆ ವಿನಾಯ್ತಿ ನೀಡಲಾಗಿದೆ. ಬೌದ್ಧಿಕ ಕೆಲಸವಾದ ಕಾರಣ ಆಯಾಸವಾಗದು ಎಂಬ ಸಮರ್ಥನೆಯನ್ನು ನೀಡಬಹುದಾದರೂ ವಿದೇಶಗಳಲ್ಲಿನ ಅದೇ ಉದ್ಯಮದ ಉದ್ಯೋಗಿಗಳಾರೂ ಎಂಟು ಗಂಟೆಗೆ ಮೀರಿ ದುಡಿಯುವುದು ಅಪರೂಪ. (ಭಾರತದ ಉದ್ಯೋಗಿಗಳನ್ನು ಅವರು ಬಯಸುವುದೇ ಹೆಚ್ಚು ದುಡಿಸಿ ಕೊಳ್ಳಲು ಸಾಧ್ಯ ಎಂಬ ಕಾರಣಕ್ಕಾಗಿ). ಇದಲ್ಲದೆ ಉದ್ಯೋಗಿಗಳನ್ನು ಪೂರ್ವಸೂಚನೆ ನೀಡದೆ ಕೆಲಸದಿಂದ ತೆಗೆದುಹಾಕಲು ಸ್ವಾತಂತ್ರ್ಯವೂ ಈ ಉದ್ಯಮದಾರರಿಗಿದೆ. ಇನ್ನೂ ಹೆಚ್ಚು ಸ್ವಾತಂತ್ರ್ಯ ನೀಡಬೇಕೆಂಬುದು ಅವರ ಬೇಡಿಕೆಯಾಗಿದೆ. ಹೀಗಾಗಿ ಕೆಲಸ ಕಳೆದುಕೊಳ್ಳುವ ತೂಗುಕತ್ತಿಯ ಕೆಳಗೆ ಅವರು ದುಡಿಯ ಬೇಕಾಗುತ್ತದೆ. ಉದ್ಯೋಗಿಗಳ ಸಂಘವನ್ನು ಅವರಿಗೆ ಕಟ್ಟಿಕೊಳ್ಳಲು ಅವಕಾಶವಿಲ್ಲ.

ಈ ಎಲ್ಲ ಅಂಶಗಳನ್ನು ಗಮನಿಸಿದರೆ ಆ ಉದ್ಯಮಿಗಳಿಗೆ ಹಣ ಗಳಿಸಿ ಗ್ರಾಹಕತೆ ಹೆಚ್ಚಿಸಿಕೊಳ್ಳುವ ಅವಕಾಶಗಳನ್ನು ಬಿಟ್ಟರೆ, ಕೆಲಸಗಾರರ ಅಸಹಾಯಕತೆಯು ಬೇರೆ ಉದ್ಯೋಗಿಗಳಿಗಿಂತ ಅತಿ ಹೆಚ್ಚಿನ ಮಟ್ಟದ್ದು (ಇದಕ್ಕೆ ಅಪವಾದಗಳಿರಲಿಕ್ಕೂ ಸಾಕು). ಆದರೆ ಅಂಕಿ-ಅಂಶಗಳ ಪ್ರಕಾರ, ವಿವಾಹ ವಿಚ್ಛೇದನಗಳು ಹಾಗೂ ಆತ್ಮಹತ್ಯೆ ಪ್ರಕರಣಗಳು, ಹೆಚ್ಚು ಹಣ ಗಳಿಸುವ ಈ ದುಡಿಮೆಗಾರರಲ್ಲೇ ಏಕೆ ಬಹಳವಾಗಿದೆ ? ಅವೇಳೆಯಲ್ಲಿ ಗಂಡು-ಹೆಣ್ಣು ಒಟ್ಟಿಗೆ ದುಡಿಯಬೇಕಾದಾಗ ಅನೈತಿಕತೆಗೂ ಆಸ್ಪದವಾಗುವುದೆಂಬುದನ್ನು ಗಮನಿಸಬೇಕು. ಆಗಿದೆಯೆಂದಲ್ಲ, ಆಗಬಹುದು ಎಂದು.

ಇನ್ನು ಈ ಉದ್ಯಮದ ಹೊರಗಿನವರಿಗೂ ಅಸಹಾಯಕತೆ ಹೆಚ್ಚಳವಾಗಿರುವುದು ಸಹಜವೇ. ಕಂಪ್ಯೂಟರ್ ಉದ್ಯಮದ ಮಾದರಿಯಲ್ಲಿಯೇ ಇತರ ಕೈಗಾರಿಕೆಗಳೂ ಲಾಭ ಗಳಿಸಬೇಕೆಂಬ ಒತ್ತಡ ಒಂದೆಡೆ. ಕಂಪ್ಯೂಟರ್ ಉದ್ಯೋಗಿಗಳ ಅಧಿಕ ಸಂಬಳದೊಡನೆ ಸ್ಪರ್ಧಿಸಿ ಸಹಬಾಳ್ವೆ ನಡೆಸಲಾಗದೆ ತತ್ತರಿಸುತ್ತಿರುವ ಕೂಲಿಗಳು, ಕಾರ್ಮಿಕರು ಹಾಗೂ ಸರ್ಕಾರಿ ಉದ್ಯೋಗದವರು ಭ್ರಷ್ಟಾಚಾರದ ಹಾದಿ ಹಿಡಿಯುತ್ತಿರುವುದು ಕೆಲವೊಂದು ಗೋಚರ ಪರಿಣಾಮಗಳು. ಈಗ ಹೇಳಿ, ಈ ನಾಗರಿಕತೆಯ ಪರಿಣಾಮವಾಗಿ ಅಸಹಾಯಕತೆ ಕಡಿಮೆ ಆಗಿದೆ ಎಂದು ನಿಮಗನಿಸುವುದೇ ?

ಗುಲಾಮರಿಗೆ ಸ್ವತಂತ್ರವಾದ ಅಸ್ಮಿತೆ ಇರಲಿಲ್ಲ, ಅವರು ಆಸ್ತಿ ಮಾಡುವಂತಿರಲಿಲ್ಲ, ಅವರಿಗೆ ಭೋಗ ಸಾಮಗ್ರಿಗಳನ್ನು ಬಳಕೆಮಾಡಲು ಅವಕಾಶವಿರಲಿಲ್ಲ. ಈ ಕ್ಷೇತ್ರಗಳಲ್ಲಿ ಕೊಂಚ ಸುಧಾರಣೆ ಆಗಿರುವುದು ನಿಜವಾದರೂ 'ಅಸಹಾಯಕತೆ'ಯ ಅಳಲು ಮುಂದು ವರೆದುಕೊಂಡೇ ಬಂದಿದೆ.

ಯಜಮಾನ ಒಬ್ಬ ವ್ಯಕ್ತಿಯಾಗಿದ್ದಾಗಲಾದರೂ ಅವನನ್ನು ಮಟ್ಟಹಾಕಬಹುದಿತ್ತು. ಇಲ್ಲವೆ ಮನಃ ಪರಿವರ್ತನೆ ಮಾಡಬಹುದಾಗಿತ್ತು. ಆದರೆ ಈಗಿನ ಕಾರ್ಪೊರೇಟ್ ವಲಯದೊಂದಿಗೆ ಗುರುತಿಸಿಕೊಂಡವರಿಗೆ ಯಜಮಾನ ಒಬ್ಬ ವ್ಯಕ್ತಿಯಲ್ಲ; ಬದಲಿಗೆ ಒಂದು ಸಂಸ್ಥೆ. ಅದರ ಧೋರಣೆ ಪರಿವರ್ತನೆ ಮಾಡುವುದು ಯಾರಿಂದಲೂ ಕಷ್ಟಸಾಧ್ಯವೇ ಸರಿ. ತನ್ನ ಮನ್ನಣೆಯನ್ನು ಕಾರ್ಪೊರೇಟ್ ಸಂಸ್ಥೆಯ ಉದ್ಯೋಗಿ ಅವನ ಸಂಸ್ಥೆಯಲ್ಲಿ ವಿಲೀನಗೊಳಿಸಿ ಆ ಸಂಸ್ಥೆಯ ಮೂಲಕವೇ ಪಡೆಯ ಬೇಕೇ ವಿನಾ ಆ ಸಂಸ್ಥೆಯಿಂದ ಹೊರಬಂದದ್ದೇ ಆದರೆ ಅವನಿಗೆ ಯಾವ ಮನ್ನಣೆಯೂ ಇರದು. ಹೀಗಾಗಿ ತನ್ನನ್ನು ಸಂಸ್ಥೆಯಿಂದ ಪ್ರತ್ಯೇಕಗೊಳಿಸಿಕೊಳ್ಳಲಾಗದ ಅಸಹಾಯಕತೆಗೆ ಉದ್ಯೋಗಿಯನ್ನು ದೂಡಿ, ಉದ್ಯೋಗದಾತನಿಗೆ ನೇಮಿಸಿಕೊಳ್ಳುವ ಇಲ್ಲವೆ ಕಿತ್ತೊಗೆಯುವ ಸ್ವಾತಂತ್ರ್ಯ ನೀಡಿದರೆ ಅಸಹಾಯಕತೆ ಹಾಗೂ ಅನಿಶ್ಚಿತತೆಯ ಅಳುಕು ಅವನನ್ನು ಕಾಡದಿರುವುದೇ ?

ಕೌಟುಂಬಿಕ ಹೊಣೆಗಾರಿಕೆಯೇ ಹೆಣ್ಣುಮಕ್ಕಳಿಗೆ ಒಂದು ಸಂಕೋಲೆ ಎಂದೆಲ್ಲಾ ಹೇಳುತ್ತಲೇ ಕೌಟುಂಬಿಕ ಸಂಕೋಲೆಯ ಜೊತೆಜೊತೆಗೆ ಉದ್ಯೋಗದ ಅನಿಶ್ಚಿತತೆ, ಅವೇಳೆಯಲ್ಲಿ ದುಡಿಯುವುದು, ಅತ್ಯಾಚಾರದ ಆತಂಕ, ವಿವಾಹ ವಿಚ್ಛೇದನದ ಗುಮಾನಿಯಂತಹ ಸಂಕೋಲೆಗಳ ಕರಿನೆರಳಲ್ಲಿ ಬದುಕಬೇಕಾಗಿರುವಾಗ ಹೆಣ್ಣುಮಕ್ಕಳಿಗೆ ಈಚಿನ ದಿನಗಳಲ್ಲಿ ಅಸಹಾಯಕತೆ ಕಡಿಮೆ ಆಗಿದೆಯೇ ಆಲೋಚಿಸಿ. ಮಗುವು ತಂದೆತಾಯಿಗಳ ಪಾಲನೆ ಮತ್ತು ಆಸರೆಯನ್ನು ನಂಬಿ ನಿರಾಳವಾಗಿ ಆಟವಾಡುತ್ತಾ ಆನಂದದಿಂದಿರುತ್ತಿತ್ತು. 'ಮಗುವು ತಾಯ್ತಂದೆ ಕಣ್ಮುಂದೆ ನಡೆವಂತೆ ನಡೆ ಮಿಗೆ ಚಿಂತೆತಲೆಹರಣೆ ಮಂಕುತಿಮ್ಮ' ಎಂದು ಡಿವಿಜಿ ಬರೆಯುವಾಗ ಮಕ್ಕಳು ಯಾವ ಚಿಂತೆಯೂ ಇಲ್ಲದೆ ಮುಕ್ತವಾಗಿ ಆಟವಾಡುತ್ತಾ ಕಾಲಕಳೆಯಲು ಅವಕಾಶವಿದೆ ಎಂಬ ಗ್ರಹೀತವಿದೆ. ಆದರೆ, ಚಿಂತೆ, ಸಂತಾಪ ಅಸಹಾಯಕತೆ ಇಂದಿನ ಶಾಲಾ ಮಕ್ಕಳ ಮುಖದಲ್ಲಿ ತಾಂಡವನೃತ್ಯವಾಡುತ್ತಿದೆ.

ಹೆಚ್ಚಿಗೆ ಹಣ ಹೂಡಿ ಮಕ್ಕಳನ್ನು ಓದಿಸುವ ತಂದೆ–ತಾಯಿಗಳು, ಅವರ ಪರೀಕ್ಷೆಯ ಫಲಿತಾಂಶಗಳು ಉತ್ತಮವಾಗಿರಬೇಕೆಂದು ನಿರೀಕ್ಷಿಸುವುದು ಸಹಜ. ಅದಕ್ಕಾಗಿ ಮಕ್ಕಳನ್ನು ಹೆಚ್ಚು ಓದುವಂತೆ (ಆಟ ಆಡದಿದ್ದರೂ ಸರಿ) ಒತ್ತಡ ಹೇರುವುದು ಸಹಜ. ಅಂಕ ಗಳಿಸುವನೋ ಇಲ್ಲವೋ, ಅಧ್ಯಯನ ಕೈಗೊಳ್ಳಲು ಸೀಟು ದೊರೆವುದೋ ಇಲ್ಲವೋ, ಓದಿದ ಮೇಲೆ ಕೆಲಸ ಸಿಗುವುದೋ ಇಲ್ಲವೋ, ಸಿಕ್ಕ ಕೆಲಸಕ್ಕೆ ಅಂಟಿಕೊಳ್ಳುವುದು ಆಗುತ್ತದೋ ಇಲ್ಲವೋ – ಎಂಬೆಲ್ಲ ದ್ವಂದ್ವಗಳು ಹುಡುಗನ ಪ್ರತಿಭೆಯೊಂದರ ಮೇಲೇ ಅವಲಂಬಿಸಿ ಇರುವುದಿಲ್ಲ! ಇವೆಲ್ಲ ಅಂಶಗಳೂ ಅಸಹಾಯಕತೆಯನ್ನು ಮೀರಿಯೇ ತೀರಬೇಕೆಂಬ ಒತ್ತಡ ಹೇರುವುದರಲ್ಲಿ ಸಂದೇಹವೇ ಇಲ್ಲ.

ಸಿರಿವಂತರ ಸೌಕರ್ಯಗಳ ಸೆಳೆತಕ್ಕೆ ಒಳಗಾಗಿ, ಅವುಗಳಲ್ಲಿ ಕೆಲವು ಸೌಲಭ್ಯಗಳನ್ನು ಅನುಭವಿಸುತ್ತಿದ್ದರೂ, ಸುಡುತ್ತಿರುವ ನಾನಾ ಚಿಂತೆಗಳ ಬಾಧೆಯನ್ನು ನಾವು ನೀವೆಲ್ಲರೂ ಅನುಭವಿಸುತ್ತಿದ್ದೇವೆ.

ನಿರ್ಗತಿಕರು, ನಿವೃತ್ತರು, ನಿರುದ್ಯೋಗಿಗಳು, ರೋಗಿಗಳು, ಪರಿತ್ಯಕ್ತರು (ಗಂಡ/ಹೆಂಡತಿ/ಮಕ್ಕಳಿಂದ) ಬಹಿಷ್ಕೃತರುಗಳ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ.

ಅನುಕೂಲಗಳು ಅಲ್ಪಸ್ವಲ್ಪ ದಕ್ಕಿದರೂ ಅಸಹಾಯಕತೆಯ ಆಕ್ರಂದನವನ್ನು ನಾವೆಲ್ಲರೂ ಮಾಡುತ್ತಲೇ ಇದ್ದೇವೆ. ಆಕ್ರಂದನದ ಅಬ್ಬರ ಮುಗಿಲು ಮುಟ್ಟುತ್ತಿದೆ. ನಾವು ಮಾತ್ರ ಈ ಗದ್ದಲದ ನಡುವೆ ಜಾಣ ಕಿವುಡರಂತೆ ಇತರರಿಗಿಂತ ನಾವೆಷ್ಟೋ ವಾಸಿ ಎಂದು ನಂಬಲು ಹಾಗೆಂದು ಇತರರನ್ನು ನಂಬಿಸಲು ನಿರಂತರ ವ್ಯರ್ಥ ಪ್ರಯತ್ನದಲ್ಲಿ ನಿರತರಾಗಿದ್ದೇವೆ.

ಈ ಎಲ್ಲ ಆತಂಕಗಳಿಗೆ ಅಂತಕನಲ್ಲದೆ ಬೇರೆ ಪರಿಹಾರಗಳುಂಟೆ? ಇಷ್ಟೆಲ್ಲಾ ಅನಾಹುತಗಳು ಪ್ರಗತಿಯ ಹೆಸರಿನಲ್ಲಿ ಅಥವಾ ಪರಿಣಾಮವಾಗಿ ಆದರೂ ಪ್ರಗತಿ ಎಂದಕೂಡಲೇ ಮಂತ್ರಮುಗ್ಧವಾಗುವುದೇಕೆ ? – ಆಲೋಚಿಸಿ.

**ಪ್ರೊ॥ ಎಮ್. ಆರ್. ನಾಗರಾಜು**
ಎಫ್–೩, ಎಸ್. ಎಫ್. ಎಸ್. ನಿವಾಸಗಳು, ೭ನೇ ಬಿ. ಅಡ್ಡರಸ್ತೆ
ಯಲಹಂಕ ಉಪನಗರ, ಬೆಂಗಳೂರು–೫೬೦ ೦೬೪

# ವಿದ್ಯೆಗೆ ಮಹತ್ವ ಅಳಿಯುವುದು ಪಶುತ್ವ




ವಿದ್ಯೆ ಇಲ್ಲದವನು ಹದ್ದಿಗಿಂತ ಕಡೆ, ವಿದ್ಯೆಯೇ ತಾಯಂದೆ, ಬುದ್ಧಿಯೇ ಸಹೋದರ, ವಿದ್ಯೆಗೆ ಕೊನೆಯಿಲ್ಲ, ಬುದ್ಧಿಗೆ ಬೆಲೆಯಿಲ್ಲ, ವಿದ್ಯೆಗೆ ಆದಿಯುಂಟು ಅಂತ್ಯವಿಲ್ಲ ಎಂಬಿತ್ಯಾದಿ ನಾಣ್ನುಡಿಗಳನ್ನು ಕೇಳಿದಾಗ ವಿದ್ಯೆಗಿರುವ ಮಹತ್ವ ತಿಳಿಯುತ್ತದೆ. ಯಾರಿಗೆ ವಿದ್ಯೆಯನ್ನು ಕಲಿಯಲು ಆಸೆಯಿಲ್ಲವೋ ಅವರ ಆಯಸ್ಸು ಮುಗಿದಂತೆಯೇ ಸರಿ. ವಿದ್ಯಾಭ್ಯಾಸವು ತಾರುಣ್ಯಕ್ಕೆ ಸಂಸ್ಕಾರದ ಶೋಭೆಯನ್ನು, ವಯಸ್ಸಾದವರಿಗೆ ಆತ್ಮ ಸಂತೃಪ್ತಿಯನ್ನು, ಬಡವರಿಗೆ ಶ್ರೀಮಂತಿಕೆಯನ್ನು, ಯುವಕರಿಗೆ ಜಾಣತನವನ್ನು ಹಾಗೂ ಜೀವನದಲ್ಲಿ ಜಾಗೃತಿಯನ್ನು ತಂದು ಕೊಡುತ್ತದೆ. ಅಮೃತಶಿಲೆಯಲ್ಲಿ ಆಶ್ಚರ್ಯಕರವಾದ ಹಾಗೂ ಅದ್ಭುತವಾದ ಸುಂದರ ಶಿಲ್ಪವನ್ನು ಕಂಡರಿಸಿದಂತೆ, ಪ್ರಕೃತಿಯನ್ನು ಕಾವ್ಯ ಮತ್ತು ಚಿತ್ರದಲ್ಲಿ ಹಿಡಿದಿಡುವಂತೆ ಇಡಿಯಾದ ವಿದ್ಯಾಭ್ಯಾಸವು ಮನುಷ್ಯನಿಗೆ ಜೀವನಪೂರ್ತಿ ಆತ್ಮಾಭಿಮಾನವನ್ನು ನೀಡುವುದು. ಜೀವನವನ್ನು ಅರಿವಿನತ್ತ ಕೊಂಡೊಯ್ಯಲು ಮತ್ತು ಮಾನವೀಯ ಮೌಲ್ಯಗಳನ್ನು ವಿಸ್ತರಿಸಲು ವಿದ್ಯೆ ತುಂಬ ಸಹಕಾರಿಯಾಗಿದೆ. ವಿದ್ಯೆಯು ವ್ಯಕ್ತಿತ್ವವನ್ನು ವ್ಯಷ್ಟಿಯಿಂದ ಸಮಷ್ಟಿಯ ಕಡೆಗೆ ಸಂಚರಿಸುವುದನ್ನು ಕಲಿಸುವುದಲ್ಲದೆ ಆಂತರಿಕ ಜ್ಞಾನವನ್ನು ಅತ್ಯುನ್ನತ ಸ್ಥಾನಕ್ಕೆ ಹೆಚ್ಚಿಸುತ್ತದೆ.

ವಿದ್ಯೆಯಿಂದ ಅಜ್ಞಾನ, ಅಂಧಕಾರ, ಅಹಂಕಾರ, ಅಂಧಾನುಕರಣೆ, ಅಸಮರ್ಥತೆ, ಸ್ವಾರ್ಥ, ಗರ್ವ, ಕೋಪ, ಮೂಢನಂಬಿಕೆ, ಮೋಸ, ವಂಚನೆ, ಸುಳ್ಳು ಮುಂತಾದ ನೂರಾರು ಕೆಟ್ಟ ಗುಣಗಳು ನಿರ್ನಾಮವಾಗುತ್ತವೆ.

ವಿದ್ಯೆಯುಳ್ಳವನ ಮುಖವು ಮುದ್ದು ಬರುವಂತಿಕ್ಕು
ವಿದ್ಯೆಯಿಲ್ಲದವನ ಮುಖವು ಹಾಳೂರು
ಹದ್ದಿನಂತಿಕ್ಕು ಸರ್ವಜ್ಞ।

ವಿದ್ಯೆಯೆನ್ನುವುದು ಮನುಷ್ಯನಿಗೆ ಪ್ರೀತಿ-ವಿಶ್ವಾಸಗಳನ್ನು ಉಕ್ಕಿಸುವಂಥದು ಮತ್ತು ಮುಖದಲ್ಲಿ ಸೌಂದರ್ಯ-ಕಾಂತಿಯನ್ನುಂಟುಮಾಡುವಂಥದು; ಅಂತಹ ವಿದ್ಯೆ ಯಾರಲ್ಲಿ ಇರುವುದಿಲ್ಲವೋ ಅವರ ಮುಖವು ಹಾಳೂರಿನ ಹದ್ದಿಗೆ ಸಮವೆಂದು ಸರ್ವಜ್ಞ ಕವಿಯು ಛೇಡಿಸಿದ್ದಾನೆ.

ವಿದ್ಯೆಯು ಯಾವ ಸಂದರ್ಭದಲ್ಲಿ, ಯಾರೊಡನೆ, ಎಲ್ಲಿ, ಹೇಗೆ, ಯಾವಾಗ, ಎಂಥ ಹೊತ್ತಿನಲ್ಲಿ ಸ್ಪಂದಿಸಬೇಕೆಂಬ ಸೂಕ್ಷ್ಮ ಗುಣವನ್ನು ಹಾಗೂ ವಿನಯವಂತಿಕೆಯನ್ನು, ನೀತಿ ಸಂಹಿತೆಯನ್ನು ಕಲಿಸಿಕೊಡುತ್ತದೆ. ಫಲವತ್ತಾದ ಮಣ್ಣು ಹಾಗೂ ಗೊಬ್ಬರದಿಂದ ಬೀಜವು ಗಿಡವಾಗಿ, ಮರವಾಗಿ, ಹೆಮ್ಮರವಾಗಿ ಹೇಗೆ ಬೆಳೆಯಲ್ಪಡುತ್ತದೆಯೋ ಹಾಗೆಯೇ ಮನುಷ್ಯರು ವಿದ್ಯಾರ್ಜನೆಯಿಂದ ಉತ್ತಮ ಸಂಸ್ಕಾರ, ಸಂಸ್ಕೃತಿಯಿಂದ ನಾಲ್ಕೂ ನಿಟ್ಟಿನಲ್ಲಿ ಕೀರ್ತಿಶಾಲಿಗಳಾಗುತ್ತಾರೆ. ಕೆಲವರಲ್ಲಿ ಸಾಕಷ್ಟು ಸಂಪತ್ತು ಇರುತ್ತದೆ, ವಿದ್ಯೆ ಇರುವುದಿಲ್ಲ ಅಥವಾ ವಿದ್ಯೆ ಇರುತ್ತದೆ, ಸಂಪತ್ತು ಇರುವುದಿಲ್ಲ, ಅಂದರೆ ಸಂಪತ್ತು ದಿನದಿನಕ್ಕೂ ಕರಗುವಂಥದ್ದು. ಆದರೆ ವಿದ್ಯೆಯೆಂಬುದು ದಿನದಿನಕ್ಕೂ ವಿಕಾಸವಾಗಿ ಸಮೃದ್ಧಿಯಾಗಿ ಬೆಳೆಯುವಂಥದ್ದು. ಅದೇ ರೀತಿ ಕೆಲವರಲ್ಲಿ ಸಂಪತ್ತು ಅಪಾರವಾಗಿರುತ್ತದೆ. ಅದನ್ನು ಸರಿಯಾದ ರೀತಿ-ನೀತಿಯಲ್ಲಿ ಬಳಸುವುದರಲ್ಲಿ, ವ್ಯವಹರಿಸುವುದರಲ್ಲಿ, ವೆಚ್ಚ ಮಾಡುವುದರಲ್ಲಿ ಕ್ರಮಬದ್ಧತೆ ಇರುವುದಿಲ್ಲ. ಅದೆಲ್ಲಾ ''ಮಂಗನ ಕೈಯಲ್ಲಿ ಮಾಣಿಕ್ಯ'' ಇದ್ದ ಹಾಗೆಯೇ ಸರಿ. ಆದ್ದರಿಂದ ಒಳ್ಳೆಯ ತಿಳುವಳಿಕೆಯುಳ್ಳ ವಿದ್ಯೆ ಗೊತ್ತಿದ್ದರೆ ಅಂತಹ ಮಹತ್ವವಾದ ವಿದ್ಯೆ-ಬುದ್ಧಿಗಳಿಂದ ಇರುವ ಅಭೂತಪೂರ್ವವಾದ ಸಂಪತ್ತನ್ನು ತಕ್ಕ ರೀತಿ-ನೀತಿಗಳಲ್ಲಿ ಉಪಯೋಗ ಕಂಡುಕೊಳ್ಳಬಹುದು.

ಮಾನವನಿಗೆ ತನ್ನ ಬಹಿರಂಗದ ಲೋಪ-ದೋಷಗಳನ್ನು ತಿದ್ದಿಕೊಳ್ಳಲು ಸ್ವಚ್ಛವಾದ ಕನ್ನಡಿ ಹೇಗೆ ಮುಖ್ಯವೋ ಅಂತರಂಗದ ಪಶುತ್ವ ಗುಣಗಳನ್ನು ಹೋಗಲಾಡಿಸಿಕೊಳ್ಳಲು ವಿದ್ಯೆಯೆಂಬ ಉತ್ತಮ ಸಂಸ್ಕಾರ ಅತ್ಯಗತ್ಯ. ನಮ್ಮೊಳಗೆ ವಿದ್ಯೆ ಹೆಚ್ಚಾದಷ್ಟೂ ಅಜ್ಞಾನದ ಮಟ್ಟ ಕಡಿಮೆಯಾಗುತ್ತಾ ಹೋಗುತ್ತದೆ. ಆದ್ದರಿಂದ ''ಜ್ಞಾನದಾ ಬಲದಿಂದ ಅಜ್ಞಾನದ ಕೇಡು ನೋಡಯ್ಯಾ, ಜ್ಯೋತಿಯಾ ಬಲದಿಂದ ತಮಂಧದ ಕೇಡು ನೋಡಯ್ಯಾ'' ಎಂದು ಅಲ್ಲಮಪ್ರಭುದೇವರು ವಚನದಲ್ಲಿ ನುಡಿದಿದ್ದಾರೆ.

ವಿದ್ಯೆಯು ಮಾತೆಯಂತೆ ನಿಸ್ವಾರ್ಥದಿಂದ ಸಲಹುತ್ತದೆ, ತಂದೆಯಂತೆ ಹಿತವಾದುದರಲ್ಲಿ ನಿಯೋಜಿಸುತ್ತದೆ, ಕಾಂತೆಯಂತೆ ಖೇದವನ್ನು ಹೋಗಲಾಡಿಸಿ ಸಂತೋಷ ಪಡಿಸುತ್ತದೆ, ಸೂರ್ಯನಂತೆ ನಾಲ್ಕೂ ದಿಕ್ಕುಗಳಿಗೂ ಕೀರ್ತಿಯನ್ನುಂಟುಮಾಡುತ್ತದೆ, ಚಂದ್ರನಂತೆ ಬೆಳದಿಂಗಳ ಹುಮ್ಮಸ್ಸು-ಉತ್ಸಾಹಗಳನ್ನು ಹೆಚ್ಚಿಸುತ್ತದೆ. ಒಟ್ಟಾರೆಯಾಗಿ ವಿದ್ಯೆಯೆಂಬುದು ಕಾಮಧೇನು-ಕಲ್ಪವೃಕ್ಷವಿದ್ದಂತೆ. ಇಂತಹ ಅಭೂತಪೂರ್ವ ವಿದ್ಯೆಯ ಬಗ್ಗೆ ಇರುವ ಉಪದೇಶವೊಂದು ಹೀಗಿದೆ :

ವಿದ್ಯಾ ದದಾತಿ ವಿನಯಂ ವಿನಯಾದ್ಯಾತಿ ಪಾತ್ರತಾಂ
ಪಾತ್ರತ್ವಾದ್ಧನವಾಪ್ನೋತಿ ಧನಾದ್ಧರ್ಮಂ
ತತಃ ಸುಖಂ॥

ವಿದ್ಯೆಯು ವಿನಯವನ್ನು, ಯೋಗ್ಯತೆಯನ್ನು, ಧನವನ್ನು, ಧರ್ಮವನ್ನು ಕೊನೆಯಲ್ಲಿ ಹೆಚ್ಚಿನ ಸುಖ-ಸಂತೋಷಗಳನ್ನು ಕೊಡುತ್ತದೆ. ಯಾವ ವ್ಯಾಸಂಗದಿಂದ ಒಳ್ಳೆಯ ಶೀಲ ಸಾಮರ್ಥ್ಯಗಳು ನಮ್ಮಲ್ಲಿ ಬೆಳೆಯಲ್ಪಡುತ್ತವೆಯೋ, ಮಾನಸಿಕ ಶಕ್ತಿ ವೃದ್ಧಿಯಾಗುವುದೋ, ಬುದ್ಧಿ ವಿಕಾಸವಾಗಿ ವಿಶಾಲವಾಗುವುದೋ, ತನ್ನ ಕಾಲ ಮೇಲೆ ತಾನೇ ನಿಲ್ಲಬಲ್ಲ ಶಕ್ತಿ ಕೊಡಲ್ಪಡುತ್ತದೆಯೋ ಅದುವೇ ಶುದ್ಧ-ಸಿದ್ಧ-ಸಂಪೂರ್ಣ ವಿದ್ಯೆಯಾಗಿರುತ್ತದೆ. 'ಆಲಸ್ಯಂ ಅಮೃತಂ ವಿಷಂ' ಎಂಬಂತೆ ಆಲಸ್ಯ, ಮದ, ಮೋಹ, ಮತ್ಸರ, ಚಂಚಲತೆಗಳನ್ನು ಹೋಗಲಾಡಿಸುವ ಮತ್ತು ಸ್ಥಿತಪ್ರಜ್ಞೆ, ಅಭಿಮಾನ, ನಿಸ್ವಾರ್ಥ, ಪ್ರೀತಿ-ವಿಶ್ವಾಸಗಳನ್ನು ತಂದೊಡ್ಡುವ ವಿಶಿಷ್ಟ ಸಿಂಹಶಕ್ತಿ ನಿಜವಾಗಿಯೂ ವಿದ್ಯೆಯಲ್ಲಿ ಕಂಡುಬರುತ್ತದೆ.

ವಿದ್ಯೆ ಕಲಿಯುವಾಗ ಚಂಚಲತೆಯಿರಬಾರದು, ಹಣದ ಮೋಹವಿರಬಾರದು, ಇತರರನ್ನು ಗರ್ವದಿಂದ ಆಳೆಯಬಾರದು, ತಾನೇ ಶ್ರೇಷ್ಠನೆಂಬ ಅಹಂಕಾರಗಳಿರಬಾರದು. ಸರಿಯಾದ ವಯಸ್ಸಿನಲ್ಲಿ, ಸರಿಯಾದ ಸಮಯದಲ್ಲಿ, ಸಮಪ್ರಮಾಣದಲ್ಲಿ ವಿದ್ಯಾರ್ಜನೆ ಮಾಡಬೇಕು. ಪ್ರಕೃತಿಯಲ್ಲಿ ಮೋಡದಿಂದ ಬಿದ್ದ ಹನಿಹನಿ ನೀರು ಮೊದಲಿಗೆ ಸಣ್ಣ ಪ್ರಮಾಣದಲ್ಲಿ ಹರಿಯುತ್ತಾ ನದಿಯನ್ನು ಸೇರಿ ನಂತರ ಕಡಲಲ್ಲಿ ಒಂದಾಗುವಂತೆಯೇ, ಹಂತಹಂತದಲ್ಲಿ ವಿದ್ಯೆಯನ್ನು ಆಸ್ವಾದಿಸುತ್ತಾ ಉನ್ನತ ಮಟ್ಟದ ವಿದ್ಯೆಗಳಿಗೊಳಗಾಗಿ ಆಂತರಿಕ ಜ್ಞಾನವನ್ನು ಪಡೆದು ಶಾಂತಿ-ಸಮಾಧಾನಗಳನ್ನು ಪಡೆದುಕೊಳ್ಳಬೇಕು. ಒಟ್ಟಾರೆ ವಿದ್ಯೆಯೆಂಬ ಮಹತ್ವವು ಅರಿವಿಗೆ ಬಂದಾಗ ನಮ್ಮೊಳಗಿರುವ ಪಶುತ್ವದ ಗುಣಗಳು ತಾನೇ ತಾನಾಗಿ ಬಯಲಾಗುವುದರಲ್ಲಿ ಸಂದೇಹವಿಲ್ಲ. ಅದಕ್ಕಾಗಿ ಏಕೋಭಾವ, ಅಭಿಮಾನ, ವಿಶ್ವಾಸ, ಆತ್ಮೀಯತೆಯ ಗುಣಗಳು ಬೇಕೇ ಬೇಕು. ದ್ವೇಷದ ಕಿಡಿ ಹೊತ್ತಿಸುವ 'ವಿದ್ಯೆ' ವಿದ್ಯೆಯಲ್ಲ.

**ಡಾ॥ ರಾಜಶೇಖರ ಜಮದಂಡಿ**
ಅಧ್ಯಾಪಕರು, ಜೆಎಸ್ಎಸ್ ಸ್ನಾತಕೋತ್ತರ ವಿಭಾಗ, ಜೋಡಿರಸ್ತೆ
ಚಾಮರಾಜನಗರ - ೫೭೧ ೩೧೩







# ಶ್ರೀ ಬಾಬು ಜತ್ತಕರ್

೧೯೬೫ರಲ್ಲಿ ಜಮಖಂಡಿಯಲ್ಲಿ ಜನಿಸಿದ ಶ್ರೀ ಬಾಬು ಜತ್ತಕರ್ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಕಲಾ ಶಿಕ್ಷಣ ಪಡೆದವರು.

ರೇಖಾಚಿತ್ರ, ವರ್ಣಚಿತ್ರ, ಶಿಲ್ಪ-ಹೀಗೆ ಕಲೆಯ ಎಲ್ಲ ಪ್ರಕಾರಗಳಲ್ಲಿ ಪರಿಶ್ರಮ. ಹಲವು ಕಲಾ ಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ. ಜಪಾನಿನ ಕಲಾವಿದ ಶಿನ್ ಕಿತಮೂರ್ ಜೊತೆಗೆ ರೇಖಾ ಮತ್ತು ವರ್ಣಚಿತ್ರ ಕಮ್ಮಟದಲ್ಲಿ ಭಾಗವಹಿಸಿದ್ದಾರೆ. ಏಡ್ಸ್ ತಡೆ, ತಂಬಾಕು ನಿಷೇಧ, ಕ್ಯಾನ್ಸರ್, ರಕ್ತದಾನ, ಸಾಮಾಜಿಕ ಅರಣ್ಯ, ವನ್ಯಜೀವಿ ರಕ್ಷಣೆ, ಮಾಲಿನ್ಯ ನಿಯಂತ್ರಣ - ಮುಂತಾದ ಅರಿವು ಮೂಡಿಸುವ ಹಲವು ಕಮ್ಮಟಗಳನ್ನು ನಡೆಸಿಕೊಟ್ಟಿದ್ದಾರೆ.

ಬಾಗಲಕೋಟೆಯಲ್ಲಿರುವ ಕೃಷ್ಣಾ ಮೇಲ್ದಂಡೆ ಪ್ರಾಯೋಜನೆಯ ಸಾಂಸ್ಕೃತಿಕ ವಿಭಾಗದಲ್ಲಿ ಫೋಟೋಗ್ರಾಫಿ ಮ್ಯೂಸಿಯಮನ್ನು ವಿನ್ಯಾಸಗೊಳಿಸಿ, ನಿರ್ಮಿಸಿಕೊಟ್ಟಿದ್ದಾರೆ.

ಇವರ ಕೃತಿಗಳು ಭಾರತದಲ್ಲಿ ಹಾಗೂ ಹೊರದೇಶಗಳ ಕಲಾ ಗ್ಯಾಲರಿಗಳಲ್ಲಿವೆ. ಖಾಸಗೆ ಸಂಗ್ರಹಗಳಲ್ಲಿವೆ. ಸದ್ಯ ಚಿತ್ರಕಲಾ ಪರಿಷತ್ತಿನ ಆನ್ವಯಿಕ ಕಲಾವಿಭಾಗದ ಶಿಕ್ಷಕರು ಮತ್ತು ಪ್ರಭಾರ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಶ್ರೀ ಜತ್ತಕರ್ ಪೆನ್ಸಿಲ್, ಫೈಬರ್ ಗ್ಲಾಸ್, ಅಕ್ರಿಲಿಕ್ - ಮಾಧ್ಯಮಗಳಲ್ಲಿ ರಚಿಸಿದ ಚಿತ್ರ ಕೃತಿಗಳನ್ನು ಇಲ್ಲಿ ಪ್ರಕಟಿಸಿದ್ದೇವೆ.

– ಚಿತ್ರ-ಲೇಖನ : **ಕೆ. ಪಿ. ಸ್ವಾಮಿ**









Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna

